# ಕರ್ನಾಟಕದ ಗ್ರಾಹಕ ವೇದಿಕೆಗಳು

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ

ಸಂಶೋಧಕರು
ಶ್ರೀಮತಿ ವ್ಹಿ. ಜೆ. ಕುಲಕರ್ಣಿ
ಸಹ ಪ್ರಾಧ್ಯಾಪಕರು, ವಾಣಿಜ್ಯ ವಿಭಾಗ
ಶ್ರೀಮತಿ ಎ. ಎ. ಪಾಟೀಲ ಮಹಿಳಾ ಮಹಾವಿದ್ಯಾಲಯ, ಚಿಕ್ಕೋಡಿ

ಮಾರ್ಗದರ್ಶಕರು
ಡಾ. ಸಿ. ಆರ್. ಗುಡಸಿ
ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ




೨೦೧೨



ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೨

540

# ಕರ್ನಾಟಕದ ಗ್ರಾಹಕ ವೇದಿಕೆಗಳು

ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ


ಸಂಶೋಧಕರು
ಶ್ರೀಮತಿ ವ್ಹಿ. ಜೆ. ಕುಲಕರ್ಣಿ
ಸಹ ಪ್ರಾಧ್ಯಾಪಕರು, ವಾಣಿಜ್ಯ ವಿಭಾಗ
ಶ್ರೀಮತಿ ಎ. ಎ. ಪಾಟೀಲ ಮಹಿಳಾ ಮಹಾವಿದ್ಯಾಲಯ, ಚಿಕ್ಕೋಡಿ

ಮಾರ್ಗದರ್ಶಕರು
ಡಾ. ಸಿ. ಆರ್. ಗುಡಸಿ
ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ





೨೦೧೨


ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೨

# ಪ್ರಮಾಣ ಪತ್ರ

**"ಕರ್ನಾಟಕದ ಗ್ರಾಹಕ ವೇದಿಕೆಗಳು"** – ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು **ಡಾ. ಸಿ. ಆರ್. ಗುಡಸಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ವಾಣಿಜ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ, ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದೇನೆ. ಈ ಪ್ರಬಂಧವನ್ನು ನಾನು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಹಾರೂಗೇರಿ

ದಿನಾಂಕ: /೦೩/೨೦೧೨

**ಶ್ರೀಮತಿ ವ್ಹಿ.ಜೆ. ಕುಲಕರ್ಣಿ**
ಶ್ರೀಮತಿ ಎ.ಎ. ಪಾಟೀಲ ಮಹಿಳಾ
ಮಹಾವಿದ್ಯಾಲಯ, ಚಿಕ್ಕೋಡಿ ಜಿಲ್ಲೆ
ಬೆಳಗಾವಿ

# ದೃಢೀಕರಣ ಪತ್ರ

**ಶ್ರೀಮತಿ ವ್ಹಿ. ಜೆ. ಕುಲಕರ್ಣಿ** ಇವರು **"ಕರ್ನಾಟಕದ ಗ್ರಾಹಕ ವೇದಿಕೆಗಳು"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದು, ಅಭಿವೃದ್ಧಿ ಅಧ್ಯಯನದ ವಿಭಾಗದಲ್ಲಿ ವಾಣಿಜ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಹಾರೂಗೇರಿಯ ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವರು. ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಹಾರೂಗೇರಿ

ದಿನಾಂಕ: /೦೩/೨೦೧೨

**ಡಾ. ಸಿ. ಆರ್. ಗುಡಸಿ**

ಮಾರ್ಗದರ್ಶಕರು
ಶ್ರೀ ಬಿ.ಆರ್. ದರೂರ
ಸಂಶೋಧನಾ ಕೇಂದ್ರ
ಹಾರೂಗೇರಿ ಜಿ. ಬೆಳಗಾವಿ

# ಕೃತಜ್ಞತೆ

ಉಪನ್ಯಾಸಕ ವೃತ್ತಿಯನ್ನು ಅವಲಂಬಿಸಿದ ಪ್ರತಿಯೊಬ್ಬರಿಗೂ ಗೊತ್ತಿದ್ದೊ, ಗೊತ್ತಿಲ್ಲದೆಯೆ ಸಂಶೋಧನೆಯ ಪ್ರವೃತ್ತಿ ಬೆಳೆಯುತ್ತಿರುತ್ತದೆ.ವೃತ್ತಿಗೆ ಅನುಗುಣವಾಗಿ ಹೊಸ ವಿಷಯಗಳನ್ನು ಅರಿತುಕೊಳ್ಳುವ ಮನೋಭಾವ ಉಪನ್ಯಾಸಕರಿಗೆ ಬೇಕಾಗುತ್ತದೆ. ಇದರಿಂದ ಹೊಸ ವಿಷಯಗಳ ಅಧ್ಯಯನದ ಅಭಿರುಚಿ ವೃತ್ತಿಯಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ. ವೃತ್ತಿಯಲ್ಲಿ ಉಪನ್ಯಾಸಕಿಯಾದ ನನಗೂ ಸಂಶೋಧನೆಯ ಗೀಳು ಹಿಡಿದಾಗ ವಾಣಿಜ್ಯ ವಿಭಾಗದಲ್ಲಿ ಹೊಸದಾಗಿ ಸೇರಿಸಲ್ಪಟ್ಟ ವಿಷಯದ ಕುರಿತು ಅಧ್ಯಯನ ಮಾಡಲು ಮನಸ್ಸು ಹಾತೊರೆಯ ತೊಡಗಿತು. ಇದನ್ನು ಕಾರ್ಯರೂಪದಲ್ಲಿ ತರುವ ಪ್ರಯತ್ನ ಮಾಡಿದಾಗ, ನನ್ನ ವೃತ್ತಿಬಾಂದವರು ನನಗೆ ಹಲವಾರು ಸಲಹೆಗಳನ್ನು ಕೊಟ್ಟರು. ಇತ್ತೀಚಿನ ಉಪನ್ಯಾಸಕ ವೃತ್ತಿಯಲ್ಲಿ ನನ್ನ ವಿದ್ಯಾರ್ಥಿಗಳಿಗೆ ಹೆಚ್ಚಿನದನ್ನು ಹೇಳಿಕೊಡುವ ನಿಟ್ಟಿನಲ್ಲಿ ಈ ಅಧ್ಯಯನ ಸಹಾಯ ಆಗುತ್ತದೆ ಎಂದು ತಿಳಿದುಕೊಂಡಿದ್ದೇನೆ.

ಅಧ್ಯಯನ ಕೈಗೊಳ್ಳುವ ಆಸೆಯನ್ನು ಇಡೇರಿಸಿಕೊಳ್ಳಲು ನನಗೆ ಸಹಾಯ ಮಾಡಿಕೊಟ್ಟಿದ್ದಕ್ಕೆ ನಾನು ಎಲ್ಲರಿಗೂ ಆಭಾರಿಯಾಗಿದ್ದೇನೆ.

ಡಾ. ಬಿ. ಆರ್. ದರೂರ ಸಂಶೋಧನಾ ಕೇಂದ್ರ ಹಾರೂಗೇರಿಯ ನಿರ್ದೇಶಕರಿಗೆ ಹಾಗೂ ಅಧಿಕಾರಿಗಳಿಗೆ ವಿಷೇಶವಾಗಿ ಅಭಿವೃದ್ಧಿ ಅಧ್ಯಯನದ ವಿಭಾಗಕ್ಕೆ, ನನಗೆ ಅಧ್ಯಯನ ಮಾಡಲು ಅನುವು ಮಾಡಿ ಕೊಟ್ಟಿದ್ದಕ್ಕೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಡಾ. ಸಿ. ಆರ್. ಗುಡಸಿಯವರ ಮಾರ್ಗ ದರ್ಶನದಲ್ಲಿ ನನಗೆ ಕೆಲಸ ಮಾಡಲು ಅನುಮತಿ ಕೊಟ್ಟಿದ್ದಕ್ಕೆ ನಾನು ಸಂಶೋಧನಾ ಕೇಂದ್ರದ ನಿರ್ದೇಶಕರಿಗೆ ತುಂಬಾ ಕೃತಜ್ಞಳಾಗಿದ್ದೇನೆ. ನನ್ನ ಸಂಶೋಧನೆಯ ಮಾರ್ಗದರ್ಶಕರಾದ ಡಾ. ಸಿ. ಆರ್. ಗುಡಸಿಯವರಿಗೆ, ಅವರ ಸ್ಪೂರ್ತಿದಾಯಕ ಹಾಗೂ ನಿರಂತರ ಪ್ರೋತ್ಸಾಹದಾಯಕ ಮಾರ್ಗದರ್ಶನಕ್ಕೆ, ನಾನು ತುಂಬಾ

ಆಭಾರಿಯಾಗಿದ್ದೇನೆ. ಅವರ ಮಾರ್ಗದರ್ಶನದಿಂದಲೆ ನಾನು ನನ್ನ ಅಧ್ಯಯನವನ್ನು ಪೂರ್ಣಗೊಳಿಸಿದ್ದೇನೆ. ಸಂಶೋಧನೆಯ ವಿಷಯದಲ್ಲಿ ಅವರಿಗೆ ಇರುವ ಅಭಿರುಚಿಯಿಂದಲೆ ನಾನು ಸ್ಫೂರ್ತಿಪಡೆದು ಮುಂಬರುವ ವರ್ಷಗಳಲ್ಲೂ ವಿಷಯದ ಕುರಿತು ಆಸಕ್ತಿ ವಹಿಸುತ್ತೇನೆ.

ಸಂಶೋಧನಾ ಕೇಂದ್ರದ ನಿರ್ದೇಶಕರಾದ ಡಾ. ವ್ಹಿ. ಎಸ್. ಮಾಳಿಯವರಿಗೆ, ಶ್ರೀ. ಗಟನಟ್ಟಿಯವರಿಗೆ ಹಾಗೂ ಉಳಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದ ಎಲ್ಲ ಮಾಹಿತಿಯನ್ನು ಒದಗಿಸಿದ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯ ಶಿರಸ್ತೆದಾರರಿಗೆ, ಅಧ್ಯಕ್ಷರಿಗೆ ಸದಸ್ಯರಿಗೆ ಹಾಗೂ ಉಳಿದ ಸಿಬ್ಬಂದಿಯವರಿಗೆ ನಾನು ತುಂಬಾ ಅಭಾರಿಯಾಗಿದ್ದೇನೆ.

ನಮ್ಮ ಸಿ.ಟಿ.ಇ ಸಂಸ್ಥೆಯ ಆಡಳಿತದ ಮಂಡಳಿಯವರಿಗೆ, ನಮ್ಮ ಮಹಾವಿದ್ಯಾಲಯದ ಪ್ರಾಚಾರ್ಯರಿಗೆ, ವೃತ್ತಿ ಬಾಂಧವರಿಗೆ ಹಾಗೂ ಶಿವಾನಂದ ಮಹಾವಿದ್ಯಾಲಯ ಕಾಗವಾಡದ ಡಾ. ಎಸ್. ಓ. ಹಲಸಗಿಯವರಿಗೆ, ಅವರ ಉಪಯುಕ್ತ ಸಲಹೆಗಳಿಗೆ ನಾನು ಚಿರಋಣಿಯಾಗಿದ್ದನೆ.

ನನ್ನ ಅಧ್ಯಯನಕ್ಕೆ ಉತ್ಸಾಹ ತುಂಬಿದ ನನ್ನ ಬಾಳಸಂಗಾತಿ ಶ್ರೀಯುತ ವೆಂಕಟೇಶ ವ್ಹಿ.ಪತಕಿ ಹಾಗೂ ನನ್ನ ಮಕ್ಕಳಾದ ಚಿ.ವೈಷ್ಣವಿ ಚಿ.ವಿವೇಕ ಹಾಗೂ ಸಹಕಾರ ನೀಡಿದ ಉಳಿದ ಕುಟುಂಬದ ಸದಸ್ಯರಿಗೆ ನನ್ನ ಕೃತಜ್ಞತೆಗಳು. ಅಚ್ಚು ಕಟ್ಟಾಗಿ ಅಕ್ಷರ ಸಂಯೋಜನೆ ಮಾಡಿದ ಮುದ್ರಣ ಮಾಡಿದ ವಸಂತ ಕಾಂಬಳೆಯವರಿಗೆ ವಂದನೆಗಳು.

ಚಿಕ್ಕೋಡಿ

ದಿನಾಂಕ: ವಿಜಯಲಕ್ಷ್ಮೀ ಕುಲಕರ್ಣಿ

# ಪರಿವಿಡಿ

# ಕೋಷ್ಟಕಗಳ ಪಟ್ಟಿ

# ಅಧ್ಯಾಯ –೧

## ಪ್ರವೇಶ

೧.೧ ಪ್ರಸ್ತಾವನೆ

೧.೨ ಗ್ರಾಹಕನ ಸಂರಕ್ಷಣೆಯ ಅಂಶಗಳು

೧.೩ ಉದ್ದೇಶಗಳು

೧.೪ ವ್ಯಾಪ್ತಿ

೧.೫ ಪರಿಮಿತಿಗಳು

೧.೬ ವಿಧಾನ

೧.೭ ಅಧ್ಯಯನದ ಸ್ವರೂಪ

## ಅಧ್ಯಾಯ – ೧

# ಪ್ರವೇಶ

### ೧.೧ ಪ್ರಸ್ತಾವನೆ

ನಾವೆಲ್ಲ ಒಂದಿಲ್ಲ ಒಂದು ರೀತಿ ಗ್ರಾಹಕರೆ. ಆದರೆ ಮಾರುಕಟ್ಟೆಯಲ್ಲಿ ಹಲವಾರು ಅನುಚಿತ ವ್ಯಾಪಾರಿ ಪದ್ಧತಿಯಿಂದ ನಡೆಯುವ ವ್ಯವಹಾರಗಳಿಂದ ಗ್ರಾಹಕ ಬಲಿಯಾಗುತ್ತಿದ್ದಾನೆ. ಹಲವಾರು ಬಾರಿ, ವಸ್ತುವಿನ ತೂಕದಿಂದ, ಬೆಲೆಯಿಂದ ಅಲ್ಲದೆ ಗುಣಮಟ್ಟದಿಂದ ಗ್ರಾಹಕ ವಂಚನೆಗೊಳಪಡುತ್ತಾನೆ. ಗ್ರಾಹಕ **ಮಾರುಕಟ್ಟೆಯ ರಾಜ** ಎನ್ನುವ ಪ್ರತೀತಿಗೆ ಅಪವಾದವಾಗಿದ್ದಾನೆ. ವಂಚನೆಯ ಇನ್ನೊಂದು ಮುಖವಾದ ಸರಿಯಾದ ಮಾಹಿತಿ ಇರದೆ ಮೋಸಕ್ಕೆ ಬಲಿಯಾಗುತ್ತಿದ್ದಾನೆ. ಆಧುನಿಕತೆಯ ಈ ಯುಗದಲ್ಲಿ ತಾಂತ್ರಿಕತೆಯಿಂದ ಸಿದ್ಧಪಡಿಸುವ ವಸ್ತುಗಳ ಲಕ್ಷಣಗಳನ್ನು ಗ್ರಾಹಕ ತಿಳಿದುಕೊಂಡಿರುವುದಿಲ್ಲ. ಗ್ರಾಹಕನಿಗೆ ನಿಜ ಜಗತ್ತಿನಲ್ಲಿ ಸಿಗುವ ವಸ್ತುವಿನ ಸಂಯುಕ್ತತೆಯಾಗಲಿ ಅವುಗಳ ವಿವಿಧತೆಯಾಗಲಿ ಗೊತ್ತಿರುವುದಿಲ್ಲ. ಯಾವಾಗ ವಸ್ತು ಗ್ರಾಹಕನ ಬೇಡಿಕೆಗೆ ಸ್ಪಂದಿಸುವ ಗುಣವನ್ನು ಕಳೆದುಕೊಂಡಿರುತ್ತದೆಯೋ ಮತ್ತು ವಸ್ತುವಿನಿಂದ ಅಪಾಯ ಒದಗುವ ಸಂಭವವಿರುತ್ತದೆಯೋ ಅಲ್ಲಿ ಗ್ರಾಹಕನಿಗೆ ರಕ್ಷಣೆಯ ಅವಶ್ಯವಿರುತ್ತದೆ.[೧] ಅದು ವ್ಯಕ್ತಿಗತ ಹೋರಾಟದಿಂದ ಅಸಾಧ್ಯವೆನಿಸಬಹುದು. ಅಂತಹ ಪ್ರಸಂಗಗಳಲ್ಲಿ, ಗ್ರಾಹಕ ರಕ್ಷಣಾ ವೇದಿಕೆಗಳು, ಯಾವ ರೀತಿಯಾಗಿ ವ್ಯಕ್ತಿಗಳ ಜೀವನದಲ್ಲಿ ಆಶಾಕಿರಣವಾಗಿ ಸಹಾಯಹಸ್ತ ನೀಡಿ, ನ್ಯಾಯ ಒದಗಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತವೆಂಬುದನ್ನು ತಿಳಿದುಕೊಳ್ಳುವುದು ಅವಶ್ಯವೆನಿಸುತ್ತದೆ. ಇದನ್ನು ಈ ಕೆಳಗಿನ ಕೆಲವು ಪ್ರಕರಣಗಳು ಮನವರಿಕೆ ಮಾಡಿಕೊಡುತ್ತವೆ.

**i) ಶಾಲಾ ವಸತಿಗೃಹ ಪಟಾಕಿ ಸಿಡಿತ – ವಿದ್ಯಾರ್ಥಿಗೆ ಗಾಯ. ರೂ. ೫೪೦೦೦/– ಪರಿಹಾರ – ಆಂಧ್ರ ರಾಜ್ಯ ಆಯೋಗ :**

ಶಿಕ್ಷಣ ವ್ಯಾಪಾರ ಈಗ ಎಲ್ಲೆಲ್ಲೂ ಕಾಡುತ್ತಿರುವ ಸಂಗತಿ, ವ್ಯವಹಾರಕ್ಕಿಳಿದಿರುವ ವಿದ್ಯಾಸಂಸ್ಥೆಗಳಿಂದ ನಿರಂತರ ವಿದ್ಯಾರ್ಥಿ ಶೋಷಣೆ ನಡೆಯುತ್ತಿದೆ. ಅಲ್ಲದೆ ವ್ಯವಸ್ಥಿತವಾದ ಸುರಕ್ಷಾ

ವ್ಯವಸ್ಥೆ ಕೂಡಾ ಇರುವುದಿಲ್ಲ. ವಿದ್ಯಾರ್ಥಿಗಳನ್ನು ಸುರಕ್ಷಿತವಾಗಿ ನೋಡಿಕೊಳ್ಳುವ ಜವಾಬ್ದಾರಿ ಕೂಡಾ ಈ ಸಂಸ್ಥೆಗಳಿಗಿರುವುದಿಲ್ಲ. ಇಂತಹದೊಂದು ಸ್ವಾರಸ್ಯಕರವಾದ ಪ್ರಕರಣ ದಾಖಲಾಗಿದೆ.

ಸಾಗಿ ಕೃಷ್ಣ ಚೈತನ್ಯ ಎಂಬ ಹತ್ತು ವರ್ಷದ ಹುಡುಗ, ವಿದ್ಯಾಸಾಗರ ಸ್ಕೂಲ್ ಎಂಬ ಆಂಗ್ಲ ಮಾಧ್ಯಮ ಶಾಲೆಗೆ ಸೇರ್ಪಡೆಗೊಂಡಿದ್ದ. ಆತನು ಶಾಲೆಯದ್ದೇ ಆದ ವಸತಿಗೃಹ ಸೇರಿಕೊಂಡಿದ್ದ. ರಜಾ ದಿನಗಳು ಆರಂಭವಾದವು. ಆದರೆ ಚೈತನ್ಯ ಮತ್ತು ಸ್ನೇಹಿತ ಕಿಶೋರ್ ಇಬ್ಬರೂ ವಸತಿ ಗೃಹ ಬಿಟ್ಟು ಹೋಗಲಿಲ್ಲ. ಹಾಗೆ ಉಳಿದುಕೊಳ್ಳುವ ವ್ಯವಸ್ಥೆ ಇತ್ತು. ಒಂದು ದಿನ ಒಬ್ಬ ಹುಡುಗ ಓಡುತ್ತಾ ಬಂದು ಮೇಲ್ವಿಚಾರಕರಿಗೆ, ಚೈತನ್ಯನಿಗೆ ಪಟಾಕಿ ಸಿಡಿದು ಗಾಯವಾಗಿದೆ ಎಂಬ ಸುದ್ದಿ ತಿಳಿಸಿದ. ಆತನಿಗೆ ವಿಪರೀತ ಗಾಯವಾಗಿತ್ತು. ಸುಟ್ಟ ಗಾಯದಿಂದ ನರಳುತ್ತಿದ್ದ, ಆತನನ್ನು ತಕ್ಷಣ ಆಸ್ಪತ್ರೆಗೆ ಒಯ್ಯಲಾಯಿತು. ಆತನ ಹೆತ್ತವರಿಗೂ ತಿಳಿಸಲಾಯಿತು. ಆಸ್ಪತ್ರೆಯಲ್ಲಿ ವಿಪರೀತ ಖರ್ಚಾಯಿತು. ಬಹಳ ಕಷ್ಟ ನಷ್ಟಗಳನ್ನು ಅನುಭವಿಸುವಂತಾಯಿತು.

ಚೈತನ್ಯನ ಹೆತ್ತವರು ಜಿಲ್ಲಾ ಗ್ರಾಹಕ ವೇದಿಕೆಗೆ ದೂರು ನೀಡಿ, ವಿದ್ಯಾಸಾಗರ ಶಿಕ್ಷಣ ಸಂಸ್ಥೆಯ ನಿರ್ಲಕ್ಷ್ಯದಿಂದ ತಮಗೆ ನಷ್ಟ ಮತ್ತು ಹಾನಿಯಾಯಿತೆಂದು ಆರೋಪಿಸಿ ಪರಿಹಾರ ಕೊಡಿಸಲು ಕೇಳಿಕೊಂಡರು. ವಸತಿಗೃಹದಲ್ಲಿರುವ ವಿದ್ಯಾರ್ಥಿಗಳ ಯೋಗಕ್ಷೇಮ ನೋಡಿಕೊಳ್ಳುವ ಹೊಣೆಗಾರಿಕೆ ಸಂಸ್ಥೆಗಿತ್ತು. ಅವರ ನಿರ್ಲಕ್ಷ್ಯದಿಂದಲೇ ತಮಗೆ ನಷ್ಟವಾಯಿತೆಂದೂ ತಿಳಿಸಿದ್ದರು.

ಆದರೆ ಶಿಕ್ಷಣ ಸಂಸ್ಥೆ ನಿರಾಕರಿಸಿತು. ವಸತಿ, ಊಟ ಎಲ್ಲಾ ಒದಗಿಸಿದ್ದೇವೆ. ಮೇಲ್ವಿಚಾರಣೆಯಲ್ಲೂ ಲೋಪವಿಲ್ಲ. ಪಟಾಕಿ, ಸುಡುಮದ್ದು ವಸತಿಗೃಹ ಪೂರೈಸಿಲ್ಲ. ಹುಡುಗನೆ ವೈಯಕ್ತಿಕವಾಗಿ ತಂದು ಸುಟ್ಟುಕೊಂಡರೆ, ತಾವು ಹೊಣೆಯಲ್ಲ. ಅದಕ್ಕೆ ವಿದ್ಯಾರ್ಥಿ ಚೈತನ್ಯನೆ ಹೊಣೆ ಹೊರತು ನಾವಲ್ಲ ಎಂದು ತಿಳಿಸಿತು. ಅಲ್ಲದೆ ಆತನಿಗೆ ಶುಲ್ಕದಲ್ಲೂ ವಿನಾಯತಿ ನೀಡಲಾಗಿದೆ. ಹಾಗಾಗಿ ಈ ಆರೋಪ ಸರಿಯಲ್ಲ. ಆತನಿಗಾದ ನಷ್ಟಕ್ಕೆ ನಾವು ಹೊಣೆಯಲ್ಲ ಎಂದೂ ವಾದಿಸಿದರು.

ಜಿಲ್ಲಾ ವೇದಿಕೆ, ಶಾಲೆಯ ಹೊಣೆಗಾರಿಕೆಯ ಮೇಲೆ ಗಮನ ಹರಿಸಿತು. ಹಣ ಪಾವತಿಸಿ, ಸಂಸ್ಥೆಗೆ ಸೇರ್ಪಡೆಯಾಗುವಾಗ, ವಿದ್ಯಾರ್ಥಿಗಳ ಕಲಿಕೆ ಮಾತ್ರವಲ್ಲ, ವಸತಿ ಸೌಕರ್ಯವಿದ್ದರೆ, ಸುರಕ್ಷಿತ ವಾಸವೂ, ಶಾಲೆಯ ಹೊಣೆಯಾಗಿದೆ. ವಸತಿಗೃಹದ ಒಳಗೆ ಯಾವುದೇ ಅಪಾಯಕಾರಿ ವಸ್ತುಗಳು ಕಂಡು ಬಂದರೆ ಅದಕ್ಕೆ ವಸತಿಗೃಹ ಹೊಣೆ. ಈ ಶಾಲೆಯೊಳಗೆ ಪಟಾಕಿ ಸುಡುಮದ್ದುಗಳು ಬಂದದ್ದು ಹೇಗೆ? ಅದಕ್ಕೆ ಅವಕಾಶ ಇತ್ತೇ? ಇಲ್ಲಿ ಶಾಲೆಯ ನಿರ್ಲಕ್ಷ್ಯ ಸ್ಪಷ್ಟವಾಗಿದೆ. ವಸತಿ ಇದ್ದರೆ, ಅವರ ಆರೋಗ್ಯ ರಕ್ಷಣೆಯ ಪೂರ್ಣ ಹೊಣೆ ಶಾಲೆಯದು. ಇದನ್ನು ನಿರಾಕರಿಸುವಂತಿಲ್ಲ ಎಂದು ವೇದಿಕೆ ತೀರ್ಮಾನಿಸಿತು. ಆತನ ಚಿಕಿತ್ಸಾ ವೆಚ್ಚ ರೂ. ೫೦,೦೦೦/- ಮತ್ತು ವ್ಯಾಜ್ಯ ವೆಚ್ಚ ರೂ. ೧೦೦೦/- ಹೀಗೆ ೫೧೦೦೦ ಪಾವತಿಸಲು ಆದೇಶಿಸಿತ್ತು.

ಇದರ ಮೇಲೆ ಶಾಲಾ ಸಂಸ್ಥೆಯು ಆಂಧ್ರ ಪ್ರದೇಶ ರಾಜ್ಯ ಗ್ರಾಹಕ ಆಯೋಗ ಹೈದರಾಬಾದಿಗೆ ಮೇಲ್ಮನವಿ ಸಲ್ಲಿಸಿತು. ದೂರಿನ ಮುಖ್ಯ ವಿಷಯ ಶಾಲೆಯು ಶಿಕ್ಷಣ ಸಂಸ್ಥೆಯಾಗಿದ್ದು ಸೇವಾ ಪೂರೈಕೆದಾರನಾಗಿ, ಗ್ರಾಹಕ ಕಾಯಿದೆಗೆ ಒಳಪಡುವುದೆ? ಶುಲ್ಕದಲ್ಲಿ ಭಾಗಶಃ ವಿನಾಯಿತಿ ಮಾಡಿರುವುದರಿಂದ ಗ್ರಾಹಕನಾಗುವನೇ? ರಿಯಾಯಿತಿ ಹೊರತಾಗಿಯೂ ವಿದ್ಯಾರ್ಥಿ ಶಾಲೆಗೆ ಶುಲ್ಕ ಪಾವತಿಸಿದ್ದಾನೆ. ಕಡಿಮೆ ಇರಲಿ, ಹೆಚ್ಚಾಗಿರಲಿ, ಹಣ ಪಾವತಿ ಆಗಿದೆ. ಹಾಸ್ಟೆಲ್‌ಗೂ ಹಣ ಪಾವತಿ ಆಗಿದೆ. ಹಣ ಕೊಟ್ಟು ಪಡೆವ ಯಾವ ಸೇವೆ ಆದರೂ ಅದು ಗ್ರಾಹಕ ಕಾಯ್ದೆ ವ್ಯಾಪ್ತಿಗೊಳಪಡುತ್ತದೆ. ಇದು ಖಾಸಗಿ ಸಂಸ್ಥೆ ಸರಕಾರದ ಸೌಲಭ್ಯಗಳಿಲ್ಲ. ಹಾಗಾಗಿ ಈ ಸಂಸ್ಥೆಯು ನೀಡುವ ಸೇವೆ ಗ್ರಾಹಕ ಸೇವಾ ವ್ಯಾಪ್ತಿಗೊಳಪಡುತ್ತದೆ. ವಿದ್ಯಾರ್ಥಿ ಹೆತ್ತವರು ಗ್ರಾಹಕರಾಗುತ್ತಾರೆ.

ಇನ್ನೊಂದು ವಿಚಾರ ವಸತಿಗೃಹದಲ್ಲಿ ವಿದ್ಯಾರ್ಥಿಗಳು, ಆಡಳಿತ ಮಂಡಳಿಯ ಗಮನಕ್ಕೆ ತಾರದೆ, ಮಾಡಿಕೊಂಡ ಈ ವಿಪತ್ತಿಗೆ ವಸತಿಗೃಹ ಕಾರಣವೆ? ವಸತಿಗೃಹದ ವಿದ್ಯಾರ್ಥಿಗಳಿಗೆ ಆಡಳಿತ ಮಂಡಳಿ ಪೋಷಕರಾಗಿರುತ್ತಾರೆ. ವಿದ್ಯಾರ್ಥಿಗಳ ಆರೋಗ್ಯ ರಕ್ಷಣೆ, ಸುರಕ್ಷೆ ವಸತಿಗೃಹ ಹೊಣೆ ಎಂದು ಉಚ್ಛ ನ್ಯಾಯಾಲಯ ಧೃಢೀಕರಿಸಿದೆ. ವಸತಿಗೃಹದ ಪ್ರತಿಯೊಂದು ವಿಚಾರವೂ ಆಡಳಿತ ಮಂಡಳಿಗೆ ತಿಳಿದಿರಬೇಕು. ಅಕ್ರಮಗಳನ್ನು ತಡೆಯಬೇಕು. ಹಾಗಿರುವಾಗ, ಪಟಾಕಿ ತಂದದ್ದು ಗೊತ್ತಿಲ್ಲ, ಗಮನಕ್ಕೆ ಬಂದಿಲ್ಲ ಎಂಬುದು ನೆಪ ಮಾತ್ರ. ವಸತಿ ಗೃಹದಲ್ಲಿ ಮಕ್ಕಳು ಸುರಕ್ಷಿತರೆಂದು ಹೆತ್ತವರು ಬಿಟ್ಟು ಹೋಗುತ್ತಾರೆ. ವಿದ್ಯಾರ್ಥಿ ಹದಗೆಟ್ಟು ವರ್ತಿಸುವಂತಾದರೆ, ವಸತಿ ಗೃಹ ಹೊಣೆಗಾರನಾಗಬೇಕು. ಆದುದರಿಂದ ಶಾಲೆ ಮತ್ತು ಆಡಳಿತ ಮಂಡಳಿ ಹೊಣೆಗಾರರೆಂದೇ ದೃಢೀಕರಿಸಿ, ರಾಜ್ಯ ಆಯೋಗ ಮೇಲ್ಮನವಿಯನ್ನು ತಿರಸ್ಕರಿಸಿತು. ಅಲ್ಲದೆ ವ್ಯಾಜ್ಯ ವೆಚ್ಚಕ್ಕಾಗಿ, ಮತ್ತೆ ರೂ. ೩೦೦೦/- ಕೊಡಬೇಕೆಂದೂ ಆದೇಶಿಸಿದೆ. ಹೀಗೆ ರೂ. ೫೦,೦೦೦/- ಪರಿಹಾರ ಮತ್ತು ಕೋರ್ಟು ವ್ಯಾಜ್ಯ ವೆಚ್ಚ ರೂ ೫೪೦೦೦/- ಕೂಡಾ ಪಾವತಿಸಬೇಕೆಂದು ಆದೇಶಿಸಿತು.

**ii) ಸ್ಥಿರ ದೂರವಾಣಿ ಸ್ಥಳಾಂತರ ವಿಳಂಬಕ್ಕೆ ಪರಿಹಾರ:**
**ತಪ್ಪು ತೀರ್ಪು ನೀಡಿದ ತಮಿಳುನಾಡು ರಾಜ್ಯ ಗ್ರಾಹಕ ಆಯೋಗವು ಟೀಕೆಗೆ ಗುರಿಯಾಯಿತು.**

ಎಸ್.ಗೌಸ್ ಖಾನ್ ೭೫ರ ವಯೋವೃದ್ಧರು. ಅವರು ಚೆನ್ನೈ ನಗರದಲ್ಲಿಯೇ ತಮ್ಮ ಮನೆಯನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಬದಲಾಯಿಸಿದರು. ಅದೇ ದಿನ ಅಂದರೆ ೨೧ ಮೇ ೨೦೦೧ ರಂದು ಅವರು ಇಲಾಖೆಗೆ ತಮ್ಮ ದೂರವಾಣಿಯನ್ನು ಹಿಂತಿರುಗಿಸಿ ಹೊಸ ಮನೆಗೆ ಸಂಪರ್ಕ ಕಲ್ಪಿಸುವಂತೆ ಕೋರಿದರು. ಇಲಾಖೆಯೊಂದಿಗೆ ಹೋರಾಡಿದ ಬಳಿಕವೆ ೧೧ ತಿಂಗಳ ನಂತರ ಅಂದರೆ ೨೯ ಏಪ್ರೀಲ್ ೨೦೦೨ ರಂದು ಅವರ ಹೊಸ ಮನೆಗೆ ದೂರವಾಣಿ ಸಂಪರ್ಕವನ್ನು ಇಲಾಖೆಯು ನೀಡಿತು.

ಇದು ದೂರವಾಣಿ ಇಲಾಖೆಯ ಸೇವಾನ್ಯೂನತೆ, ತಮಗೆ ಇದರಿಂದ ದೈಹಿಕವಾಗಿ ಮತ್ತು ಮಾನಸಿಕವಾಗಿ ಕಿರಿಕಿರಿಯಾಗಿದೆ. ತಮಗೆ ಪರಿಹಾರವನ್ನು ಕೊಡಿಸಬೇಕು ಎಂದು ಖಾನ್ ಅವರು ಚೆನ್ನೈ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ದೂರನ್ನು ಸಲ್ಲಿಸಿದರು. ಜಿಲ್ಲಾ ವೇದಿಕೆಯು ದೂರನ್ನು ಪುರಸ್ಕರಿಸಿತು. ಅರ್ಜಿದಾರರಿಗೆ ೫,೦೦೦ ರೂ. ಪರಿಹಾರವನ್ನು ಮತ್ತು ೧,೦೦೦ ರೂ ವೆಚ್ಚವೆಂದು ನೀಡಬೇಕು ಎಂದು ಇಲಾಖೆಗೆ ಆದೇಶಿಸಿತು. ಇಲಾಖೆಯು ತಮಿಳುನಾಡು ರಾಜ್ಯ ಗ್ರಾಹಕ ಆಯೋಗದಲ್ಲಿ ಮೇಲ್ಮನವಿ ಸಲ್ಲಿಸಿತು. ಮೇಲ್ಮನವಿ ವಿಚಾರಣೆ ಹಂತದಲ್ಲಿ ಅರ್ಜಿ ಸಲ್ಲಿಸಿ ಜಿಲ್ಲಾ ವೇದಿಕೆ ತೀರ್ಪು ಜಾರಿಯಾಗದಂತೆ ತಡೆಯಾಜ್ಞೆ ಪಡೆದುಕೊಂಡಿತು.

ರಾಜ್ಯ ಆಯೋಗ ವಿಚಾರಣೆಯ ಕಾಲಕ್ಕೆ ಇಲಾಖೆಯು ಖಾನ್ ಅವರು ದೂರವಾಣಿಯನ್ನು ಹಿಂತಿರುಗಿಸಿದ್ದು, ಹೊಸ ನಿವಾಸಕ್ಕೆ ಬದಲಾಯಿಸಲು ಕೋರಿದ್ದು ಯಾವುದನ್ನೂ ಅಲ್ಲಗಳೆಯಲಿಲ್ಲ. ಆದರೆ ಖಾನ್ ಬಿಲ್ ಬಾಕಿ ಉಳಿಸಿಕೊಂಡಿದ್ದರು. ತುಂಬಲು ಸೂಚಿಸಿದರೂ ಅವರು ತುಂಬಲಿಲ್ಲ. ಅರ್ಜಿಯ ಜೊತೆಯಲ್ಲಿ ಅವರು ತಾವು ತುಂಬಿದ ಬಿಲ್‌ನ ಕೊನೆಯ ರಸೀದಿಯನ್ನು ಲಗತ್ತಿಸಿರಲಿಲ್ಲ. ಇದು ಇಲಾಖೆಯ ಸೇವಾನ್ಯೂನತೆಯಲ್ಲ ಎಂದು ಹೇಳಿತು. ಅರ್ಜಿದಾರರು ೧೬ ಮೇ ೨೦೦೧ ರ ಬಿಲ್ಲನ್ನು ೧೬-೦೭-೨೦೦೧ ರಂದು, ೧೬ ಜುಲೈ ೨೦೦೧ ರ ಬಿಲ್ಲನ್ನು ೫-೦೮-೨೦೦೧ ರಂದು ಸಂದಾಯ ಮಾಡಿದ್ದಾರೆ. ಆದರೆ ೧೭ ಡಿಸೆಂಬರ್ ೨೦೦೧ ರ ಪೂರಕ ಬಿಲ್ಲನ್ನು ಅವರು ತುಂಬಿಲ್ಲ. ಈ ಬಗ್ಗೆ ಹಲವಾರು ಬಾರಿ ಅವರಿಗೆ ತಿಳಿಸಿದರೂ ಅವರೂ ತುಂಬಿಲ್ಲ. ಸಂಪರ್ಕವನ್ನು ಬದಲಾಯಿಸಿ ಕೊಡದೆ ಇರಲು ಇದೇ ಕಾರಣ ಎಂದೂ ಹೇಳಿತು.

ಅರ್ಜಿದಾರ ಖಾನ್ ಅವರ ಪ್ರಕಾರ ೧೬ ಮೇ ೨೦೦೧ ರ ಬಿಲ್, ಅವರಿಗೆ ೨೧ ಮೇ ೨೦೦೧ ರ ಮೊದಲು ತಲುಪಿಲ್ಲ. ೧೬-೦೩-೨೦೦೧ ರ ವರೆಗಿನ ಬಿಲ್‌ಗಳನ್ನು ಅವರು ಸರಿಯಾಗಿ ಕಟ್ಟಿದ್ದಾರೆ. ಬಳಿಕ ಇವರು ತಾವೆ ದೂರವಾಣಿ ಕಚೇರಿಗೆ ತೆರಳಿ ಅಲ್ಲಿಯೆ ವಿಚಾರಿಸಿ ಬಿಲ್ ತುಂಬಿದ್ದಾರೆ. ೧೭-೧೨-೨೦೦೧ ರ ಬಿಲ್ ವಿಚಾರ ಇಲಾಖೆ ಆ ಬಳಿಕ ವಿಚಾರ ಮಾಡಿ ವಿಚಾರಣೆ ಕಾಲಕ್ಕಷ್ಟೇ ಹೇಳುತ್ತಿರುವುದು. ಸಂಬಂಧಿಸಿದ ಸಹಾಯಕ ಅಭಿಯಂತರರು ಸಂಪರ್ಕ ಕಡಿದ ಬಗ್ಗೆ ಪ್ರಮಾಣಪತ್ರ ನೀಡದೆ ಇದ್ದುದೆ ದೂರವಾಣಿ ಸಂಪರ್ಕ ನೀಡದೆ ಇರುವುದಕ್ಕೆ ಕಾರಣ. ಒಂದು ವೇಳೆ ತಾವು ಬಿಲ್ ತುಂಬದೆ ಇದ್ದುದೆ ನಿಜವಾಗಿದ್ದಲ್ಲಿ ನಂತರ ಇಲಾಖೆ ಸಂಪರ್ಕವನ್ನು ಹೇಗೆ ನೀಡಿತು ಎಂಬುದು ಅವರ ಪ್ರಶ್ನೆ.

ಆದರೆ ರಾಜ್ಯ ಆಯೋಗವು ಇಲಾಖೆಯ ವಾದವನ್ನು ಮನ್ನಿಸಿ ಜಿಲ್ಲಾ ವೇದಿಕೆಯ ತೀರ್ಪನ್ನು ಅನೂರ್ಜಿತಗೊಳಿಸಿತು. ಇದರ ವಿರುದ್ಧ ಖಾನ್ ಅವರು ರಾಷ್ಟ್ರೀಯ ಗ್ರಾಹಕ ಆಯೋಗದಲ್ಲಿ

ಮೇಲ್ಮನವಿಯನ್ನು ಸಲ್ಲಿಸಿದರು. ತಾವೊಬ್ಬ ಹಿರಿಯ ನಾಗರಿಕ. ಅಲ್ಲದೆ ಹೃದಯ ಸಂಬಂಧಿ ಕಾಯಿಲೆಯಿಂದ ಬಳಲುತ್ತಿರುವ ವ್ಯಕ್ತಿ. ಇಷ್ಟಾದರೂ ದೂರವಾಣಿ ಇಲಾಖೆ ತಮ್ಮನ್ನು ಕಾಡಿಸಿದೆ. ರಾಜ್ಯ ಆಯೋಗದ ತೀರ್ಪು ಸರಿ ಇಲ್ಲ. ತಮಗೆ ನ್ಯಾಯ ಕೊಡಿಸಬೇಕು ಎಂದು ಕೋರಿದರು. ದೂರವಾಣಿ ಸಂಪರ್ಕ ಬದಲಾವಣೆ ಅಂತಾರಾಜ್ಯ ವ್ಯವಹಾರವಲ್ಲ. ಹಿಂದೊಮ್ಮೆ ಇವರದೇ ದೂರವಾಣಿ ಆಂಧ್ರಪ್ರದೇಶದಿಂದ ತಮಿಳುನಾಡಿಗೆ ಸೆಪ್ಟೆಂಬರ್ ೨೦೦೦ ರಲ್ಲಿ ವರ್ಗಾವಣೆಯಾಗಿತ್ತು. ಒಂದೆ ನಗರದಲ್ಲಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾವಣೆಯಾಗಲು ಇಷ್ಟೊಂದು ವಿಳಂಬ ಸಮರ್ಥನೀಯವಲ್ಲ ಎಂದು ಅರ್ಜಿದಾರರ ವಾದದಲ್ಲಿ ಹುರುಳಿದೆ ಎಂದು ರಾಷ್ಟ್ರೀಯ ಆಯೋಗಕ್ಕೆ ಅನಿಸಿತು.

ರಾಜ್ಯ ಆಯೋಗವು ಇವರು ಸಂದಾಯ ಮಾಡಿದ ಬಿಲ್ ವಿಷಯದಲ್ಲಿ ತಪ್ಪಾಗಿ ಗ್ರಹಿಕೆ ಮಾಡಿದೆ ಎಂದು ರಾಷ್ಟ್ರೀಯ ಆಯೋಗ ಹೇಳಿತು. ಅಲ್ಲದೆ ಇದು ಅಂತಾರಾಜ್ಯ ದೂರವಾಣಿ ವರ್ಗಾವಣೆ ಪ್ರಕರಣ ಎಂದು ತಪ್ಪಾಗಿ ಭಾವಿಸಿತ್ತು. ತಮ್ಮ ದೂರವಾಣಿ ವರ್ಗಾವಣೆ ಸಂಬಂಧದಲ್ಲಿ ಖಾನ್ ಸಲ್ಲಿಸಿದ ಅರ್ಜಿಗೆ ಸಂಬಂಧಿಸಿದ ಅಧಿಕಾರಿ ಸಹಿ ಮಾಡಿ ಕೊಟ್ಟಿದ್ದಾರೆ. ೨೧ ಮೇ ೨೦೦೧ ರ ನಂತರ ಅವರಿಗೆ ದೂರವಾಣಿ ಸಂಪರ್ಕವೇ ಇಲ್ಲದಿದ್ದ ಮೇಲೆ ಅವರು ಬಿಲ್ ಏಕೆ ಕಟ್ಟಬೇಕು? ಇದು ಇಲಾಖೆಯ ಸೇವಾ ನ್ಯೂನತೆ. ಇಲಾಖೆಯು ೧೫ ಸಾವಿರ ರೂ. ಪರಿಹಾರ ಮತ್ತು ವೆಚ್ಚವೆಂದು ೨ ಸಾವಿರ ರೂ.ಗಳನ್ನು ನಾಲ್ಕು ವಾರಗಳೊಳಗಾಗಿ ನೀಡಬೇಕು ಎಂದು ಆದೇಶಿಸಿತು.

**iii) ಪ್ರಸವ ಕ್ರಿಯೆಯಲ್ಲಿ ನಿರ್ಲಕ್ಷ್ಯ – ೧೬ ವರ್ಷಗಳ ನಂತರ ಪರಿಹಾರ ರೂ. ೨,೩೫,೫೦೦/– ರಾಷ್ಟ್ರೀಯ ವೇದಿಕೆ:**

ವೈದ್ಯರೊಬ್ಬರ ನಿರ್ಲಕ್ಷ್ಯದಿಂದಾಗಿ ಹೆರಿಗೆಯಾಗುವಾಗಲೇ ಮಗು ತೀರಿಕೊಂಡು ಪರಿಹಾರಕ್ಕಾಗಿ, ನ್ಯಾಯಕ್ಕಾಗಿ ರಾಷ್ಟ್ರೀಯ ವೇದಿಕೆವರೆಗೂ ಹೋರಾಡಿ ಜಯ ಗಳಿಸಿದ ಸುದ್ದಿಯೊಂದು ಪ್ರಕಟವಾಗಿದೆ. ಪುತ್ತೂರಿನ ಬಸ್ರೂರಿನ ಲತಾ ಪಿ. ಶೆಟ್ಟಿ ಎಂಬವರು ದೂರುದಾರರು. ಪುತ್ತೂರಿನ ನಿಸರ್ಗ ನರ್ಸಿಂಗ್ ಹೋಮ್ ಮತ್ತು ಆಸ್ಪತ್ರೆಯ ಡಾ. ರಮಾದೇವಿ ಪ್ರತಿವಾದಿ. ವೈದ್ಯೆ ಡಾ. ರಮಾದೇವಿ ೧೯೯೫ರಲ್ಲಿ ದೂರೂದಾರರಿಗೆ ಈ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿದ್ದರು. ಆದರೆ ಮಗು ತೀರಿಕೊಂಡಿತ್ತು. ವೈದ್ಯೆಯ ನಿರ್ಲಕ್ಷ್ಯದಿಂದಲೇ ಮಗು ಸತ್ತು ಹೋಯಿತೆಂದು ದ.ಕ. ವೇದಿಕೆಗೆ ದೂರು ನೀಡಿದ್ದರು. ೨೦೦೨ ಜನವರಿ ೨೮ರಂದು ಬಂದ ತೀರ್ಪಿನಲ್ಲಿ ೩೦ ದಿನಗಳಲ್ಲಿ ರೂ. ೧,೦೦,೦೦೦/– ಪರಿಹಾರ ನೀಡುವಂತೆ ಆದೇಶಿಸಿತ್ತು.

ಡಾ. ರಮಾದೇವಿ ರಾಜ್ಯ ಆಯೋಗದಲ್ಲಿ ಅಪೀಲು ಮಾಡಿದ್ದರು. ರಾಜ್ಯ ಆಯೋಗ ಡಾ. ರಮಾದೇವಿ ಪರವಾಗಿ ತೀರ್ಪು ನೀಡಿತ್ತು, ಹಾಗಾಗಿ ದೂರುದಾರರು ರಾಷ್ಟ್ರೀಯ ಗ್ರಾಹಕ

ಆಯೋಗಕ್ಕೆ ದೂರು ನೀಡುವಂತಾಯಿತು. ರಾಷ್ಟ್ರೀಯ ವೇದಿಕೆ ವಿಚಾರಣೆ ಮುಗಿಸಿ ೨೦೦೯ ಮಾರ್ಚ್ ೯ ರಂದು ತೀರ್ಪು ನೀಡತ್ತು . ಜಿಲ್ಲಾ ವೇದಿಕೆಯ ತೀರ್ಪನ್ನು ಎತ್ತಿ ಹಿಡಿದು ರೂ. ೧,೦೦,೦೦೦/- ಶೇ. ೧೫ರ ಬಡ್ಡಿ ಸಮೇತ ಕೊಡಬೇಕೆಂದು ಆದೇಶಿಸಿತ್ತು. ೨೦೦೨ರಿಂದ ಈ ವರೆಗಿನ ಬಡ್ಡಿ ಸಮೇತ ರೂ.೨,೩೫,೫೦೦/- ಮೊತ್ತವನ್ನು ಡಾ. ರಮಾದೇವಿ ದೂರುದಾರರಿಗೆ ಪಾವತಿಸಿದರು. ಇಂತಹ ದಾವೆಗಳು ಅಲ್ಲಲ್ಲಿ ನಡೆಯುತ್ತಿದ್ದರೂ ಶ್ರೀಮತಿ ಲತಾ ಶೆಟ್ಟಿಯವರ ಹಾಗೆ ನ್ಯಾಯಕ್ಕಾಗಿ ಹೋರಾಡುವ ಛಲ ಬಲ ಇರುವುದಿಲ್ಲ. ಗ್ರಾಹಕರು ಎಚ್ಚರಗೊಂಡಾಗ ಮಾತ್ರ ನ್ಯಾಯ ದೊರಕುತ್ತದೆ.

**iv) ಬೇಡದಿದ್ದರೂ ಸಾಲ ಕೊಟ್ಟ ಬ್ಯಾಂಕ್:**

'ಸಾಲವನ್ನು ಕೊಂಬಾಗಿ ಹಾಲೋಗರುಂಡಂತೆ'...... ಸರ್ವಜ್ಞ ವಚನ ಯಾರಿಗೆ ಗೊತ್ತಿಲ್ಲ? ಸಾಲ ಪಡೆಯುವಾಗ ಆಗುವ ಖುಷಿ, ಸಾಲಿಗ ಬಂದು ಹಣ ವಾಪಸಾತಿಗಾಗಿ ಒತ್ತಾಯಿಸತೊಡಗಿದಾಗ ಕಿಬ್ಬದಿಯ ಕೀಲು ಮುರಿಯುವಂತಹ ಅನುಭವನ್ನು ಕೊಡುತ್ತದೆ. ಆದರೆ ಈಗ ಇಡೀ ಜಗತ್ತು ಸಾಲದ ಮೇಲೆಯೇ ನಿಂತಿದೆ. ಬ್ಯಾಂಕುಗಳು ನಾ ಮುಂದು ತಾ ಮುಂದು ಎಂದು ಸಾಲ ನೀಡಲು ದುಂಬಾಲು ಬೀಳುತ್ತವೆ. ಸಾಲ ಬೇಡವಾಗಿದ್ದರೂ ಒತ್ತಾಯಪೂರ್ವಕವಾಗಿ ಸಾಲ ನೀಡಲೂ ಹಿಂಜರಿಯುವುದಿಲ್ಲ!.

ತಮಗೆ ಬೇಡವಾದ ಸಾಲ ನೀಡಿ, ನಂತರ ಕಿಬ್ಬದಿಯ ಕೀಲು ಮುರಿಯಲು ಬ್ಯಾಂಕು ಆರಂಭಿಸಿದರೆ ಗ್ರಾಹಕ ಏನು ಮಾಡಬೇಕು? ತನ್ನ ಮುಂದೆ ಬಂದ ಇಂತಹ ಕುತೂಹಲಕರ ಮೇಲ್ಮನವಿ ಪ್ರಕರಣವೊಂದರಲ್ಲಿ ಕರ್ನಾಟಕ ರಾಜ್ಯ ಗ್ರಾಹಕ ನ್ಯಾಯಾಲಯ ಗ್ರಾಹಕನಿಗೆ ನ್ಯಾಯ ಒದಗಿಸಿದೆ.

ಈ ಪ್ರಕರಣದಲ್ಲಿ ಅರ್ಜಿದಾರರು: ಉಡುಪಿ ಕುಂಜಿಬೆಟ್ಟಿನ ಮೂಡನಿಡಂಬೂರು ಗ್ರಾಮದ ನಿವಾಸಿ ದಿವಂಗತ. ಟಿ.ಎನ್. ಬಾಲಕೃಷ್ಣನ್ ನಂಬಿಯಾರ್ ಅವರ ಪುತ್ರ ಸಿ.ಪಿ. ನಂಬಿಯಾರ್. ಪ್ರತಿವಾದಿಗಳು: ೧) ಸಿಟಿ ಬ್ಯಾಂಕ್ ಅಣ್ಣಾ ಮಲ್ಯೆ, ಚೆನ್ನೈ. ೨) ವೈಶ್ಯ ಬ್ಯಾಂಕ್ ಲಿಮಿಟೆಡ್ ಉಡುಪಿ.

ಅರ್ಜಿದಾರ ಸಿ.ಪಿ. ನಂಬಿಯಾರ್ ಅವರು ಒಂದನೇ ಪ್ರತಿವಾದಿ ಸಿಟಿಬ್ಯಾಂಕ್ ನೀಡಿದ ಕ್ರೆಡಿಟ್ ಕಾರ್ಡ್ ಹೊಂದಿದ್ದು, ಯಾವುದೇ ಮನವಿ ಮಾಡದೇ ಇದ್ದರೂ ಬ್ಯಾಂಕು ಸಾಲ ಮಂಜೂರು ಮಾಡಿ ೯೦,೦೦೦/- ರೂಪಾಯಿಗಳ ಕೋರಿಕೆ ಪತ್ರವನ್ನು ಅವರಿಗೆ ಕಳುಹಿಸಿ ಕೊಟ್ಟಿತ್ತು.

ತನಗೆ ಹಣದ ಅಗತ್ಯ ಇಲ್ಲದೆ ಇದ್ದುದರ ಜೊತೆಗೆ ಸಾಲಕ್ಕಾಗಿ ಯಾವುದೇ ಮನವಿಯನ್ನು ಮಾಡದೆ ಇದ್ದುದರಿಂದ ನಂಬಿಯಾರ್ ಅವರು ತನಗೆ ಬಂದಿದ್ದ ಡಿಮ್ಯಾಂಡ್ ಡ್ರಾಫ್ಟನ್ನು ಪ್ರತಿವಾದಿಗೆ ಹಿಂದಿರುಗಿಸಿದರು.

ಆದರೆ ಕೋರಿಕೆ ಪತ್ರವನ್ನು ಹಿಂದಿರುಗಿಸಿದ ನಂತರವೂ ಒಂದನೇ ಪ್ರತಿವಾದಿ ಸಿಟಿಬ್ಯಾಂಕ್ ಸಾಲ ಖಾತೆಗೆ ಅರ್ಜಿದಾರನ ಖಾತೆಯಿಂದ ಸಾಲದ ಕಂತು ಮರುಪಾವತಿ ಸಲುವಾಗಿ ಹಣ ಮುರಿಯಲು ಅರಂಭಿಸಿತು. ನಂಬಿಯಾರ್ ಅವರು ಸಾಲ ಖಾತೆಗೆ ಹಣ ಮುರಿಯುವುದನ್ನು ನಿಲ್ಲಿಸುವಂತೆ ಹಲವಾರು ಮನವಿ ಮಾಡಿದರು. ಅದರೆ ಒಂದನೇ ಪ್ರತಿವಾದಿ ಹಣ ಮುರಿದುಕೊಳ್ಳುವುದನ್ನು ನಿಲ್ಲಿಸಲಿಲ್ಲ. ಕೊನೆಗೆ ಅರ್ಜಿದಾರರು ಸಂಧಾನಾಧಿಕಾರಿಯನ್ನು (ಓಂಬುಡ್ಸ್‌ಮನ್) ಸಂಪರ್ಕಿಸಿ ದೂರು ನೀಡಿದರು.

ಸಂಧಾನಾಧಿಕಾರಿಯ ಆದೇಶದ ಮೇರೆಗೆ ಅರ್ಜಿದಾರರ ಖಾತೆಯಿಂದ ಮುರಿದುಕೊಳ್ಳಲಾದ ಹಣವನ್ನು ಅವರ ಖಾತೆಗೆ ಹಿಂದಿರುಗಿಸಲಾಯಿತು. ಜೊತೆಗೆ ಅರ್ಜಿದಾರರ ಕ್ರೆಡಿಟ್ ಕಾರ್ಡನ್ನೂ ಹಿಂತೆಗೆದುಕೊಳ್ಳಲಾಯಿತು.

ಕ್ರೆಡಿಟ್ ಕಾರ್ಡ್ ಹಿಂತೆಗೆದುಕೊಂಡ ಕ್ರಮವನ್ನು ತೀವ್ರವಾಗಿ ಆಕ್ಷೇಪಿಸಿದ ನಂಬಿಯಾರ್ ಅವರು ಇದು ಒಂದನೇ ಪ್ರತಿವಾದಿ ಸಿಟಿ ಬ್ಯಾಂಕಿನ ಸೇವಾಲೋಪ ಎಂದು ದೂರಿ ಜಿಲ್ಲಾ ಗ್ರಾಹಕ ನ್ಯಾಯಾಲಯಕ್ಕೆ ದೂರು ನೀಡಿದರು. ಅವರ ಅರ್ಜಿಯನ್ನು ಪುರಸ್ಕರಿಸಿದ ಜಿಲ್ಲಾ ಗ್ರಾಹಕ ನ್ಯಾಯಾಲಯವು ಅರ್ಜಿದಾರರ ವಿಶ್ವಾಸಾರ್ಹತೆಗೆ ಧಕ್ಕೆ ಉಂಟು ಮಾಡಿದ್ದಕ್ಕಾಗಿ ಒಂದು ಲಕ್ಷ ರೂಪಾಯಿಗಳ ನಷ್ಟ ಪರಿಹಾರ, ಮತ್ತು ಮಾನಸಿಕ ಯಾತನೆಗಾಗಿ ೫೦,೦೦೦ ರೂಪಾಯಿಗಳ ಪರಿಹಾರ ನೀಡುವಂತೆ ಒಂದನೇ ಪ್ರತಿವಾದಿಗೆ ಆಜ್ಞಾಪಿಸಿತು. ೫೮೮೫ ರೂಪಾಯಿಗಳ ಬಡ್ಡಿ. ೩೦೦೦ ರೂಪಾಯಿಗಳ ಸಂಪರ್ಕ ವೆಚ್ಚ, ಹಾಗೂ ೫೦೦೦ ರೂಪಾಯಿಗಳ ಖಟ್ಲೆ ವೆಚ್ಚವನ್ನು ತೆರುವಂತೆಯೂ ಒಂದನೇ ಪ್ರತಿವಾದಿಗೆ ಆದೇಶ ನೀಡಿತು.

ಜಿಲ್ಲಾ ಗ್ರಾಹಕ ನ್ಯಾಯಾಲಯದ ಈ ಆದೇಶವನ್ನು ಪ್ರಶ್ನಿಸಿ ಒಂದನೇ ಪ್ರತಿವಾದಿ ಸಿಟಿಬ್ಯಾಂಕ್ ಕರ್ನಾಟಕ ರಾಜ್ಯ ಗ್ರಾಹಕ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿತು.

ಅಧ್ಯಕ್ಷ ನ್ಯಾಯಮೂರ್ತಿ ಚಂದ್ರಶೇಖರಯ್ಯ, ಸದಸ್ಯರಾದ ರಮಾ ಅನಂತ್ ಮತ್ತು ಟಿ. ಹರಿಯಪ್ಪ ಗೌಡ ಅವರನ್ನು ಒಳಗೊಂಡ ಪೀಠವು ಒಂದನೇ ಪ್ರತಿವಾದಿ ಸಿಟಿಬ್ಯಾಂಕ್ ಪರ ವಕೀಲ ಎಂ.ವಿ.ಕಿಣಿ, ಅರ್ಜಿದಾರ ನಂಬಿಯಾರ್ ಪರ ವಕೀಲ ಕಿಶೋರ ಶೆಟ್ಟಿ ಮತ್ತು ಎರಡನೇ ಪ್ರತಿವಾದಿ ವೈಶ್ಯ ಬ್ಯಾಂಕ್ ಪರ ವಕೀಲ ಡಿ.ಎನ್.ಕಾಗವಾಡ ಅವರ ಅಹವಾಲುಗಳನ್ನು ಆಲಿಸಿ ಸಾಕ್ಷಾಧಾರಗಳನ್ನು ಪರಿಶೀಲಿಸಿತು.

ಅರ್ಜಿದಾರ ನಂಬಿಯಾರ್ ಅವರು ಸಾಲಮಂಜೂರು ಮಾಡುವಂತೆ ಕೋರಿದ್ದನ್ನು ತೋರಿಸುವಂತಹ ಯಾವುದೇ ಸಾಕ್ಷಾಧಾರವನ್ನು ಒಂದನೇ ಪ್ರತಿವಾದಿ ಸಿಟಿಬ್ಯಾಂಕ್ ಗ್ರಾಹಕ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದನ್ನು ನ್ಯಾಯಾಲಯ ಗಮನಕ್ಕೆ ತೆಗೆದುಕೊಂಡಿತು. ಇಂತಹ

ಪರಿಸ್ಥಿತಿಯಲ್ಲಿ ಸಾಲ ಮಂಜೂರು ಮಾಡಿ ಡಿಮ್ಯಾಂಡ್ ಡ್ರಾಫ್ಟನ್ನು ಅರ್ಜಿದಾರರಿಗೆ ಕಳುಹಿಸಿದ್ದು ಸಮರ್ಥನಿಯವಲ್ಲ ಎಂದು ನ್ಯಾಯಾಲಯ ಭಾವಿಸಿತು. ಅರ್ಜಿದಾರರು ಆ ಕೋರಿಕೆ ಪತ್ರ ಹಿಂತಿರುಗಿಸಿದ ಬಳಿಕವೂ ಸಾಲ ಮರುಪಾವತಿ ಹೆಸರಿನಲ್ಲಿ ಬಡ್ಡಿ ಹಾಗೂ ಅಸಲಿಗಾಗಿ ಹಣ ಮುರಿದುಕೊಳ್ಳುವುದನ್ನು ಮುಂದುವರಿಸಿದ್ದು, ಅರ್ಜಿದಾರರ ಆಕ್ಷೇಪಗಳನ್ನು ಗಮನಿಸದೆ ಇದ್ದದ್ದು, ಹಾಗೂ ಸಂಧಾನಾಧಿಕಾರಿಯ ಆದೇಶದ ಬಳಿಕ ಮುರಿದುಕೊಂಡ ಹಣವನ್ನು ಹಿಂತಿರುಗಿಸಿದ್ದನ್ನೂ ನ್ಯಾಯಾಲಯ ಗಣನೆಗೆ ತೆಗೆದುಕೊಂಡಿತು.

ಒಂದನೇ ಪ್ರತಿವಾದಿ ಮುರಿದುಕೊಂಡ ಹಣ ಹಿಂತಿರುಗಿಸಿದರೂ, ತಾನು ಯಾವುದೆ ತಪ್ಪನ್ನೂ ಮಾಡದೆ ಇದ್ದರೂ, ಕ್ರೆಡಿಟ್ ಕಾರ್ಡನ್ನು ಹಿಂತೆಗೆದುಕೊಂಡು ತನ್ನ ಹೆಸರನ್ನು ಕಪ್ಪು ಪಟ್ಟಿಗೆ ಸೇರಿಸಿದ್ದರಿಂದ ತನ್ನ ವಿಶ್ವಾಸಾರ್ಹತೆ ಧಕ್ಕೆ ಉಂಟಾಯಿತು ಎಂಬುದು ಅರ್ಜಿದಾರ ಅಳಲು. ಇದರ ಜೊತೆಗೆ ಇಷ್ಟೆಲ್ಲ ವ್ಯವಹಾರದ ಮಧ್ಯೆ ಒಂದನೇ ಪ್ರತಿವಾದಿಯಿಂದ ತನಗೆ ಬೆದರಿಕೆ ಕರೆಗಳೂ ಬಂದಿದ್ದವು ಎಂಬುದು ಅವರ ದೂರು. ಆದರೆ ಈ ವಾದಗಳನ್ನು ಸಮರ್ಥಿಸುವಂತಹ ಯಾವುದೇ ಪುರಾವೆಗಳನ್ನು ಅವರು ನ್ಯಾಯಾಲಯಕ್ಕೆ ಒದಗಿಸಲಿಲ್ಲ.

ಈ ಪ್ರಕರಣದ ವಾಸ್ತವಾಂಶಗಳು ಒಂದನೇ ಪ್ರತಿವಾದಿ ತನ್ನ ಗ್ರಾಹಕರ ಜೊತೆಗಿನ ವ್ಯವಹಾರದಲ್ಲಿ ಪ್ರಾಮಾಣಿಕವಾಗಿಲ್ಲ ಎಂಬುದನ್ನು ತೋರಿಸುತ್ತವೆ. ಕ್ರೆಡಿಟ್ ಕಾರ್ಡ್ ಹಿಂತೆಗೆದುಕೊಂಡದ್ದರಿಂದ ಅರ್ಜಿದಾರರ ವಿಶ್ವಾಸರ್ಹತೆ ಧಕ್ಕೆ ಉಂಟಾಯಿತೆಂಬುದೂ ನಿಜ. ಅರ್ಜಿದಾರರು ಮುರಿದ ಹಣ ಮರುಪಾವತಿ ಮಾಡುವಂತೆ ಹಲವಾರು ಮನವಿ ಮಾಡಿದರೂ ಸ್ಪಂದಿಸದ ಬ್ಯಾಂಕಿನ ವರ್ತನೆ ಸೇವಾಲೋಪ ಎಂಬುದೂ ಸ್ಪಷ್ಟ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು.

ಆದರೆ ತನಗಾದ ಆರ್ಥಿಕ ನಷ್ಟ ಮತ್ತು ಮಾನಸಿಕ ಯಾತನೆಗೆ ಸಂಬಂಧಿಸಿದಂತೆ ಅರ್ಜಿದಾರರು ಸಮರ್ಪಕ ಪುರಾವೆ ಒದಗಿಸದೇ ಇದ್ದ ಹಿನ್ನೆಲೆಯಲ್ಲಿ ಅವರಿಗೆ ಜಿಲ್ಲಾ ನ್ಯಾಯಾಲಯವು ೧.೫೦ ಲಕ್ಷ ರೂಪಾಯಿಗಳಿಗೂ ಹೆಚ್ಚಿನ ನಷ್ಟ ಪರಿಹಾರ ನೀಡಿದ್ದು ಸಮರ್ಪಕವಲ್ಲ. ಪರಿಹಾರ ಮೊತ್ತವಾಗಿ ೫೦,೦೦೦ ರೂಪಾಯಿಗಳನ್ನು ನೀಡುವುದರಿಂದ ಅರ್ಜಿದಾರರಿಗೆ ನ್ಯಾಯ ಒದಗಿಸಿದಂತಾಗುತ್ತದೆ ಎಂಬ ತೀರ್ಮಾನಕ್ಕೆ ರಾಜ್ಯ ಗ್ರಾಹಕ ನ್ಯಾಯಾಲಯ ಬಂದಿತು.

ಈ ಹಿನ್ನೆಲೆಯಲ್ಲಿ ಜಿಲ್ಲಾ ಗ್ರಾಹಕ ನ್ಯಾಯಾಲಯದ ತೀರ್ಪನ್ನು ಪರಿಷ್ಕರಿಸಿದ ರಾಜ್ಯ ಗ್ರಾಹಕ ನ್ಯಾಯಾಲಯವು ೫೦,೦೦೦ ರೂಪಾಯಿಗಳನ್ನು ಎರಡು ತಿಂಗಳುಗಳ ಒಳಗಾಗಿ ಅರ್ಜಿದಾರರಿಗೆ ಪಾವತಿ ಮಾಡುವಂತೆಯೂ, ತಪ್ಪಿದಲ್ಲಿ ಈ ಮೊತ್ತಕ್ಕೆ ಶೇಕಡಾ ೧೨% ಬಡ್ಡಿಯನ್ನೂ ಹಣ ಪಾವತಿ ಮಾಡುವವರೆಗೂ ನೀಡುವಂತೆಯೂ ಒಂದನೇ ಪ್ರತಿವಾದಿ ಬ್ಯಾಂಕಿಗೆ ಆಜ್ಞಾಪಿಸಿತು.

ಪ್ರತಿವಾದಿಯು ನ್ಯಾಯಾಲಯಕ್ಕೆ ಕಟ್ಟಿದ ೨೫,೦೦೦ ರೂಪಾಯಿಗಳ ಠೇವಣಿ ಹಣವನ್ನು ಅರ್ಜಿದಾರರಿಗೆ ನೀಡಬೇಕು. ಉಳಿದ ಪರಿಹಾರ ಹಣವನ್ನು ಒಂದನೇ ಪ್ರತಿವಾದಿಯು ಅರ್ಜಿದಾರರಿಗೆ ಪಾವತಿ ಮಾಡಬೇಕು ಎಂದೂ ಪೀಠವು ನಿರ್ದೇಶನ ನೀಡಿತು.

**೧.೨ ಗ್ರಾಹಕ ಸಂರಕ್ಷಣೆಯ ಅಂಶಗಳು**

೧. ಆರೋಗ್ಯಕ್ಕೆ ಅಪಾಯ ತರುವ ವಸ್ತುವಿನ ವಿರುದ್ದ ಸಂರಕ್ಷಣೆ.

೨. ಆರ್ಥಿಕ ಹಿತಾಸಕ್ತಿ ಕಾಪಾಡುವುದು.

೩. ಸರಿಯಾದ ಮಾಹಿತಿ ನೀಡುವುದು.

೪. ತಪ್ಪು ದಾರಿಗೆ ಕೊಂಡೊಯ್ಯುವ ಜಾಹೀರಾತಿನ ವಿರುದ್ಧ ರಕ್ಷಣೆ.

೫. ಗ್ರಾಹಕನಿಗೆ ಶಿಕ್ಷಣ.

೬. ಪರಿಣಾಮಕಾರಿ ಗ್ರಾಹಕ ಪರಿಹಾರ.

ಗ್ರಾಹಕ ಎಚ್ಚೆತ್ತು ಕಣ್ಣು ತೆರೆದು ನೋಡಬೇಕು ತಾನು ದುಡಿದ ಹಣ, ವಂಚನೆಗೆ ಬಲಿಯಾಗಿ ಮೋಸ ಹೋಗುವ ಗ್ರಾಹಕನಿಗೆ ರಕ್ಷಣೆಯ ಮಾರ್ಗಬೇಕು. ನಮಗೆಲ್ಲ ಶೋಷಣೆ ಮುಕ್ತ ಸಮಾಜಬೇಕು. ನಾವು ನಮ್ಮ ಹಕ್ಕುಗಳಿಗಾಗಿ ಹೋರಾಟಕ್ಕೆ ಮುಂದಾದಾಗ ಎಲ್ಲರೂ ಬೆಂಬಲಕ್ಕೆ ಬರುತ್ತಾರೆ. ಸರಕಾರ ಕೂಡ ನಮ್ಮ ಜೊತೆಗೂಡುತ್ತದೆ. ನ್ಯಾಯಕ್ಕೆ ಜಯ ಸಿಗುತ್ತದೆ.

"ಶೋಷಣೆಗೆ ಮೊದಲ ಕತ್ತಿ ಬೀಸಿದ ದೇಶ ಅಮೇರಿಕ. ನಂತರ ಗ್ರಾಹಕ ಹಕ್ಕುಗಳ ಘೋಷಣೆಯಾಯಿತು. ಪ್ರತಿಯೋರ್ವ ನಾಗರಿಕನಿಗೂ ಬದುಕುವ ಹಕ್ಕು ಇದೆ. ಸುರಕ್ಷಿತವಾಗಿ ಬದುಕುವ ಹಕ್ಕು. ದುಡಿದು ಸಂಪಾದಿಸಿದ ಹಣವನ್ನು ಕೊಟ್ಟು ಪಡೆಯುವ ವಸ್ತು ಅಥವಾ ಸೇವೆಗೆ ತಕ್ಕ ತೃಪ್ತಿಕರವಾದ ಪ್ರತಿಫಲ ಸಿಗಬೇಕು. ಅನ್ಯಾಯದೆದುರು ದೂರು ನೀಡಲು ಗ್ರಾಹಕರು ಮುಂದೆ ಬರಬೇಕು. ಗ್ರಾಹಕ ನಿತ್ಯ ಮೋಸ ಹೋದಾಗ ದೂರು ನೀಡುವುದು ಅವರ ಹಕ್ಕು. ದೂರು ನೀಡಿದರೆ ಪರಿಹಾರ ಖಚಿತ".[೨]

"ಗ್ರಾಹಕನೆಂದರೆ ಸೇವೆಯನ್ನು ಪಡೆಯುವಾತ. ಸೇವೆಗೆ ಹಣ ಪಾವತಿಸಿದಾಗ ಮಾತ್ರ ಅದರ ಮೇಲೆ ಅಧಿಕಾರ ಬರುವುದು. ಹಣಕೊಡದೆ ಪುಕ್ಕಟ್ಟೆ ದೊರೆಯುವ ಸೇವೆಗೆ ಗ್ರಾಹಕತ್ವ ಅನ್ವಯಿಸುವುದಿಲ್ಲ. ಹಣಕೊಟ್ಟು ಪಡೆಯುವ ವಸ್ತು ಅಥವಾ ಸೇವೆ ಗ್ರಾಹಕರ ಕಾಯ್ದೆ ವ್ಯಾಪ್ತಿಗೆ ಬರುತ್ತದೆ. ಸೇವೆ ಪಡೆಯುವುದು ಎಂದರೆ ಅದರ ಫಲಾನುಭವಿ ಆಗಿರುವುದು. ಆ ಫಲಾನುಭವಿ ತಾನೇ ಸ್ವತಃ ಆಗಿರಬಹುದು ಅಥವಾ ಗ್ರಾಹಕ ಉದ್ದೇಶಿತ ವ್ಯಕ್ತಿ ಆಗಿರಬಹುದು. ಮಕ್ಕಳ ತಂದೆ ಕೂಡ ಮಕ್ಕಳ ತೊಂದರೆಗೆ ಗ್ರಾಹಕನಾಗಿ ಪರಿಹಾರ ಕೇಳಬಹುದು. ಆದ್ದರಿಂದ ಗ್ರಾಹಕ ಕಾಯ್ದೆಯ ವ್ಯಾಪ್ತಿಗೊಳಪಡಲು:

೧) ಸೇವೆ ನೀಡಿರುವುದು ಅಥವಾ ಪಡೆದಿರುವದು ಸ್ಪಷ್ಟವಾಗಿರಬೇಕು.

೨) ಆ ಸೇವೆಗೆ ಹಣ ಅಥವಾ ಯಾವುದೇ ರೂಪದಲ್ಲಿ ಪ್ರತಿಫಲ ಪಾವತಿಸಿರಬೇಕು ಅಥವಾ ಕೊಡಲು ಒಪ್ಪಿರಬೇಕು.

೩) ಸೇವೆಯನ್ನು ಸ್ವಂತ ಪಡೆದಿರಬಹುದು ಅಥವಾ ಅದರ ಫಲಾನುಭವಿ ಮತ್ತೊಬ್ಬ ಆಗಿರಬಹುದು.[೩]

ಗ್ರಾಹಕರ ಶೋಷಣೆಗಳನ್ನು ತಪ್ಪಿಸಲು ಸರಕಾರ ವಿಶೇಷ ನ್ಯಾಯಾಲಯಗಳನ್ನು ತೆರೆದಿದೆ. ಅವು ಗ್ರಾಹಕನ ಹಿತರಕ್ಷಣೆಗಾಗಿಯೇ ರೂಪಗೊಂಡಿವೆ. ಗ್ರಾಹಕ ಈಗ ಸಿವ್ಹಿಲ್ ನ್ಯಾಯಾಲಯಕ್ಕೆ ಹೋಗಬೇಕಿಲ್ಲ. ನೂರಾರು ಸಲ ಅಲೆದಾಡಬೇಕಿಲ್ಲ. ಗ್ರಾಹಕ ವ್ಯಾಜ್ಯ ಪರಿಹಾರ ವೇದಿಕೆಗಳನ್ನು ಸಾಮಾನ್ಯವಾಗಿ ಗ್ರಾಹಕ ವೇದಿಕೆಗಳೆಂದು ಕರೆಯುವರು. ಈ ವೇದಿಕೆಗಳು ಜಿಲ್ಲೆಗೊಂದರಂತೆ ಕರ್ನಾಟಕದಲ್ಲಿ ೩೧ ಜಿಲ್ಲೆಗಳಲ್ಲಿ ಸ್ಥಾಪಿತಗೊಂಡಿವೆ.

ಗ್ರಾಹಕ ವೇದಿಕೆ ಪಂಚಾಯತ ಕೇಂದ್ರದ ಹಾಗೆ. ಆದರೆ ಅದಕ್ಕೆ ನ್ಯಾಯಾಲಯದ ಮಾನ್ಯತೆ ಇದೆ. ವಕೀಲರ ಸಹಾಯವಿಲ್ಲದೆ ವ್ಯವಹರಿಸಬಹುದು. ಅತಿ ಕಡಿಮೆ ಶುಲ್ಕ, ಕಡಿಮೆ ಕಾಲಾವಧಿಯಲ್ಲಿ ತೀರ್ಮಾನ ಸಾಧ್ಯ. ಇದರ ಕುರಿತು ಗ್ರಾಹಕರಿಗೆ ತಿಳುವಳಿಕೆ ಬೇಕು. ಸರಕಾರಿ ಕಚೇರಿಗಳಿಂದ, ಸೇವಾ ಸಂಸ್ಥೆಗಳಿಂದ  ಮಾಹಿತಿ ಪಡೆಯುವ ಹಕ್ಕು ಗ್ರಾಹಕರಿಗಿದೆ. ಸರಕು ಮಾರಾಟ ಉದ್ದಿಮೆಗಳು, ಬ್ಯಾಂಕುಗಳು, ಹಣಕಾಸು ಸಂಸ್ಥೆಗಳು, ವಿದ್ಯುತ್, ದೂರವಾಣಿ, ಮೊಬೈಲ್ ಇತ್ಯಾದಿ ಸೇವೆಗಳು ಈ ಕಾಯ್ದೆ ವ್ಯಾಪ್ತಿಗೆ ಬರುತ್ತವೆ. ಗ್ರಾಹಕರೇ ಎಚ್ಚರ! ಒಂದು ಸಲ ಮಾರಾಟ ಮಾಡಿದ ವಸ್ತುವನ್ನು ಹಿಂತಿರುಗಿಸುವಂತಿಲ್ಲ ಎನ್ನುವ ಮುದ್ರಿತ ಸೂಚನೆಗಳು ಈಗ ಬೆಲೆ ಕಳೆದುಕೊಂಡಿವೆ. ಗುಣಮಟ್ಟವಿಲ್ಲದಿದ್ದಾಗ ಪಡೆದ ವಸ್ತು ಹಿಂತಿರುಗಿಸಬಹದು. ವ್ಯಾಪಾರದಲ್ಲಿ ಪ್ರಾಮಾಣಿಕತೆ ಇರಲೇಬೇಕು. ಮೋಸ ಮಾಡುವ ಜನರನ್ನು ಶಿಕ್ಷಿಸುವ, ದಂಡಿಸುವ ಹಕ್ಕು ಅಧಿಕಾರ ಗ್ರಾಹಕರಿಗಿದೆ. ಎಚ್ಚೆತ್ತ ಗ್ರಾಹಕನೆ ನಿಜವಾದ ನಾಗರಿಕ.[೪]

ಒಂದು ಸಾದಾ ಪೇಪರ್‌ನ ಮೇಲೆಯೂ ಗ್ರಾಹಕ ವೇದಿಕೆಗಳಿಗೆ ದೂರು ಸಲ್ಲಿಸಬಹುದು. ಗ್ರಾಹಕ ತನ್ನ ವಾದವನ್ನು ತಾನೇ ಮಂಡಿಸಬಹುದು ಅಥವಾ ಗ್ರಾಹಕರ ಪರವಾಗಿ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳು, ನ್ಯಾಯವಾದಿಗಳ ಮೂಲಕ ವಾದ ಮಂಡಿಸಬಹುದು. ಈ ರೀತಿಯಿಂದ ಎಲ್ಲಾ ಬಗೆಯ ಸೌಲಭ್ಯಗಳನ್ನು ಗ್ರಾಹಕ ಶಾಸನ ಗ್ರಾಹಕನಿಗೆ ನೀಡಿದೆ.

ಜಿಲ್ಲಾ ಗ್ರಾಹಕ ವೇದಿಕೆಯಿಂದ ರಾಜ್ಯ ಆಯೋಗಕ್ಕೆ ಮುಂದೆ ಕೇಂದ್ರ ಆಯೋಗಕ್ಕೆ ಮೇಲ್ಮನವಿ ಸಲ್ಲಿಸುವ ಅಧಿಕಾರ ಗ್ರಾಹಕನಿಗೆ ಇದೆ. ಉಚ್ಛ ನ್ಯಾಯಾಲಯದ ತೀರ್ಪು ಅಂತಿಮ. ಈ ಎಲ್ಲಾ ಕೋರ್ಟಗಳಲ್ಲಿ ಲಕ್ಷಾಂತರ ಗ್ರಾಹಕರ ವ್ಯಾಜ್ಯಗಳು ಪರಿಹಾರ ಕಂಡಿವೆ. ಇದರಿಂದ ಗ್ರಾಹಕರಿಗೆ ಸಾಕಷ್ಟು ಲಾಭವಾಗಿದೆ. ಪರಿಹಾರ ಸಿಕ್ಕಿದೆ, ಮಾನಸಿಕ ಹಿಂಸೆಗೂ ಪರಿಹಾರ ಲಭಿಸಿದೆ.

ಗ್ರಾಮೀಣ ಭಾರತ ಜಾಗತಿಕ ಮಾರುಕಟ್ಟೆಗೆ ಪ್ರಚಂಡವಾದ ಮಾರುಕಟ್ಟೆಯನ್ನು ಒದಗಿಸಿಕೊಡುತ್ತಿದೆ. ೨/೩ದಷ್ಟು ಗ್ರಾಹಕರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ನಿಗಮ (ಕಂಪನಿ)ಗಳಿಗೆ ಗ್ರಾಮೀಣ ಮಾರುಕಟ್ಟೆ ಆಕರ್ಷಣೀಯವಾಗಿ ಕಾಣುತ್ತಿದೆ. ಭಾರತದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳಿಂದ ಗ್ರಾಮೀಣ ಗ್ರಾಹಕನಿಗೆ ತನ್ನ ಅವಶ್ಯಕತೆ ಹಾಗೂ ಜೀವನ ಮಟ್ಟದ ಉನ್ನತೀಕರಣದ ಕುರಿತು ಅರಿವು ಮೂಡುತ್ತಿದೆ. ಮಾಹಿತಿ ತಂತ್ರಜ್ಞಾನ, ಸರಕಾರದ ಸವಲತ್ತುಗಳು, ನಿಗಮಗಳ ಮಾರುಕಟ್ಟೆಯ ಕೌಶಲ್ಯಗಳು ಹಾಗೂ ಉಪಗ್ರಹ ಸಂವಹನ ಮಾಧ್ಯಮಗಳು ಗ್ರಾಮೀಣ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸುತ್ತಿವೆ. ಆದ್ದರಿಂದ ಇಂದು ಗ್ರಾಮೀಣ ಗ್ರಾಹಕನಿಗೆ ಗ್ರಾಹಕತ್ವದ ತಿಳುವಳಿಕೆ ಬೇಕು. ಗ್ರಾಹಕ ಚಳುವಳಿ ಈ ಗ್ರಾಹಕ ಸಮುದಾಯದ ಮೇಲೆ ನಿಂತಿದೆ. ಗ್ರಾಹಕನಿಗೆ ತನ್ನ ಹಕ್ಕುಗಳ ಕುರಿತು ಅರಿವು ಬೇಕು. ಈ ಸಂದರ್ಭದಲ್ಲಿ ಗ್ರಾಹಕ ವೇದಿಕೆಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಬೇಕು.[೫]

ನಗರ ಪ್ರದೇಶಗಳಿಗೆ ಹೋಲಿಸಿದರೆ, ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಹಕ ಜಾಗೃತಿ ತುಂಬಾ ಕಡಿಮೆ. ಕಾರ್ಯನಿರತವಾದಾಗಿನಿಂದ ಇಲ್ಲಿಯವರೆಗೆ ಗ್ರಾಹಕ ವೇದಿಕೆಗಳಲ್ಲಿ ದಾಖಲಾದ ವ್ಯಾಜ್ಯಗಳಲ್ಲಿ, ನಗರ ಕೇಂದ್ರಿತ ಗ್ರಾಹಕ ವ್ಯಾಜ್ಯಗಳೇ ಹೆಚ್ಚು. ಗ್ರಾಹಕನಿಗೆ ಅತಿ ಕಡಿಮೆ ವೆಚ್ಚದಲ್ಲಿ ಸರಿಯಾಗಿ ತ್ವರಿತವಾಗಿ ನ್ಯಾಯ ಒದಗಿಸಲು ಗ್ರಾಹಕ ವೇದಿಕೆಗಳು ಇವೆ. ಇದರ ಸೌಲಭ್ಯವನ್ನು ಗ್ರಾಮೀಣ ಜನರು ಪಡೆಯಬೇಕು. ಗ್ರಾಹಕ ವೇದಿಕೆಯಿಂದ ಆಗುವ ದೊಡ್ಡ ಲಾಭ ಎಂದರೆ ಶೀಘ್ರ ಗತಿಯಲ್ಲಿ ವ್ಯಾಜ್ಯಗಳನ್ನು ಇತ್ಯರ್ಥ ಮತ್ತು ಗ್ರಾಹಕರನ್ನು ಶೋಷಣೆಯಿಂದ ಮುಕ್ತಗೊಳಿಸುವುದು. ಇಷ್ಟೆಲ್ಲ ಸೌಲಭ್ಯಗಳಿದ್ದರೂ ತಮಗಾಗಿರುವ ಅನ್ಯಾಯಕ್ಕೆ ಗ್ರಾಹಕ ವೇದಿಕೆಗೆ ಮೊರೆ ಹೋಗಬೇಕೆನ್ನುವ ಬಗ್ಗೆ ಜನರಲ್ಲಿ ಅರಿವಿಲ್ಲ. ಈ ಬಗ್ಗೆ ಹೆಚ್ಚಿನ ಜಾಗೃತಿ ಆಗಬೇಕಿದೆ.[೬]

ಬಹಳಷ್ಟು ಅಧ್ಯಯನಗಳು ಇಲ್ಲಿಯವರೆಗೆ ನಡೆದಿದ್ದರೂ, ಆ ಎಲ್ಲ ಅಧ್ಯಯನಗಳು ಗ್ರಾಹಕನ ಸಂರಕ್ಷಣೆಯ ಕುರಿತು ಆಗಿವೆ. ಈ ಅಧ್ಯಯನದಲ್ಲಿ ಸಾಮಾನ್ಯವಾಗಿ ಕೆಲವು ಗ್ರಾಹಕ ವೇದಿಕೆಯ ಕಾರ್ಯ ವಿಧಾನವನ್ನು ವಿವರಿಸಲಾಗಿದೆ. ಇನ್ನೂ ಕೆಲವು ಅಧ್ಯಯನಗಳು ಗ್ರಾಹಕ ನಡುವಳಿಕೆಯ ಕುರಿತಾಗಿವೆ. ಇದುವರೆಗೆ ಗ್ರಾಹಕ ವೇದಿಕೆಯ ಕಾರ್ಯ ವೈಖರಿ ಹಾಗೂ ಗುಣಮಟ್ಟದ ನಿಷ್ಕರ್ಷೆಯ ಕುರಿತು ಪ್ರತ್ಯೇಕ ಅಧ್ಯಯನಗಳಾಗಿರುವುದಿಲ್ಲ. ಗ್ರಾಹಕ ವೇದಿಕೆಯ ಕೆಲಸವನ್ನು ವಿಮರ್ಶೆ ಮಾಡದೆ, ಗ್ರಾಹಕ ಸಂರಕ್ಷಣೆಯ ಕುರಿತು ಅಧ್ಯಯನ ಮಾಡುವುದು ಅಸಮಂಜಸವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಅಲ್ಲದೆ ಗ್ರಾಹಕ ವೇದಿಕೆಯನ್ನು ಅದು ಸ್ಥಾಪಿಸಲ್ಪಟ್ಟ ವರ್ಷದಿಂದ ಅಧ್ಯಯನ ಮಾಡುವುದರಿಂದ ಗ್ರಾಹಕ ವೇದಿಕೆಯ ಕಾರ್ಯ ವಿಧಾನದ ಮೇಲೆ ಸ್ಪಷ್ಟವಾದ ನಿಲುವು ತಾಳಲು

ಸಹಾಯವಾಗುತ್ತದೆ. ಗ್ರಾಹಕ ವೇದಿಕೆಯ ಕಾರ್ಯ ವಿಧಾನವು ಆ ಕ್ಷೇತ್ರದ ಗ್ರಾಹಕರ ಅರಿವು, ಗ್ರಾಹಕ ಸ್ವಯಂ ಸಂಘಗಳ ಕಾರ್ಯ ವಿಧಾನ, ಗ್ರಾಹಕ ಶಿಕ್ಷಣ, ಮೊಕದ್ದಮೆಯ ವಿಷಯ, ಸರಕಾರದ ಗ್ರಾಹಕ ಸಂಬಂಧಿ ಕಾರ್ಯಕ್ರಮ ಮುಂತಾದವುಗಳ ಮೇಲೆ ಅವಲಂಬಿಸಿರುತ್ತದೆ. ಈ ಕಾರಣಗಳಿಂದ ಪ್ರಸ್ತುತ ಅಧ್ಯಯನದಲ್ಲಿ ಆ ಎಲ್ಲ ವಿಷಯಗಳನ್ನು ಅಳವಡಿಸುವ ಪ್ರಯತ್ನ ಮಾಡಲಾಗಿದೆ.

ಒಂದು ಗ್ರಾಹಕ ವೇದಿಕೆಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವುದನ್ನು ಅದು ಎಲ್ಲ ಗ್ರಾಹಕ ವೇದಿಕೆಗಳನ್ನು ಪ್ರತಿನಿಧಿಸುತ್ತಿದೆಯೆಂಬ ಅಭಿಪ್ರಾಯ ಪಡಬಾರದು. ಏಕೆಂದರೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಚಿತ್ರಣ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಬದಲಾಗುತ್ತ ಹೋಗುತ್ತದೆ. ಒಂದು ಗ್ರಾಹಕ ವೇದಿಕೆಯನ್ನು ಪರೀಕ್ಷೆ ಮಾಡುವುದರಿಂದ; ವಿಶ್ಲೇಷಿಸುವದರಿಂದ, ನಿಷ್ಕರ್ಷ ಮಾಡುವದರಿಂದ, ಹಲವಾರು ಗುಣಲಕ್ಷಣಗಳು ಬೇರೆ ಗ್ರಾಹಕ ವೇದಿಕೆಗಳಲ್ಲಿಯೂ ಸಾಮಾನ್ಯವಾಗಿ ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಕೊಳ್ಳಲಾಗಿದೆ.

ಇಲ್ಲಿಯವರೆಗೆ ನಡೆದ ಅಧ್ಯಯನಗಳಲ್ಲಿ ಗ್ರಾಹಕ ವೇದಿಕೆಯ ಪರಿಕಲ್ಪನೆಯಾಗಲಿ, ಗ್ರಾಹಕ ವೇದಿಕೆಯ ಹುಟ್ಟು ಬೆಳವಣಿಗೆಯ ಕುರಿತಾಗಲಿ ಕಟ್ಟಿಕೊಡುವ ಪ್ರಯತ್ನವಾಗಿಲ್ಲ. ಈ ಅಧ್ಯಯನದಲ್ಲಿ ಗ್ರಾಹಕ ವೇದಿಕೆಯ ಪರಿಕಲ್ಪನೆಯ ಕುರಿತು ವಿಷಯವನ್ನು ನೀಡಲು ಪ್ರಯತ್ನಿಸಲಾಗಿದೆ. ಅಲ್ಲದೆ ಗ್ರಾಹಕ ವೇದಿಕೆಯ ಸರ್ವೆಸಾಮಾನ್ಯವಾದ ಹುಟ್ಟು ಬೆಳವಣಿಗೆಯ ಕುರಿತು ಮಾಹಿತಿ ಕೊಡಲು ಪ್ರಯತ್ನಿಸಲಾಗಿದೆ.

**೧.೩ ಅಧ್ಯಯನದ ಉದ್ಧೇಶಗಳು :**

೧) ಗ್ರಾಹಕ ಮತ್ತು ಗ್ರಾಹಕ ಸಂರಕ್ಷಣೆಯ ವಿವಿಧ ಅಂಶಗಳನ್ನು ಅಧ್ಯಯನ ಮಾಡುವುದು, ಗ್ರಾಹಕ ಸಂರಕ್ಷಣಾ ಕಾನೂನು ೧೯೮೬ರ ಮುಖ್ಯ ಅಂಶಗಳ ಮೇಲೆ ಬೆಳಕು ಚೆಲ್ಲುವುದು.

೨) ಗ್ರಾಹಕ ವೇದಿಕೆ, ರಾಜ್ಯ ಆಯೋಗ, ರಾಷ್ಟ್ರೀಯ ಆಯೋಗಗಳ ಜೊತೆಗೆ, ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯ ಕಾರ್ಯವಿಧಾನವನ್ನು ಅರಿಯುವುದು ಮತ್ತು ವಿಶ್ಲೇಷಿಸುವುದು.

೩) ಗ್ರಾಹಕ ವ್ಯಾಜ್ಯ ಪರಿಹಾರಗಳ ಏಜೆನ್ಸಿಗಳ (ಅಭಿಕರಣಗಳ) ಕಾರ್ಯ ನಿರ್ವಹಣೆಯ ವಿಶ್ಲೇಷಣೆ.

೪) ಗ್ರಾಹಕ ಸಂರಕ್ಷಣೆಯಲ್ಲಿ ಸರ್ಕಾರಗಳ ಪಾತ್ರವನ್ನು ವಿಶ್ಲೇಷಿಸುವುದು.

೫) ರಾಜ್ಯದಲ್ಲಿಯ ಗ್ರಾಹಕ ಸ್ವಯಂ ಸಂಸ್ಥೆಗಳ ಕುರಿತು ವಿಶ್ಲೇಷಣಾತ್ಮಕ ಅಧ್ಯಯನ ಮಾಡುವುದು.

೬) ಬೆಳಗಾವಿ ಜಿಲ್ಲೆಯ ಮೊಕದ್ದಮೆ ಹೂಡಿದ ಗ್ರಾಹಕರ ಅನುಭವಗಳನ್ನು ವಿಶ್ಲೇಷಿಸುವುದು.

೭) ಅಧ್ಯಯನಕ್ಕೆ ಒಳಪಡಿಸಿದ ಆಯ್ದ ತಾಲೂಕಿನ ಸಾಮಾನ್ಯ ಗ್ರಾಹಕರ ಅನುಭವಗಳನ್ನು ವಿಶ್ಲೇಷಿಸುವುದು.

೮) ಗ್ರಾಹಕ ವೇದಿಕೆಯ ಕಾರ್ಯ ನಿರ್ವಹಣೆಯ ಗುಣ ಮಟ್ಟವನ್ನು ಹೆಚ್ಚಿಸಲು ಸಲಹೆಗಳನ್ನು ಕೊಡುವುದು.

**೧.೪ ಅಧ್ಯಯನದ ವ್ಯಾಪ್ತಿ :**

ಅಧ್ಯಯನ ವ್ಯಾಪ್ತಿಯು ಹಾಗೂ ಮಿತಿಯು ಕರ್ನಾಟಕದ ವೇದಿಕೆಗಳಲ್ಲಿನ ಒಂದು ಗ್ರಾಹಕ ವೇದಿಕೆಯನ್ನು ಒಳಗೊಂಡಿದೆ. ಈ ಅಧ್ಯಯನಕ್ಕೆ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಲಾಗಿದೆ.

ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯ ಅಧ್ಯಯನದ ಸಂದರ್ಭದಲ್ಲಿ ಗ್ರಾಹಕ ವೇದಿಕೆಯ ಕುರಿತು ಈವರೆಗಿನ ಎಲ್ಲ ಪ್ರಮುಖ ಅಧ್ಯಯನಗಳನ್ನು ಅವಲೋಕಿಸಲಾಗಿದೆ. ಸಾಮಾನ್ಯವಾದ ಅಧ್ಯಯನಗಳು, ಗ್ರಾಹಕ ಸಂರಕ್ಷಣೆಯ ಅಧ್ಯಯನದ ಬೆಳವಣಿಗೆ, ಗ್ರಾಹಕ ಸಂರಕ್ಷಣೆಯಲ್ಲಿ ಸರಕಾರದ ಪಾತ್ರ ಮುಂತಾದ ಅಂಶಗಳನ್ನು ಪರಿಶೀಲಿಸಲಾಗಿದೆ.

ಅಧ್ಯಯನದ ವ್ಯಾಪ್ತಿಯಲ್ಲಿ ಇಲ್ಲಿಯವರೆಗೆ ಸ್ಥಾಪನೆಗೊಂಡ ೧೩೫ ಕರ್ನಾಟಕದ ಗ್ರಾಹಕ ಸ್ವಯಂ ಸಂಸ್ಥೆಗಳ, ಗ್ರಾಹಕ ವೇದಿಕೆಯ ಕುರಿತು ಸಾಮಾನ್ಯವಾದ ಅಭಿಪ್ರಾಯವನ್ನು ಅಳವಡಿಸಿಕೊಳ್ಳಲಾಗಿದೆ.

ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯ ಕಾರ್ಯ ಕ್ಷಮತೆಯನ್ನು ಅರಿಯಲು, ವ್ಯಾಜ್ಯವನ್ನು ಬೆಳಗಾವಿ ಜಿಲ್ಲಾ ವೇದಿಕೆಯಲ್ಲಿ ದಾಖಲಿಸಿ ಪರಿಹಾರ ಕಂಡುಕೊಂಡ ಬೆಳಗಾವಿ ಜಿಲ್ಲೆಯ, ಎಂಟು ತಾಲೂಕಿನ ಗ್ರಾಹಕರ ಅಭಿಪ್ರಾಯಗಳನ್ನು ಕ್ರೋಢಿಕರಿಸಿ ವಿಶ್ಲೇಷಿಸಲಾಗಿದೆ.

ಹಾಗೆಯೇ ಅಧ್ಯಯನದಲ್ಲಿ ಚಿಕ್ಕೋಡಿ ತಾಲೂಕಿನ ನಾಲ್ಕು ಹೋಬಳಿಗಳ ೪೦೦ ಸಾಮಾನ್ಯ ಗ್ರಾಹಕರಿಂದ ಸಂಗ್ರಹಿಸಿದ ಮಾಹಿತಿಯನ್ನು ಅಧ್ಯಯನದಲ್ಲಿ ಬಳಸಿಕೊಂಡು ಅನ್ವೇಷಿಸಲಾಗಿದೆ.

೧೯೮೯ರಲ್ಲಿ ಸ್ಥಾಪನೆಗೊಂಡ ಬೆಳಗಾವಿ ಜಿಲ್ಲಾ ವೇದಿಕೆಯ ಕಾರ್ಯ ನಿರ್ವಹಣೆಯ ವಿಶ್ಲೇಷಣೆ ಮತ್ತು ಕಾರ್ಯ ಗುಣಮಟ್ಟದ ನಿಷ್ಕರ್ಷ ಮಾಡುವಾಗ ಈ ಕೆಳಗಿನ ಅಂಶಗಳನ್ನು ಪರಿಗಣಿಸಲಾಗಿದೆ:

೧) ಬೆಳಗಾವಿ ಜಿಲ್ಲಾ ವೇದಿಕೆಯ ಇಪ್ಪತ್ತು ವರ್ಷಗಳ ಕಾರ್ಯ ವಿಧಾನವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. (೧೯೮೯ ರಿಂದ ೨೦೦೯ರ ವರೆಗೆ)

೨) ಬೆಳಗಾವಿ ಜಿಲ್ಲೆಯ ಎಂಟು ತಾಲೂಕುಗಳ ಮೊಕದ್ದಮೆ ಹೂಡಿದ ಗ್ರಾಹಕರನ್ನು ಆಯ್ಕೆ ಮಾಡುವಾಗ ೨೦೦೫ ರಿಂದ ೨೦೦೯ರ ವರೆಗೆ ಮೊಕದ್ದಮೆ ದಾಖಲಿಸಿದವರನ್ನು ಗಣನೆಗೆ ತೆಗೆದುಕೊಂಡಿದೆ.

೩) ಕರ್ನಾಟಕದ ಗ್ರಾಹಕ ಸ್ವಯಂ ಸಂಘಗಳ ಮಾಹಿತಿಯನ್ನು ಕ್ರೋಢಿಕರಿಸಲು ೨೦೦೫ ರಿಂದ ೨೦೦೯ರ ವರೆಗಿನ ಅವಧಿಯನ್ನು ಪರಿಗಣಿಸಲಾಗಿದೆ.

**೧.೫. ಅಧ್ಯಯನದ ಪರಿಮಿತಿ :**

೧. ಈ ಅಧ್ಯಯನವು ಕರ್ನಾಟಕ ರಾಜ್ಯದ ಗ್ರಾಹಕ ವೇದಿಕೆಗಳಿಗೆ ಸಂಬಂಧಿಸಿದ್ದಾಗಿದ್ದರೂ ಹೆಚ್ಚಿನ ಆದ್ಯತೆಯನ್ನು ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆ ಮತ್ತು ಚಿಕ್ಕೋಡಿ ತಾಲೂಕಿನ ಗ್ರಾಹಕರಲ್ಲಿರುವ ಜಾಗೃತಿಯ ಅಧ್ಯಯನಕ್ಕೆ ನೀಡಲಾಗಿದೆ. ಹೀಗಾಗಿ ಈ ಅಧ್ಯಯನದ ಫಲಿತಗಳು ರಾಜ್ಯದ ಬೇರೆ ಗ್ರಾಹಕ ವೇದಿಕೆಗಳಿಗೆ ತಾತ್ವಿಕವಾಗಿ ಅನ್ವಯಿಸಬಹುದು.

೨. ಆನುಷಂಗಿಕ ಮಾಹಿತಿ (ಪ್ರಾಥಮಿಕವಲ್ಲದ)ಗಳನ್ನು ಹಲವಾರು ಲೇಖನಗಳಿಂದ, ವಿಚಾರ ಸಂಕಿರಣ, ಕಾರ್ಯಾಗಾರಗಳಲ್ಲಿ ಪ್ರಸ್ತುತಪಡಿಸಿದ ಲೇಖನಗಳಿಂದ ಕ್ರೋಢಿಕರಿಸಲಾಗಿದೆ. ಹಾಗೆಯೇ ಕೇಂದ್ರ ಸರಕಾರ ಬಿಡುಗಡೆ ಮಾಡಿದ ಅಂತರ್ಜಾಲದಿಂದಲೂ ಕಲೆ ಹಾಕಲಾಗಿದೆ. ಏಕೆಂದರೆ ಗ್ರಾಹಕ ಚಳುವಳಿಯ ಕುರಿತಾಗಲಿ, ಗ್ರಾಹಕ ವೇದಿಕೆಯ ಇತಿಹಾಸದ ಕುರಿತಾಗಲಿ ಈಗ ಉಪಲಬ್ಧವಿರುವ ಸಾಹಿತ್ಯ ಕಡಿಮೆ.

೩. ಆನುಷಂಗಿಕ ಮಾಹಿತಿಯನ್ನು ಬೆಳಗಾವಿ ಜಿಲ್ಲಾ ವೇದಿಕೆಯಿಂದ ಕ್ರೋಢಿಕರಿಸಲಾಗಿದೆ.

೪. ಮೊಕದ್ದಮೆ ಹೂಡಿದ ಗ್ರಾಹಕರ ವಿಳಾಸಗಳನ್ನು ಪಡೆಯಲು ಬೆಳಗಾವಿ ಗ್ರಾಹಕ ವೇದಿಕೆಯ ೫ ವರ್ಷದ ದಸ್ತಾವೇಜುಗಳನ್ನು ಪರಿಶೀಲಿಸಲಾಗಿದೆ.

೫. ಗ್ರಾಹಕ ರಕ್ಷಣಾ ಪರಿಷತ್ ಹಾಗೂ ಸರಕಾರದ ವಿವಿಧ ಇಲಾಖೆಗಳ ಕಾರ್ಯ ವಿಧಾನವನ್ನು ವಿಶ್ಲೇಷಿಸಲು, ಸರಕಾರಿ ಇಲಾಖೆಯವರು ಕೊಟ್ಟ ೨೦೦೭ರ ವರೆಗಿನ ಮಾಹಿತಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

೬. ಪ್ರಾಥಮಿಕ ಮಾಹಿತಿಯನ್ನು ಕ್ರೋಢಿಕರಿಸುವಾಗ, ಅನಿವಾರ್ಯ ಸಂದರ್ಭಗಳಲ್ಲಿ ಗ್ರಾಹಕ ಸ್ವಯಂ ಸೇವಾ ಸಂಸ್ಥೆಗಳ ಮಾಹಿತಿಯನ್ನು ಅಂಚೆ ಮುಖಾಂತರ ಪಡೆಯಲಾಯಿತು. ಮಾಹಿತಿ ಕಲೆ ಹಾಕಲು ಕನಿಷ್ಠ ಆರು ತಿಂಗಳು ಬೇಕಾಯಿತು.

೭. ಮೊಕದ್ದಮೆ ಹೂಡಿದ ಗ್ರಾಹಕರಿಂದ ಮಾಹಿತಿಯನ್ನು ಪಡೆಯುವಾಗ ವಿಶೇಷವಾಗಿ ಚಿಕ್ಕೋಡಿ ತಾಲೂಕಿನ ಗ್ರಾಹಕರನ್ನು ಹಾಗೂ ಬೆಳಗಾವಿ ತಾಲೂಕಿನ ಗ್ರಾಹಕರನ್ನು ಪರಿಗಣಿಸಲಾಗಿದೆ.

೮. ಸಾಮಾನ್ಯ ಗ್ರಾಹಕರಿಂದ ಮಾಹಿತಿ ಕಲೆ ಹಾಕಲು ಸಂದರ್ಶನ ಹಾಗೂ ಪ್ರಶ್ನಾವಳಿ ವಿಧಾನ ಬಳಸಲಾಗಿದೆ.

**೧.೬ ಅಧ್ಯಯನದ ವಿಧಾನ :**

ಈ ಅಧ್ಯಯನವು ಸಮೀಕ್ಷೆ ಆಧಾರಿತ ಅಧ್ಯಯನವಾಗಿದೆ. ಪ್ರಾಥಮಿಕ ಮತ್ತು ಅನುಷಂಗಿಕ ಎರಡು ತರಹದ ಮಾಹಿತಿಯನ್ನು ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಗಿದೆ.

೧. ಅನುಷಂಗಿಕ ಮಾಹಿತಿಯನ್ನು ಪ್ರಕಟಿತ ಲೇಖನಗಳಿಂದ (ಉದಾ: ನಿಯತಕಾಲಿಕೆಗಳು, ಪುಸ್ತಕಗಳು, ಅಂತರ್ಜಾಲ ಮುಂತಾದವುಗಳು) ಹಾಗೂ ಅಪ್ರಕಟಿತ ಲೇಖನಗಳಿಂದ (ಉದಾ: ವಿಚಾರಸಂಕಿರಣ, ಕಮ್ಮಟ ಹಾಗೂ ಸಮ್ಮೇಳನಗಳಲ್ಲಿ ಮಂಡಿಸಿದ ಲೇಖನಗಳು) ಕ್ರೋಢಿಕರಿಸಲಾಗಿದೆ.

ಗ್ರಾಹಕ ವೇದಿಕೆಯ ದಾಖಲಾತಿಗಳನ್ನು, ವ್ಯಾಜ್ಯ ದಾಖಲಾಯಿಸಿದ ದಸ್ತಾವೇಜುಗಳನ್ನು, ಗ್ರಾಹಕ ವೇದಿಕೆ ಬಿಡುಗಡೆ ಮಾಡಿದ ಪರಿಹಾರ ನೀಡಿದ ವ್ಯಾಜ್ಯಗಳ ಪಟ್ಟಿಯನ್ನು, ಬೆಳಗಾವಿ ಜಿಲ್ಲಾ ಅಂಕಿ ಮತ್ತು ಸಂಖ್ಯಾ ಇಲಾಖೆಯವರು ಬಿಡುಗಡೆ ಮಾಡಿದ ಪುಸ್ತಕವನ್ನು ಅಧ್ಯಯನಕ್ಕೆ ಉಪಯೋಗಿಸಲಾಗಿದೆ.

ತಹಶೀಲ್ದಾರ ಕಚೇರಿಯವರು ಬಿಡುಗಡೆ ಮಾಡಿದ ಗ್ರಾಹಕರ ಕುರಿತು ಪುಸ್ತಕಗಳನ್ನು, ಗ್ರಾಹಕ ಸ್ವಯಂ ಸಂಸ್ಥೆಗಳು ಬಿಡುಗಡೆ ಮಾಡಿದ ಪುಸ್ತಕಗಳನ್ನು, ಜಿಲ್ಲಾ ಹಾಗೂ ತಾಲೂಕು ಗ್ರಾಮ ಪಂಚಾಯತಿ ಕಚೇರಿಯ ಅಪ್ರಕಟಿತ ದಾಖಲಾತಿಗಳನ್ನು ಕೂಡ ಉಪಯೋಗಿಸಲಾಗಿದೆ.

ಬೆಳಗಾವಿ ಜಿಲ್ಲಾಧಿಕಾರಿ ಕಛೇರಿಯಿಂದ ಅಪ್ರಕಟಿತ ದಾಖಲಾತಿಗಳನ್ನು ಹೇರಳವಾಗಿ ಉಪಯೋಗಿಸಲಾಗಿದೆ. ಸರಕಾರಿ ವಿವಿಧ ಇಲಾಖೆಗಳಿಂದ ಪ್ರಕಟಣೆಗೊಂಡ ನಾಗರಿಕ ಸನದುಗಳನ್ನು ಉಪಯೋಗಿಸಿದೆ.

೨. ಪ್ರಾಥಮಿಕ ಮಾಹಿತಿಯನ್ನು ಪಡೆಯಲು ಪ್ರಶ್ನಾವಳಿಗಳನ್ನು ಅವಲಂಭಿಸಲಾಗಿದೆ.

ಗ್ರಾಹಕ ಸ್ವಯಂ ಸಂಸ್ಥೆಗಳಿಂದ ಮಾಹಿತಿ ಪಡೆಯಲು ಮಾದರಿ ಪ್ರಶ್ನಾವಳಿಗಳನ್ನು ೧೩೫ ಗ್ರಾಹಕ ಸಂಸ್ಥೆಗಳಿಗೆ ಅಂಚೆ ಮೂಲಕ ಕಳುಹಿಸಲಾಯಿತು.

ಮೊಕದ್ದಮೆ ಹೂಡಿದ ಗ್ರಾಹಕರಿಂದ ವಿಷಯ ಸಂಗ್ರಹಿಸಲು ವೈಯಕ್ತಿಕವಾಗಿ ಭೆಟ್ಟಿ ಮಾಡಲಾಗಿದೆ. ಇಲ್ಲಿ ಅಂಥ ೧೦೦ ಗ್ರಾಹಕರಿಂದ ಮಾಹಿತಿ ಪಡೆದು ವಿಶ್ಲೇಷಿಸಲಾಗಿದೆ. ಚಿಕ್ಕೋಡಿ ತಾಲೂಕಿನ ನಾಲ್ಕು ಹೋಬಳಿಗಳಿಂದ ೪೦೦ ಸಾಮಾನ್ಯ ಗ್ರಾಹಕರಿಂದ ವಿವರಗಳನ್ನು ಸಂಗ್ರಹಿಸಲಾಗಿದೆ.

೩. ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಲು ಕೆಳಗಿನ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಲಾಗಿದೆ.

ಎ) (ಯಾದ್ರೇಚ್ಛಿತ) ಪೂರ್ವೋದ್ದೇಶ ರಹಿತ ಪದ್ಧತಿ ಅಳವಡಿಸಿ, ಗ್ರಾಹಕ ನಮೂನೆಯನ್ನು ಆರಿಸುವುದು. (Simple Random Sampling)

ಬ) ಆವೃತ್ತಿ ವಿತರಣ ಕೋಷ್ಟಕ (Frequency Distribution Table)

ಸಿ) ಅನುಪಾತ (Proportion/ Ratio)

ಡಿ) ಸರಾಸರಿ (Average)

ಇ) ಶೇಕಡಾವಾರು (Percentage)

ಸಾಂಖ್ಯಿಕ ವಿವರಗಳಿಗೆ ರೇಖಾ ಕೃತಿಗಳನ್ನು ಬಳಸಿಕೊಳ್ಳಲಾಗಿದೆ.

**೧.೭ ಅಧ್ಯಯನದ ಸ್ವರೂಪ :**

**ಅಧ್ಯಾಯ –೧**

ಈ ಅಧ್ಯಾಯದಲ್ಲಿ ಪರಿಹರಿಸಲ್ಪಟ್ಟ ವ್ಯಾಜ್ಯಗಳ ವಿವರದೊಂದಿಗೆ ಅಧ್ಯಯನದ ಸ್ವರೂಪ ಅಗತ್ಯ, ಉದ್ಧೇಶ, ವ್ಯಾಪ್ತಿ, ಪರಿಮಿತಿ ಹಾಗೂ ವಿಧಾನಗಳನ್ನು ರೂಪಿಸಲಾಗಿದೆ.

**ಅಧ್ಯಾಯ –೨**

ಈ ಅಧ್ಯಾಯದಲ್ಲಿ ಅಧ್ಯಯನ ಸಾಹಿತ್ಯದ ಅವಲೋಕನ ಮಾಡಲಾಗಿದೆ. ವಿಷಯದ ಕುರಿತು ಗ್ರಂಥಗಳು, ದಾಖಲೆಗಳು, ದಸ್ತಾವೇಜುಗಳು, ಕಡತಗಳು ಹಾಗೂ ಅಪ್ರಕಟಿತ ಅಧ್ಯಯನಗಳನ್ನು ಅವಲೋಕಿಸಲಾಗಿದೆ.

**ಅಧ್ಯಾಯ –೩**

ಈ ಅಧ್ಯಾಯದಲ್ಲಿ ಗ್ರಾಹಕ ವೇದಿಕೆಯ ಸ್ವರೂಪ, ಗ್ರಾಹಕತ್ವದ ವಿವಿಧ ವ್ಯಾಖ್ಯೆಗಳು, ಭಾರತದಲ್ಲಿ ಗ್ರಾಹಕ ಚಳುವಳಿಯ ಬೆಳವಣಿಗೆ, ಗ್ರಾಹಕ ವೇದಿಕೆಯ ಪರಿಕಲ್ಪನೆಯ ಕುರಿತು ವಿವರಿಸಲಾಗಿದೆ.

**ಅಧ್ಯಾಯ –೪**

ಈ ಅಧ್ಯಾಯದಲ್ಲಿ ಗ್ರಾಹಕ ಸಂರಕ್ಷಣಾ ಏಜೆನ್ಸಿಗಳ ಕುರಿತು ವಿವರಣೆ ಇದೆ. ಇದು ರಾಷ್ಟ್ರೀಯ ಆಯೋಗ, ರಾಜ್ಯ ಆಯೋಗ ಹಾಗೂ ಜಿಲ್ಲಾ ಆಯೋಗದ ಎಲ್ಲ ಮಾಹಿತಿಗಳನ್ನು ಒಳಗೊಂಡಿದೆ. ಎರಡನೇ ಭಾಗದಲ್ಲಿ ಬೆಳಗಾವಿ ಗ್ರಾಹಕ ವೇದಿಕೆಯ ಕಾರ್ಯ ವಿಧಾನ ಹಾಗೂ ಗ್ರಾಹಕರೊಂದಿಗಿನ ಸ್ಪಂದನೆಗಳ ಕುರಿತು ನಿಷ್ಕರ್ಷಿಸಲಾಗಿದೆ.

**ಅಧ್ಯಾಯ –೫**

ಈ ಅಧ್ಯಾಯವು ಗ್ರಾಹಕ ಸಂರಕ್ಷಣೆಯಲ್ಲಿ ಸರಕಾರದ ಪಾತ್ರವನ್ನು ರೇಖಿಸುವುದು. ಕೇಂದ್ರ, ರಾಜ್ಯ ಹಾಗೂ ಜಿಲ್ಲಾ ಪರಿಷತ್ತುಗಳ ಮಾಹಿತಿಗಳೊಂದಿಗೆ ಸರಕಾರದ ವಿವಿಧ ಇಲಾಖೆಗಳಲ್ಲಿ ಗ್ರಾಹಕ ಸಂರಕ್ಷಣೆಯ ವಿಧಿ–ವಿಧಾನಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ –೬**

ಈ ಅಧ್ಯಾಯದಲ್ಲಿ ಕರ್ನಾಟಕ ಗ್ರಾಹಕ ಸ್ವಯಂ ಸಂಸ್ಥೆಗಳ ವಿವರವನ್ನು ಅಳವಡಿಸಲಾಗಿದೆ. ೭೨ ಗ್ರಾಹಕ ಸ್ವಯಂ ಸಂಸ್ಥೆಗಳಿಂದ ಪಡೆದುಕೊಂಡ ಮಾಹಿತಿಯನ್ನು ಸಂಖ್ಯಾಶಾಸ್ತ್ರ ಪದ್ಧತಿಗೆ ಅಳವಡಿಸಿ, ವಿಶ್ಲೇಷಿಸಲಾಗಿದೆ. ಗ್ರಾಹಕ ವೇದಿಕೆಗಳ ಕುರಿತು, ಗ್ರಾಹಕ ಸ್ವಯಂ ಸಂಸ್ಥೆಗಳ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

**ಅಧ್ಯಾಯ –೭**

ಈ ಅಧ್ಯಾಯವು ಬೆಳಗಾವಿ ಜಿಲ್ಲೆಯಲ್ಲಿರುವ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ಮೊಕದ್ದಮೆ ದಾಖಲಿಸಿದ ಗ್ರಾಹಕರ ಮಾಹಿತಿಯನ್ನು ಒಳಗೊಂಡಿದೆ. ಈ ಮಾಹಿತಿಯನ್ನು ವಿಶ್ಲೇಷಣೆ ಮಾಡಿ ಬೆಳಗಾವಿ ಗ್ರಾಹಕ ವೇದಿಕೆಯ ಬಗ್ಗೆ ಅಭಿಪ್ರಾಯವನ್ನು ರೂಪಿಸಲಾಗಿದೆ.

**ಅಧ್ಯಾಯ –೮**

ಚಿಕ್ಕೋಡಿ ತಾಲೂಕಿನ ನಾಲ್ಕು ಹೋಬಳಿಗಳಲ್ಲಿರುವ ೪೦ ಗ್ರಾಮಗಳ ೪೦೦ ಸಾಮಾನ್ಯ ಗ್ರಾಹಕರನ್ನು ಆಯ್ಕೆ ಮಾಡಿ ಪಡೆದುಕೊಂಡ ಮಾಹಿತಿಯನ್ನು ೮ನೇ ಅಧ್ಯಾಯದಲ್ಲಿ ಕ್ರೋಢಿಕರಿಸಿ, ವಿಶ್ಲೇಷಿಸಲಾಗಿದೆ.

**ಅಧ್ಯಾಯ –೯**

ಈ ಅಧ್ಯಾಯವು ಅಧ್ಯಯನದ ಫಲಿತಗಳನ್ನು ಮತ್ತು ಸಲಹೆಗಳನ್ನು ಒಳಗೊಂಡಿದೆ. ಜೊತೆಗೆ ಈ ಕ್ಷೇತ್ರದಲ್ಲಿಯ ಅಧ್ಯಯನದ ಇತರ ಸಾಧ್ಯತೆಗಳನ್ನು ದಾಖಲಿಸಿದೆ.

**ಟಿಪ್ಪಣಿಗಳು :**

೧. ಅಗರವಾಲ ವ್ಹಿ.ಕೆ. (೨೦೦೦) ನವ ದೆಹಲಿ "ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್ ೧೯೮೬" ಬಿ.ಎಚ್ ಪಬ್ಲಿಷರ್ಸ್ ಆಂಡ ಡಿಸ್ಟ್ರಿಬ್ಯುಟರ್ಸ್ ನವ ದೆಹಲಿ.

೨. ಗಿರಿಮಾಜಿ ಪುಷ್ಪಾ(೨೦೦೧) ನಾಗಪೂರ "ಕಂಜುಮರ್ಸ್ ರೈಟ್ಸ್ ಫಾರ್ ಎವರಿವನ್, ರಿಡ್ರೇಸಲ್ ಸ್ಕಿಲ್ ಎಂಡ್ ಕಂಜ್ಯುಮರ್ಸ್ ಪ್ರೊಟೆಕ್ಷನ್ ಲಾ ೧೯೮೬". ಹಿಮಾಲಯ ಪಬ್ಲಿಕೇಶನ ನಾಗಪೂರ.

೩. ಐತಾಳ ದಾಮೋಧರ (೨೦೧೦) "ಕರ್ನಾಟಕದಲ್ಲಿ ಗ್ರಾಹಕರ ಸಂರಕ್ಷಣೆ"(ಲೇ) ಸಂಯುಕ್ತ ಕರ್ನಾಟಕ ಪು.ನಂ:೮. ದಿ. ಡಿಸೆಂಬರ–೨೪

೪. ಐತಾಳ ದಾಮೋದರ (೨೦೧೧) "ಕರ್ನಾಟಕದಲ್ಲಿ ಗ್ರಾಹಕರ ಜಾಗೃತಿ ನಿರ್ಲಕ್ಷ" ವಿಜಯ ಕರ್ನಾಟಕ ಮಾರ್ಚ್ ೧೫, ೨೦೧೧ ಪು.ನಂ: ೮

೫. ಅದೇ ಲೇಖನದಲ್ಲಿ ಪು.ನಂ: ೩

೬. ಆಹಾರ ನಾಗರಿಕ ಸರಬರಾಜು ಗ್ರಾಹಕ ವ್ಯವಹಾರಗಳ ಇಲಾಖೆ (೨೦೦೭) ಬೆಂಗಳೂರು– ಗ್ರಾಹಕರ ಕೈಪಿಡಿ–೨೦೦೭ ಪು.ನಂ: ೧೯,೨೦,೨೧.

**************

## ಅಧ್ಯಾಯ – ೨

# ಅಧ್ಯಯನ ಸಾಹಿತ್ಯದ ಅವಲೋಕನ

ಗ್ರಾಹಕ ವೇದಿಕೆಗಳಿಗೆ ಸಂಬಂಧಿಸಿದಂತೆ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಅನೇಕ ಅಧ್ಯಯನಗಳು ನಡೆದಿವೆ. ಗ್ರಾಹಕ ಹಾಗೂ ಗ್ರಾಹಕನ ಸಂರಕ್ಷಣೆಯ ಕುರಿತು ಗಣನೀಯವಾದ ಚಿಂತನ–ಮಂಥನಗಳು, ಸಂಶೋಧನೆಗಳು, ಚಳುವಳಿಗಳು ವಿಶ್ವದಾದ್ಯಂತ ನಡೆದುಕೊಂಡು ಬಂದಿವೆ. ಗ್ರಾಹಕ ರಕ್ಷಣೆಯ ವಿವಿಧ ಸಂಘಟನೆಗಳು ವ್ಯಾಪಾರಿಗಳ ಶೋಷಣೆಯಿಂದ ತಪ್ಪಿಸಿಕೊಳ್ಳಲು **'ಗ್ರಾಹಕರೇ ಎಚ್ಚರ'** ಎಂಬ ಘೋಷಣೆಯನ್ನು ಮಾಡುತ್ತಿವೆ. ವಿವಿಧ ಲೇಖನಗಳ, ಕರಪತ್ರಗಳ, ಕೈಪಿಡಿ, ಗ್ರಂಥ, ವಿಶೇಷ ಪತ್ರಿಕೆಗಳ ಮೂಲಕ ಗ್ರಾಹಕರಲ್ಲಿ ಅರಿವು ಮೂಡಿಸುವ ಕಾರ್ಯ ನಡೆಯುತ್ತಿದೆ. ಅಂತಹ ಹಲವಾರು ಸಾಹಿತ್ಯಗಳ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಅವಲೋಕನ ಮಾಡುವುದರಿಂದ, ಈ ಅಧ್ಯಯನವನ್ನು ವೈಜ್ಞಾನಿಕವಾಗಿ ಕಟ್ಟಿಕೊಡಲು ಸಹಾಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಬಂದಿರುವ ಪ್ರಮುಖ ಅಧ್ಯಯನಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

**೨.೨.೧ ಎಚ್. ಆರ್. ವೆಂಕಟೇಶ – "ಕಂಜುಮರ್ಸ ಪ್ರೊಟೆಕ್ಷನ್ ಇನ್ ಕರ್ನಾಟಕ – ಎ ಡೈಗ್ನೊಸ್ಟಿಕ ಸ್ಟಡಿ"** ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇಲ್ಲಿ ಮಂಡಿಸಲ್ಪಟ್ಟಿದೆ. ಇಲ್ಲಿ ಗ್ರಾಹಕ ರಕ್ಷಣೆಯನ್ನು ವಿಶ್ಲೇಷಿಸಿದ್ದಾರೆ. ಗ್ರಾಹಕ ಸ್ವಯಂ ಸಂಸ್ಥೆಗಳು, ಸರಕಾರ, ವ್ಯಾಪಾರಸ್ಥರು ಮತ್ತು ಮಾಧ್ಯಮಗಳು ಹೇಗೆ ಬಲಪಡಿಸಬೇಕು ಎನ್ನುವುದನ್ನು ವಿಶ್ಲೇಷಿಸಿರುವರು. ಅದರ ಜೊತೆಗೆ ಗ್ರಾಹಕರು, ಗ್ರಾಹಕ ಸಹಕಾರಿ ಸಂಘಗಳು ಹಾಗೂ ಪರಿಸರ ಸಂರಕ್ಷಣೆ ಸಂಸ್ಥೆಗಳು, ಗ್ರಾಹಕರ ಹಿತರಕ್ಷಿಸುವಲ್ಲಿ ಹೇಗೆ ಜವಾಬ್ದಾರಿ ತೆಗೆದುಕೊಳ್ಳಬೇಕೆಂದು ತಿಳಿಸಿದ್ದಾರೆ.

ಕರ್ನಾಟಕದ, ಭಾರತದ, ಅಂತರಾಷ್ಟ್ರಿಯ ಗ್ರಾಹಕ ಸಂಸ್ಥೆಗಳ ಪರಿಚಯವನ್ನು ತಿಳಿಸುತ್ತಾ, ಅವುಗಳು ಕಾರ್ಯ ನಿರ್ವಹಿಸುವಲ್ಲಿ ಎಲ್ಲಿ ಎಡವುತ್ತಿವೆ ಎಂದು ವಿವರಿಸುತ್ತ, ಸಂಸ್ಥೆಗಳು

ಬದಲಾಗಬೇಕು, ಅವುಗಳ ಉದ್ದೇಶಗಳು ಸಾಧಿಸಲಾಗದಿದ್ದಲ್ಲಿ ಅವುಗಳ ಕಾರ್ಯಗಳು ವ್ಯರ್ಥವಾದಂತೆಯೇ ಸರಿ. ಕರ್ನಾಟಕದಲ್ಲಿ ಗ್ರಾಹಕ ರಕ್ಷಣೆಯನ್ನು ಕಾಪಾಡುವಲ್ಲಿ ಅವುಗಳು ಸೋಲುತ್ತಿವೆ, ವ್ಯಾಪಾರ ವ್ಯವಹಾರವನ್ನು ಹಿಡಿತದಲ್ಲಿಡುವ ಶಕ್ತಿ ಅವುಗಳಿಗಿಲ್ಲ, ಅಲ್ಲದೆ ಸರಕಾರ ಹಾಗೂ ಮಾಧ್ಯಮಗಳನ್ನು ಸೆಳೆಯುವ ಒಂದು ಯುಕ್ತಿ ಕೂಡ ಅವುಗಳಿಗಿಲ್ಲ ಎನ್ನುತ್ತಾರೆ. ತಮಗೆ ಬೇಕಾದ ಹಣದ ವ್ಯವಸ್ಥೆಗೆ ಸರಕಾರ ಹಾಗೂ ಹಣಕಾಸಿನ ಸಂಸ್ಥೆಗಳನ್ನು ಗುರುತಿಸಿಕೊಳ್ಳಬೇಕೆಂದು ತಿಳಿಸಿದ್ದಾರೆ. ಸರಕಾರಗಳು ಖಾಸಗಿ ಸಂಸ್ಥೆಗಳು ಹಾಗೂ ಸರಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ಕಾರ್ಯಭಾರದ ತತ್ಪರತೆಯಲ್ಲಿ ಗುಣಗ್ರಾಹಿಯಾಗಿರುವಂತೆ ನೋಡಿಕೊಳ್ಳಬೇಕೆಂದು ಅಲ್ಲದೆ ಕಾನೂನುಗಳ ಮುಖಾಂತರ ಮಾಹಿತಿಯನ್ನು ನೀಡುವ ಕೆಲಸ ಕೈಗೊಳ್ಳಬೇಕೆನ್ನುತ್ತಾರೆ. ಸರಕಾರಗಳು ಗ್ರಾಹಕನ ಸಂರಕ್ಷಣೆಗೆ ಹಮ್ಮಿಕೊಂಡ ಕಾಯ್ದೆ ಕಾನೂನುಗಳಲ್ಲಿ, ಭ್ರಷ್ಟಾಚಾರ ತುಂಬಿದೆ. ವಾಣಿಜ್ಯ–ವ್ಯಾಪಾರಗಳಲ್ಲಿ ಸರಕಾರಗಳು ಎಡವುತ್ತಿವೆ. ಮಧ್ಯಸ್ತಿಕೆ ವಹಿಸುವ ನಿಟ್ಟಿನಲ್ಲಿ ಅವು ಸೋಲುತ್ತಿವೆ. ಗ್ರಾಹಕರ ಹಿತರಕ್ಷಣೆಯನ್ನು ಕಾಪಾಡಬೇಕೆನ್ನುವುದು ಸರಕಾರಗಳ ಧ್ಯೇಯವಾಗಿದ್ದರೆ, ಸರಕಾರದ ಮಧ್ಯವರ್ತಿಗಳು ಬಲವಾದ ಕಾಯ್ದೆ, ಕಾನೂನುಗಳನ್ನು ತರಬೇಕು ಎನ್ನುತ್ತಾರೆ.

ಸಂಶೋಧಕರ ಅನಿಸಿಕೆಯಂತೆ ಈಗಿನ ಜಗತ್ತಿಗೆ ಬೇಕಾಗುವ ಕಾಯ್ದೆಗಳು ಇಲ್ಲ. "ಗ್ರಾಹಕ ಸಂರಕ್ಷಣಾ ಕಾಯ್ದೆ" ೧೯೮೬ರ ಎಲ್ಲ ಗ್ರಾಹಕ ಸೌಲತ್ತುಗಳು ಗ್ರಾಹಕರಿಗೆ ತಲುಪಲಾಗಿಲ್ಲ. ಸರಕಾರ ಈ ನಿಟ್ಟಿನಲ್ಲಿ ಕಾರ್ಯವನ್ನು ಕೈಗೊಳ್ಳಬೇಕು. ಗ್ರಾಹಕ ವೇದಿಕೆಗಳು ಇತರ ಸರಕಾರಿ ಕಾರ್ಯಗಳಲ್ಲಿ ಕೆಲಸ ಮಾಡುವಂತೆ ವೃತ್ತಿಪರ ಸೌಲತ್ತುಗಳನ್ನು ಗ್ರಾಹಕರಿಗೆ ತಲುಪಿಸಲಾಗುತ್ತಿಲ್ಲ ಎನ್ನುತ್ತಾರೆ.

ಸಂಶೋಧಕರು ತಮ್ಮ ಅಧ್ಯಯನದಲ್ಲಿ ವಾಣಿಜ್ಯದ ಕುರಿತಾಗಿ ಬರೆಯುತ್ತ, ವ್ಯಾಪಾರಸ್ತರು ಗ್ರಾಹಕರ ಹಿತರಕ್ಷಣೆ ಹಾಗೂ ಕಲ್ಯಾಣವನ್ನು ಮರೆಯಬಾರದು ಹಾಗೆಯೆ ಸಮಾಜ ವ್ಯಾಪಾರಿ ವಿಭಜನೆಯನ್ನು ಮರೆತರೆ ಅವರದೆ ಆದ ಚಳುವಳಿ ಪ್ರಾರಂಭವಾಗುವ ಹೆದರಿಕೆ ಇದೆ ಎನ್ನುತ್ತಾರೆ. ಅವರ ಅನಿಸಿಕೆಯಂತೆ ಹೆಚ್ಚು ಹೆಚ್ಚಾಗಿ ವ್ಯಾಪಾರಿ ಸಂಘಗಳು ಮುಂದೆ ಬಂದು, ಸ್ವಯಂ ನಿಯಂತ್ರಣ ನಿಯಮಗಳನ್ನು ಹಾಕಿಕೊಳ್ಳಬೇಕು ಮತ್ತು ಸಂಘಗಳು ವ್ಯಾಪಾರಿ ಚಿಹ್ನೆಗಳನ್ನು ಅಳವಡಿಸಿಕೊಳ್ಳಬೇಕು. ಸಂಶೋಧಕರು, ಮುಂಬರುವ ದಿನಗಳಲ್ಲಿ ವ್ಯಾಪಾರಿ ವರ್ಗವು ಗ್ರಾಹಕರ ಚಳುವಳಿಗೆ ಕೈಗೂಡಿಸಬೇಕಾದ ಪ್ರಸಂಗಗಳು ಬರುವ ಲಕ್ಷಣಗಳು ತೋರುತ್ತಿವೆ ಎನ್ನುತ್ತಾರೆ. ತಂತ್ರಜ್ಞಾನದ ಅಭಿವೃದ್ದಿಯಿಂದ ಮಾಧ್ಯಮ ಕೂಡ ಬದಲಾಗಿದೆ. ಮುಂದಿನ ವರ್ಷಗಳಲ್ಲಿ ಗ್ರಾಹಕನ ತಿಳುವಳಿಕೆ ಹಾಗೂ ಆತನ ವಿಶ್ಲೇಷಣೆಯ ಮಟ್ಟ ಕೂಡ ಬದಲಾಗಬಹುದು ಎಂಬ ಅನಿಸಿಕೆ ಸಂಶೋಧಕರಿಗೆ ಇದೆ. ಈಗಿನ ದಿನಗಳಲ್ಲಿ ಈ ಮಾಧ್ಯಮಗಳಿಗೆ ಗ್ರಾಹಕನ ಸಂರಕ್ಷಣೆಯನ್ನು ಕಾಪಾಡುವ ಯಾವುದೇ ಪ್ರಜ್ಞೆ ಇಲ್ಲ. ಆದ್ದರಿಂದ ಗ್ರಾಹಕರಿಗೆ ಜಾಗೃತರಾಗಿ ತಾವಾಗಿಯೆ ಹಾಗೂ ಸಂಘ ಸಂಸ್ಥೆಗಳ ಮೂಲಕ

ತಮ್ಮ ಹಕ್ಕುಗಳಿಗೆ ಹೋರಾಡಲು ಸನ್ನದ್ಧರಾಗಬೇಕು. ಸರಕಾರಗಳೂ ಕೂಡ ಬೇರೆ ಬೇರೆ ದಾರಿಗಳಿಂದ ಗ್ರಾಹಕರಿಗೆ ಶಿಕ್ಷಣ ನೀಡುವ ಕಾರ್ಯಕೈಗೊಳ್ಳಬೇಕು ಎನ್ನುತ್ತಾರೆ. ಸಂಶೋಧಕರು ಗ್ರಾಹಕ ಚಳುವಳಿಯ ಭವಿಷ್ಯದ ಕುರಿತು ಬರೆಯುತ್ತ, ಸಮಯದ ಜೊತೆಗೆ ಪರಿಭಾವನೆ ಕೂಡ ಬದಲಾಗುತ್ತದೆ. ಈಗಿನ ಚಳುವಳಿಯ ದೋಷಗಳನ್ನು ವಿವರಿಸುತ್ತ ಈಗಿನ ಚಳುವಳಿಗೆ ಮುಂದೆ ನಾಗರಿಕ ಆಧಾರಿತ ಗ್ರಾಹಕ ಚಳುವಳಿ ಎಂದಾಗಬಹುದು. ಈ ಚಳುವಳಿ ಸಮಾಜದ ಉಳಿವಿಗಾಗಿ ಹೋರಾಡಬೇಕಾಗುತ್ತದೆ. ಹುರಿಮನ್ ಡೆವಲಪಮೆಂಟ ರಿಪೋರ್ಟ ೧೯೯೮ ನ್ನು ಉಲ್ಲೇಖಿಸುತ್ತ ಅವರು ವರದಿಯ ಐದು ಉದ್ದೇಶಗಳನ್ನು ವಿವರಿಸಿದ್ದಾರೆ. ಗ್ರಾಮ ಜಾಗತೀಕರಣ ಮುಂದಿನ ಚಳುವಳಿಯ ಮೇಲೆ ಪರಿಣಾಮ ಬೀರಬಹುದು ಎನ್ನುತ್ತಾರೆ. ಮುಂದಿನ ದಿನಗಳಲ್ಲಿ ವಿಷಯ ಆಧಾರಿತ ಗ್ರಾಹಕ ಚಳುವಳಿಯಿಂದ ವಿಷಯ ಆಧಾರರಹಿತ ವಿರುದ್ಧ ಗ್ರಾಹಕ ಚಳುವಳಿಯಾಗಿ ಬದಲಾಗಬಹುದು ಎಂದು ಸಂಶೋಧಕರ ನಿರೀಕ್ಷೆ. ಇದರಿಂದ ಈಗಿನ ಮಾರುಕಟ್ಟೆ ಆರ್ಥಿಕ ವ್ಯವಸ್ಥೆ ಮಾದರಿಯಾಗುತ್ತದೆಯೇ ಎನ್ನುವ ಪ್ರಶ್ನೆ. ಈ ಒಂದು ಮಾದರಿ ಎಲ್ಲರಿಗೂ ಲಾಭದಾಯಕವಾಗಿರುತ್ತದೆಯೆ? ಎನ್ನುವುದನ್ನು ತಮ್ಮ ಸಂಶೋಧನೆಯಲ್ಲಿ ವಿಶ್ಲೇಷಿಸಿದ್ದಾರೆ. ಅಂತರರಾಷ್ಟ್ರೀಯ ಮಾರುಕಟ್ಟೆ ನಿಯೋಗದ ರಿಪೋರ್ಟ ಆಧರಿಸಿ ಮನುಷ್ಯನ ಸಂಬಂಧಗಳು ಎಲ್ಲಕ್ಕೂ ಮಿಗಿಲಾದದು ಎನ್ನುವ ಮಾತಿನೊಂದಿಗೆ ತಮ್ಮ ಅನಿಸಿಕೆಗಳನ್ನು ತಮ್ಮ ಸಂಶೋಧನೆಯಲ್ಲಿ ವಿವರಿಸಿದ್ದಾರೆ.

**೨.೨.೨ ಶ್ರೀ. ಎಸ್.ಜಿ. ಕುಲಕರ್ಣಿ,** ಉಪನ್ಯಾಸಕರು ವಾಣಿಜ್ಯ ವಿಭಾಗ, ಗೋಗಟೆ ಮಹಾವಿದ್ಯಾಲಯ, ಬೆಳಗಾವಿ ಇವರು ಮಂಡಿಸಿದ ಮಹಾಪ್ರಬಂಧ, (ಎಮ್.ಫಿಲ್ ಪದವಿಗಾಗಿ ಶಿವಾಜಿ ವಿಶ್ವವಿದ್ಯಾಲಯ ಕೊಲ್ಹಾಪೂರ) **"ಗ್ರಾಹಕರ ಸಂರಕ್ಷಣೆ ಹಾಗೂ ವರ್ತನೆ ಬೆಳಗಾವಿ ನಗರದ, ಆರಿಸಿಕೊಂಡ ಗ್ರಾಹಕ ವಸ್ತುಗಳ ಒಂದು ಅಧ್ಯಯನ"** ಹನ್ನೊಂದು ಅಧ್ಯಾಯಗಳನ್ನು ಹೊಂದಿದೆ. ಮೊದಲನೇ ಅಧ್ಯಾಯ ಗ್ರಾಹಕರ ಸಂರಕ್ಷಣೆಯ ಅರ್ಥ ಅಧ್ಯಯನದ ವ್ಯಾಪ್ತಿ, ಅಧ್ಯಯನದ ಉದ್ದೇಶ ಮುಂತಾದವುಗಳಿಂದ ಕೂಡಿದೆ. ಎರಡನೇ ಅಧ್ಯಾಯ ಅಧ್ಯಯನದ ಪರಿಭಾವನೆ ಹಾಗೂ ಮುಂದಿನ ಅಧ್ಯಾಯಗಳಲ್ಲಿ ಗ್ರಾಹಕರ ರಕ್ಷಣೆ ಭಾರತದಲ್ಲಿ ಹಾಗೂ ವಿದೇಶಗಳಲ್ಲಿ ಗ್ರಾಹಕರ ಹಕ್ಕುಗಳು, ಗ್ರಾಹಕರ ಸಂರಕ್ಷಣೆಗೆ ಕಾಯ್ದೆಗಳು, ಗ್ರಾಹಕರ ದೂರುಗಳು, ಗ್ರಾಹಕರ ಶಿಕ್ಷಣ, ಮುಂತಾದರ ಕುರಿತು ಒಳಗೊಂಡಿದೆ. ಅಧ್ಯಯನದ ಯಾವುದೇ ಭಾಗದಲ್ಲಿಯೂ ಗ್ರಾಹಕರ ಸಂರಕ್ಷಣಾ ಕಾಯ್ದೆ ಕುರಿತು ಮಾಹಿತಿಯಾಗಲಿ ಗ್ರಾಹಕರ ವೇದಿಕೆಗಳ ಕುರಿತು ಅವಲೋಕನವಾಗಲಿ ಇಲ್ಲ.[೨]

೨.೨.೩ ಡಾ. ಓಂಪ್ರಕಾಶ ನಂದೀಮಠ – "ಕಂಜುಮರಿಜಮ್ ಎಂಡ್ ಕಂಜುಮರ್ ಪ್ರೊಟೆಕ್ಷನ್ ಲಾ" ಎನ್ನುವ ಲೇಖನದಲ್ಲಿ ಗ್ರಾಹಕ ಸಂರಕ್ಷಣೆ ಕಾಯ್ದೆ ೧೯೮೬ರ ಕುರಿತು ವಿವರಿಸುತ್ತ ಇತ್ತೀಚೆಗೆ ಮಲೇಶಿಯಾದಲ್ಲಿ ನಡೆದ ಅಂತರರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಆ ಕಾಯ್ದೆಯ ಕುರಿತು ವಿವೇಚಿಸಿದ್ದಾರೆ. ೧೯೮೬ರ ಕಾಯ್ದೆಯನ್ನು ವಿಶ್ಲೇಷಿಸುತ್ತಾ ಮಾನವನ ಸಂರಕ್ಷಣೆ ಹಾಗೂ ಜೀವನದ ಗುಣಮಟ್ಟವನ್ನು ನಿಬಾಯಿಸುವಲ್ಲಿ ಸರಕಾರದ ಪಾತ್ರದ ಕುರಿತು ವಿವರಿಸಿದ್ದಾರೆ. ಮನುಷ್ಯನ ಮೂಲ ಗುಣಧರ್ಮದಂತೆ ಆತ ಆಕ್ರಮಣಕಾರಿ, ಸ್ವರ್ಧಾತ್ಮಕ ಹಾಗೂ ಸ್ವಾರ್ಥಿಯಾಗಿರುತ್ತಾನೆ ಎಂದು ವಿವರಿಸುತ್ತ, ಕಾಯ್ದೆಗಳು ಈ ಮೂರು ಗುಣಗಳನ್ನು ಹೊಂದಾಣಿಕೆ ಮಾಡಬೇಕೆಂದು ಲೇಖಕರು ವಿವರಿಸಿದ್ದಾರೆ. ಥಿಯರಿ ಆಫ್ ಸೋಸಿಯಲ್ ಇಂಜಿನೀಯರಿಂಗ್ ಕೂಡ ಗ್ರಾಹಕತ್ವಕ್ಕೆ ಒತ್ತು ಕೊಡುತ್ತದೆ ಎಂದಿದ್ದಾರೆ. ಲೇಖಕರು ಗ್ರಾಹಕ ಸಂರಕ್ಷಣೆಯ ಕುರಿತು "ಸಾಮಾನ್ಯ ಕಾಯ್ದೆಗಳಲ್ಲಿ ಉಲ್ಲೇಖವಿದೆ ಎಂದು ವಿವರಿಸಿದ್ದಾರೆ. ೧೯೬೯ರಲ್ಲಿ ನ್ಯಾಯಾಲಯಗಳಲ್ಲಿ ಬಿಡುಗಡೆಗೊಂಡ ಗ್ರಾಹಕ ಪರ ತೀರ್ಪುಗಳನ್ನು ವಿವರಿಸಿದ್ದಾರೆ. ಈ ಕಾಯ್ದೆಗಳಲ್ಲಿ ಉತ್ಪಾದಕನ ವಿರುದ್ಧ ಯಾರು ಬೇಕಾದರೂ ನ್ಯಾಯಾಲಯದ ಮೊರೆ ಹೋಗಬಹುದು ಎನ್ನುವ ವಿಷಯದಿಂದ ಗ್ರಾಹಕ ಕಾಯ್ದೆ ೧೯೮೬ಕ್ಕೆ ಮಿಗಿಲಾದ ಸಂರಕ್ಷಣೆಯನ್ನು ಈ ಕಾಯ್ದೆಗಳು ಕೊಡುತ್ತವೆ ಎಂದು ವಿವರಿಸಿದ್ದಾರೆ. ಗ್ರಾಹಕ ಸಂರಕ್ಷಣೆಯ ಕುರಿತು ವೇದಗಳಲ್ಲಿಯೂ ಕೂಡ ಉಲ್ಲೇಖವಿರುವದನ್ನು ಅವರು ವಿವರಿಸಿದ್ದಾರೆ. ಹಾಗೆಯೇ ಕೌಟಿಲ್ಯನ ಅರ್ಥಶಾಸ್ತ್ರ ಹಾಗೂ ಮನುಸ್ಮೃತಿಗಳೂ ಕೂಡ ಈ ಕುರಿತು ವಿವರಣೆಯನ್ನು ನೀಡಿವೆ ಎಂದಿದ್ದಾರೆ. ಅಲ್ಲಾದ್ದಿನ ಖಾಜಿ ಸುಲ್ತಾನ, ಗ್ರಾಹಕರಿಗೆ ವಸ್ತುಗಳ ಮಾರಾಟ ಬೆಲೆಯ ಮಾಹಿತಿ, ಮಾರುಕಟ್ಟೆಯ ಹಿಡಿತದ ವಾತಾವರಣ ಮುಂತಾದ ಗ್ರಾಹಕರಿಗೆ ಉಪಯುಕ್ತ ವಾತಾವರಣವನ್ನು ಒದಗಿಸಿದ್ದ ಎಂದಿದ್ದಾರೆ. ಮುಂದೆ ೧೯೪೭ ರವರೆಗೆ ಗ್ರಾಹಕರಿಗಾಗಿ ಯಾವುದೇ ಒಂದು ಸಂರಕ್ಷಣೆಯ ವಾತಾವರಣ ಇರಲಿಲ್ಲ ಎಂದು ಲೇಖಕರು ವಿವರಿಸಿದ್ದಾರೆ. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಉತ್ಪಾದಕ ವರ್ಗ ಗ್ರಾಹಕರನ್ನು ಮೋಸದ ಹಾದಿಯಲ್ಲಿ ನಡೆಸುವಲ್ಲಿ ಹೇಗೆ ಯಶಸ್ವಿಯಾದರು ಎಂದು ವಿವರಿಸಿದ್ದಾರೆ. ಆದರೂ ಕೂಡ ಸರಕಾರಗಳು ಕೆಲವು ಕಾಯ್ದೆ ಕಾನೂನುಗಳು ಗ್ರಾಹಕರಿಗೆ ಸಹಾಯವಾಗಲೆಂದು ಅಂಗೀಕೃತ ಮಾಡಿ ೧೯೭೦ ರಲ್ಲಿ ಬ್ಯಾಂಕುಗಳನ್ನು ರಾಷ್ಟ್ರೀಕೃತ ಮಾಡಿದ್ದು ಒಂದು ಮೈಲುಗಲ್ಲು ಎಂದು ಬಣ್ಣಿಸಿದ್ದಾರೆ. ಗ್ರಾಹಕರ ಸಂಘಗಳು ಒಂದೊ ಅಥವಾ ಎರಡೊ ಎನ್ನುವ ನಿಟ್ಟಿನಲ್ಲಿ ಬೆಳವಣಿಗೆ ಪ್ರಾರಂಭವಾಗಿದ್ದವು ಎಂದಿದ್ದಾರೆ. ೧೯೭೦ ರಲ್ಲಿ ಮತ್ತೆ ಹಲವು ಹೆಸರಿಸಬಹುದಾದ ಗ್ರಾಹಕರ ಸಂಘಗಳು ಹುಟ್ಟಿ ಕೊನೆಗೆ ೧೯೮೬ ರಲ್ಲಿ "ಗ್ರಾಹಕ ಸಂರಕ್ಷಣಾ ಕಾಯ್ದೆ ಬಂದಿತು" ಎಂದು ತಮ್ಮ ಲೇಖನದಲ್ಲಿ ಬರೆದಿದ್ದಾರೆ. ಆದರೆ ಈ ಎಲ್ಲ

ಸವಲತ್ತುಗಳು ನಗರ ವ್ಯಾಪ್ತಿಗೆ ಬರುವ ಗ್ರಾಹಕರಿಗೆ ದೊರೆಯುವ ಒಂದು ವ್ಯವಸ್ಥೆ ಪ್ರಾರಂಭವಾಗಿ ಈಗಿನ ಪರಿಸ್ಥಿತಿಯಲ್ಲೂ ಏನೂ ಬದಲಾವಣೆ ಆಗಿಲ್ಲ. ಹಳ್ಳಿಗಳ ಗ್ರಾಹಕ ಈಗಲೂ ಸಂರಕ್ಷಣೆ ಇಲ್ಲದೆ ವಂಚನೆಗೊಳಗಾಗಿದ್ದಾನೆ ಎಂದಿದ್ದಾರೆ. ಅವರು ತಮ್ಮ ಲೇಖನದಲ್ಲಿ ಈ ಕೆಳಗಿನಂತೆ ತಮ್ಮ ಅನಿಸಿಕೆಗಳನ್ನು ಹೇಳಿದ್ದಾರೆ.

೧. ಗ್ರಾಹಕ ವಸ್ತು ಹಾಗೂ ಸೇವೆಯ ಮಾಹಿತಿಯನ್ನು ಅವಶ್ಯವಾಗಿ ಹೊಂದಿರಬೇಕು.

೨. ಗ್ರಾಹಕ ಕಾಯ್ದೆಯಲ್ಲಿ ಹೊಸದಾಗಿ ಸೇರ್ಪಡೆಯಾದ ಇಲೇಕ್ಟ್ರಾನಿಕ್ಸ್ ವಸ್ತುಗಳ ಮೋಸಕ್ಕೆ ಯಾವುದೇ ರಕ್ಷಣೆ ಗ್ರಾಹಕನಿಗೆ ಸಿಗುವ ಸೌಲಭ್ಯವಿಲ್ಲ.

೩. ಹೂಡಿಕೆದಾರರಿಗೆ ಗ್ರಾಹಕ ಕಾಯ್ದೆಯಲ್ಲಿ ಶೇರ್ ಮತ್ತು ಡಿಬೆಂಚರ್ಸ್‌ಗಳನ್ನು ಗ್ರಾಹಕ ವಸ್ತುಗಳು ಅಥವಾ ಸೇವೆ ಎಂದು ಪರಿಗಣಿಸಿ ಗ್ರಾಹಕ ಕಾಯ್ದೆ ಅಡಿಯಲ್ಲಿ ಮೋಸ ಹೋಗುವದನ್ನು ತಪ್ಪಿಸಲಾಗಿಲ್ಲ.

ಜಾಹಿರಾತುಗಳಲ್ಲಿ ಯಾವುದೇ ಒಂದು ಪ್ರಮಾಣ ಇಲ್ಲದೆ ಗ್ರಾಹಕ ಮೋಸಕ್ಕೊಳಗಾಗುವುದನ್ನು ತಪ್ಪಿಸಲಾಗುತ್ತಿಲ್ಲ. ಕೊನೆಗೆ ಗ್ರಾಹಕ ಸಂರಕ್ಷಣೆ ಕೇವಲ ಕಾಯ್ದೆ ಕಾನೂನುಗಳಿಂದ ಸಾಧ್ಯವಿಲ್ಲ. ಕಾಯ್ದೆಗಳು, ನಿಯಮಾವಳಿಗಳು, ವೇದಿಕೆಗಳು, ವ್ಯಾಪಾರ, ಸರಕಾರಗಳು, ನಿರ್ಬಂಧನೆಗಳು, ವ್ಯವಸ್ಥೆ, ಮಾಧ್ಯಮಗಳು, ಸಂಘ ಸಂಸ್ಥೆಗಳು ಹಾಗೂ ಬಹಳ ಮಹತ್ವವೆಂದರೆ ಗ್ರಾಹಕ ಈ ಎಲ್ಲ ಕ್ಷೇತ್ರಗಳ ಒಂದು ಹೊಂದಾಣಿಕೆಯಿಂದ ಸಾಧ್ಯ. ಈ ಒಂದು ವ್ಯವಸ್ಥೆಯನ್ನು ಬಲಪಡಿಸಲು ಎಲ್ಲರಿಂದಲೂ ಆಗಬೇಕಿದೆ. ಇದು ಗಟ್ಟಿಮುಟ್ಟಾದ ಕಾನೂನು ವ್ಯವಸ್ಥೆ ಹಾಗೂ ಮಾಹಿತಿಯಿಂದ ಮಾತ್ರ ಸಾಧ್ಯ ಎನ್ನುತ್ತಾರೆ ಲೇಖಕರು.[೩]

**೨.೨.೪ ಪ್ರೊ. ಜೆ.ಎಸ್. ಪಾಟೀಲ**–ಕಾಲೇಜಿನ ವಿಚಾರ ಸಂಕಿರಣ ಒಂದರಲ್ಲಿ ಮಂಡಿಸಿದ **"ಇಂಟರ್‌ನ್ಯಾಶನಲ್ ಕಂಜುಮರಿಸಂ"** ಎನ್ನುವ ವಿಷಯದಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಬದಲಾಗುತ್ತಿರುವ ಗ್ರಾಹಕತ್ವದ ಕುರಿತು ವಿಶ್ಲೇಷಿಸಿದ್ದಾರೆ. ನೋಕಿಯಾ ಕಂಪನಿಯ ಬಿ.ಎಲ್–೫ಸಿ ವರ್ಸನ್ ಬ್ಯಾಟರಿಯಿಂದ ಹಾನಿಗೊಳಗಾದ ಮೊಬೈಲ ಗ್ರಾಹಕರ ಅಹವಾಲನ್ನು ಪ್ರಸ್ತಾಪಿಸುತ್ತ, ಲೇಖಕರು ಈ ತರಹದ ಬಹುರಾಷ್ಟ್ರೀಯ ಕಂಪನಿಗಳ ವರ್ತನೆ ಹೊಸದಲ್ಲದಿದ್ದರೂ ಅದಕ್ಕೆ ಸ್ಪಂದಿಸಿದ ಗ್ರಾಹಕರ ಮನಸ್ಥಿತಿ ಹೊಸದಾಗಿತ್ತು ಎಂದಿದ್ದಾರೆ. ಉದಾರಿಕರಣದ ಈ ಕಾಲದಲ್ಲಿ ಎಲ್ಲದರಂತೆಯೆ ಗ್ರಾಹಕರ ಸಂರಕ್ಷಣೆ ರಾಷ್ಟ್ರಮಟ್ಟದಿಂದ ಅಂತರಾಷ್ಟ್ರೀಯ ಮಟ್ಟದವರೆಗೆ ಹರಡಿದೆ ಎಂದಿದ್ದಾರೆ. ಮಾಹಿತಿ ತಂತ್ರಜ್ಞಾನದಿಂದ ಅಂತರಾಷ್ಟ್ರೀಯ ಗ್ರಾಹಕತ್ವ ನಮಗೆಲ್ಲ ಸ್ಪರ್ಧಾತ್ಮಕ ಬಲ ಹಾಗೂ ಮನಶಾಂತಿಯನ್ನು ಕೊಡುವಲ್ಲಿ ಸಂಶಯವಿಲ್ಲ ಎಂದಿದ್ದಾರೆ. ಮುಂದುವರೆದು ಈಗ ಗ್ರಾಹಕರು

ಆನ್ ಲೈನ್ ಮೇಲೆ ವ್ಯಾಪಾರ ವಹಿವಾಟು ನಡೆಸುತ್ತಿರುವಾಗ ಗ್ರಾಹಕರ ಸಂರಕ್ಷಣೆಯು ಅವರಿಗೆ ದೊರೆಯುತ್ತಿಲ್ಲ. ಲೇಖಕರು ಆನ್ ಲಾಯಿನ್ ಕಾಂಟ್ರ್ಯಾಕ್ಟದ ಮೂರು ವಿಧಗಳನ್ನು ವಿವರಿಸುತ್ತಾರೆ.

ಶ್ರಿಂಕ ವ್ರ್ಯಾಪ್ ಕಾಂಟ್ರ್ಯಾಕ್ಟನ (ಸುರಳಿಯಲ್ಲಿ ವಸ್ತುವನ್ನು ಸುತ್ತಿ ಮಾರಾಟ ಮಾಡು) ನಿಯಮಗಳಿಗೆ ಬದ್ದವಾಗಿ, ಕ್ಲಿಕ್ ವ್ರ್ಯಾಪ್ ಕಾಂಟ್ರ್ಯಾಕ್ಟನ ಕರಾರುಗಳಿಗೆ ಅನುಗುಣವಾಗಿ, ಬ್ರೊಸ್ ವ್ರ್ಯಾಪ್ ಕಾಂಟ್ರಾಕ್ಟನ್ ನಿಯಮಗಳಂತೆ ಕರಾರು ಮುರಿದಾಗ, ಗ್ರಾಹಕ ಸಂರಕ್ಷಣೆಗೆ ಕೋರ್ಟಿನ ಮೊರೆ ಹೋಗಬಹುದು ಎಂದು ವಿವರಿಸುತ್ತಾ ಆನ್ ಲಾಯನ್ ಕಾಂಟ್ರ್ಯಾಕ್ಟನಲ್ಲೂ ಕೂಡ ಗ್ರಾಹಕ ಮೋಸ ಹೋಗುವದನ್ನು ತಡೆಯಬಹುದು, ಎನ್ನುವ ಹೊಸ ವಿಷಯ ನಮ್ಮೆಲ್ಲರಿಗೂ ತೆರೆದಿಟ್ಟಿದ್ದಾರೆ. ಹಾಗೆಯೇ ಅವರು ಮುಂದುವರೆದು ಸಾಧಾರಣ ಕಾಂಟ್ರ್ಯಾಕ್ಟಗಳಿಗೂ ವ್ರ್ಯಾಪ್ ಕಾಂಟ್ರ್ಯಾಕ್ಟಗಳಿಗೂ ಹೋಲಿಸುತ್ತಾ ಹೀಗೆ ವಿಶ್ಲೇಷಿಸಿದ್ದಾರೆ. ವ್ಯಾಪಾರಸ್ಥ ತನಗೆ ಅನುಕೂಲ ಆಗುವ ಹಾಗೆ ನೀತಿ ನಿಯಮಗಳನ್ನು ಹಾಕಿರುತ್ತಾನೆ. ಗ್ರಾಹಕ ತನ್ನ ಸಂರಕ್ಷಣೆಗೆ ಸಂಬಂಧಪಟ್ಟ ಹಾಗೆ ಕರಾರು, ನೀತಿ ನಿಯಮಗಳನ್ನು ಪರೀಕ್ಷಿಸಬೇಕಾಗುತ್ತದೆ. ಆದರೆ ಸಾಧಾರಣ ಗ್ರಾಹಕನಿಗೆ ಇದು ತಲುಪಲಾರದು. ಆದ್ದರಿಂದ ಇದರಲ್ಲಿ ನಾವು ಬದಲಾವಣೆ ತರುವುದು ಅವಶ್ಯವೆಂದು ವಿಶ್ಲೇಷಿಸಿದ್ದಾರೆ. ೧೯೮೩ ರಲ್ಲಿ ಯು.ಎನ್.ಓ. ಸೆಕ್ರೇಟರಿ ಜನರಲ್ ಬಿಡುಗಡೆ ಮಾಡಿದ ಗ್ರಾಹಕ ಸಂರಕ್ಷಣೆಯ ಮಾರ್ಗದರ್ಶಿ, ಉದ್ದೇಶಗಳು, ಅವಶ್ಯಕತೆ, ವ್ಯಾಪ್ತಿ ಹಾಗೂ ದೇಶಗಳು ಮಾಡಬೇಕಾದ ಕಾರ್ಯಗಳನ್ನು ಅವರು ವಿವರಿಸಿದ್ದಾರೆ. ಲೇಖಕರು "ವರ್ಲ್ಡ್ ಹೆಲ್ತ್ ಆರ್ಗ್‌ನಾಯಜೇಶನ್" ೧೯೮೧ ರಲ್ಲಿ ಚಿಕ್ಕಮಕ್ಕಳಿಗಾಗಿ ಎದೆಹಾಲಿನ ಹೊರತಾಗಿ ಕೊಡುವ ಆಹಾರದ ಸಂಕೇತಗಳನ್ನು, ಕ್ರಿಮಿನಾಶಕಗಳ ಉಪಯೋಗಗಳನ್ನು ನಿಷೇಧಿಸುವ ಹತ್ತು ಹಲವು ಕಾನೂನುಗಳನ್ನು ಜಾರಿಗೆ ತಂದ ಪ್ರಸ್ತಾವನೆ ಕೂಡ ಅವರು ಮಾಡಿದ್ದಾರೆ. ಪ್ರಮುಖ ದೇಶಗಳಲ್ಲಿ ಗ್ರಾಹಕ ಸಂರಕ್ಷಣೆಗಾಗಿ ಹಮ್ಮಿಕೊಂಡ ಕಾರ್ಯಕ್ರಮಗಳನ್ನು ವಿವರಿಸುತ್ತ ಲೇಖಕರು ಅಮೇರಿಕಾ ಸಂಯುಕ್ತ ಸಂಸ್ಥಾನಗಳು, ರಷ್ಯಾ ಹಾಗೂ ಆಸ್ಟ್ರೇಲಿಯಾ ದೇಶಗಳಲ್ಲಿ ಗ್ರಾಹಕ ಸಂರಕ್ಷಣೆಯ ಬೆಳವಣಿಗೆಯನ್ನು ಪ್ರಸ್ತಾಪಿಸಿದ್ದಾರೆ.

ಹೀಗೆ ಎಲ್ಲ ವಿಷಯವನ್ನು ವಿಶ್ಲೇಷಿಸುತ್ತ ಲೇಖನದ ಸಮಾರೋಪದಲ್ಲಿ ತಮ್ಮ ಅನಿಸಿಕೆಯನ್ನು ತೆರೆದಿಟ್ಟಿದ್ದಾರೆ.

೧. ಅಂತರಾಷ್ಟ್ರೀಯ ಮಾರ್ಗದರ್ಶಕ ಸೂಚಿಗಳು ಗ್ರಾಹಕರನ್ನು ಸಂರಕ್ಷಿಸುವುದು ಅವಶ್ಯವಾಗಿದೆ.
೨. ಮಾರ್ಗದರ್ಶಕ ಸೂಚಿಗಳು ಗ್ರಾಹಕರ ಆರ್ಥಿಕತೆಗೆ ಮಹತ್ವ ಕೊಡಬೇಕು.
೩. ಗ್ರಾಹಕರಿಗೆ ವಸ್ತುಗಳು ಹಾಗೂ ಸೇವೆಗಳ ಮಾಹಿತಿ ಪಡೆಯುವ ಪೂರ್ತಿ ಹಕ್ಕಿರಬೇಕು.
೪. ಜಾಹಿರಾತುಗಳನ್ನು ನಿರ್ಬಂಧಿಸುವ ಸೂಚಿಗಳಿರಬೇಕು.

೫. ಅಭಿವೃದ್ಧಿ ಹೊಂದಿದ ಹಾಗೂ ಹೊಂದುತ್ತಿರುವ ದೇಶಗಳ ಗ್ರಾಹಕರಿಗೆ ಶಿಕ್ಷಣವನ್ನು ನೀಡುವ ವ್ಯವಸ್ಥೆ ಮಾಡಬೇಕು.

೬. ಬಹುರಾಷ್ಟ್ರೀಯ ಮಾರಾಟಗಾರರು ಆನ್‌ಲಾಯನ್ ಗ್ರಾಹಕರಿಗೆ ಮೋಸ ಮಾಡದಂತೆ ಸಂರಕ್ಷಿಸುವ ನಿರ್ಬಂಧನೆಗಳನ್ನು ಅಭಿವೃದ್ಧಿಪಡಿಸುವುದು ಅವಶ್ಯಕತೆ ಇದೆ.[೪]

**೨.೨.೫ ಡಾ. ಸಂತೋಷ ಎ. ಶಹಾ :** ಒಂದು ದಿನದ ರಾಷ್ಟ್ರೀಯ ಕಾರ್ಯಾಗಾರದಲ್ಲಿ ಮಂಡಿಸಿದ ಲೇಖನ **"ಕಂಜ್ಯುಮರ್ಸ್ ಪ್ರೊಟೆಕ್ಷನ್"** ದಲ್ಲಿ ಪ್ರಸಿದ್ದ ವಕೀಲರಾದ ಇವರು ಗ್ರಾಹಕ ವೇದಿಕೆಗಳು ಕುರಿತು ತಮ್ಮ ವಿಚಾರವನ್ನು ಮುಂದಿಟ್ಟಿದ್ದಾರೆ. ಜಾಗತೀಕರಣದ ಈ ದಶಕದಲ್ಲಿ ಗ್ರಾಹಕತ್ವ ಮತ್ತು ಗ್ರಾಹಕರ ಹಿತವನ್ನು ಕಾಪಾಡಲು ಈ ಗ್ರಾಹಕ ವೇದಿಕೆಗಳು ಹಾಗೂ ಸರಕಾರಗಳ ಪಾತ್ರ ತುಂಬ ಮಹತ್ವ ಎಂದು ಹೇಳಿದ್ದಾರೆ. ತಮ್ಮ ಲೇಖನದ ಮೊದಲನೆಯ ಭಾಗದಲ್ಲಿ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರಲ್ಲಿ ಅವರು ಕಾಯ್ದೆಯ ಉದ್ದೇಶಗಳನ್ನು ವಿವರಿಸುತ್ತಾ ಅವರ ಅಹವಾಲವನ್ನು ಸ್ವೀಕರಿಸುವುದು ಮತ್ತು ಗ್ರಾಹಕರ ಹಿತ ಕಾಪಾಡುವಲ್ಲಿ ವೇದಿಕೆಗಳು ಒಲವು ತೋರಿಸುವುದು ತುಂಬಾ ಅವಶ್ಯವೆಂದಿದ್ದಾರೆ. ಈ ಕಾಯ್ದೆ ಮುಂದೆ ೨೦೦೨ ರಲ್ಲಿ ಬದಲಾವಣೆಗೊಂಡು ಗ್ರಾಹಕತ್ವ ಹಾಗೂ ಗ್ರಾಹಕ ಕಲ್ಯಾಣವನ್ನು ಹೇಗೆ ಬಲಪಡಿಸಿತು ಎಂದು ವಿವರಿಸಿದ್ದಾರೆ. ಲೇಖಕರು ಕಾಯ್ದೆಯ ನ್ಯೂನ್ಯತೆಗಳನ್ನು ವಿವರಿಸುತ್ತ ಗ್ರಾಹಕ ವೇದಿಕೆಯ ಕೆಲಸ ಕಾರ್ಯಕ್ಕೆ ಬೇಕಾಗುವ ಸವಲತ್ತುಗಳು, ಸದಸ್ಯರನ್ನು ನೇಮಕ ಮಾಡುವಾಗ ಶರತ್ತುಗಳನ್ನು ನಮೂದಿಸದೆ ಇರುವುದು, ಗ್ರಾಹಕನಿಗೆ ನ್ಯಾಯ ಒದಗಿಸುವಾಗ ವೇದಿಕೆಗಳು, ಗ್ರಾಹಕ ಸಂರಕ್ಷಣಾ ಕಾಯ್ದೆಯನ್ನು ಅನುಸರಿಸದೆ ಶಾಸನ ಕಾಯ್ದೆಗಳನ್ನು ಅನುಸರಿಸುತ್ತಿವೆ ಎನ್ನಬಹುದು. ಇದರಿಂದ ವ್ಯಾಜ್ಯವನ್ನು ಪರಿಹರಿಸುವ ನಿಟ್ಟಿನಲ್ಲಿ ಹಾಕಿದ ವೇಳಾಪಟ್ಟಿಗೆ ಗ್ರಾಹಕನಿಗೆ ನ್ಯಾಯ ಒದಗದೆ ಇರುವ ಸಂಭವ ಕೂಡ ಹೆಚ್ಚಾಗಿದೆ ಎಂದು ವಿವರಿಸಿದ್ದಾರೆ. ಹಾಗೆಯೆ ಮುಂದುವರೆಸುತ್ತ ಗ್ರಾಹಕ ಸಂಘಗಗಳ, ವಕೀಲರ ಹಾಗೂ ವೇದಿಕೆಗಳ ಸದಸ್ಯರಗಳ ನಡುವೆ ಸಾಮರಸ್ಯವಿಲ್ಲದೆ ಅವರಿಗೆ ಸರಿಯಾದ ತರಬೇತಿ ಇಲ್ಲದೆ, ಅವರೆಲ್ಲರ ಪರಿಸ್ಥಿತಿಯನ್ನು ನೋಡುವ ದೃಷ್ಟಿಕೋನ ಆಶಾದಾಯಕವಾಗಿರದೆ ಗ್ರಾಹಕನಿಗೆ ಸಿಗುವ ನ್ಯಾಯ ಸಿಗದೆ ಹೋಗುವ ಸಂಭವ ಹೆಚ್ಚಾಗಿರುತ್ತದೆ. ಗ್ರಾಹಕ ಕಾಯ್ದೆ ಕೊಟ್ಟಂತೆ ಎಲ್ಲ ಸವಲತ್ತುಗಳನ್ನು ಉಪಯೋಗಿಸಿಕೊಂಡು, ಗ್ರಾಹಕ ವೇದಿಕೆಗಳನ್ನು ಬಲಪಡಿಸುವ ಕಾರ್ಯವಾಗಬೇಕಿದೆ ಎಂದು ಲೇಖಕರ ಹೇಳಿಕೆ. ಗ್ರಾಹಕ ಕಾಯ್ದೆ ೧೯೮೬ ರಲ್ಲಿ ಕಲಂ ೨೫ ಹಾಗೂ ೨೭ ಎರಡನ್ನು ಪ್ರಸ್ತಾಪಿಸುತ್ತ ಅವು ಅಷ್ಟೊಂದು ಆಶಾದಾಯಕವಾಗಿಲ್ಲ ಎಂದು ವಿವರಿಸಿದ್ದಾರೆ. ಎರಡು ಕಲಂಗಳನ್ನು ಜಾರಿ ತರುವಾಗ ಸ್ಪಷ್ಟವಾದ ನಿಲುವು ಕಾಯ್ದೆಯಲ್ಲಿ ಇಲ್ಲ ಎಂದಿದ್ದಾರೆ. ಗ್ರಾಹಕ ವೇದಿಕೆಗಳು ಪರಿಹಾರ

ಘೋಷಿಸುವಾಗ ಕಾಯ್ದೆಯಲ್ಲಿ ನಮೂದಿಸಿದಂತೆ ಜಿಲ್ಲಾ ವೇದಿಕೆಗಳಿಗೆ ಹೆಚ್ಚಿನ ಅಧಿಕಾರ ನೀಡಿ ಗ್ರಾಹಕ, ರಾಜ್ಯ ಹಾಗೂ ರಾಷ್ಟ್ರವೇದಿಕೆಗಳಿಗೆ ಮೊರೆ ಹೋಗುವುದನ್ನು ತಪ್ಪಿಸಬೇಕು ಎಂಬ ಅಂಶವನ್ನು ಮುಂದಿಟ್ಟಿದ್ದಾರೆ. ಕಾಯ್ದೆಯ ಕಲಂ ೧೧(೨) ನ್ನು ಜಾರಿಗೆ ತರುವಾಗ ಮೋಟರ ವ್ಹೆಹಿಕಲ್ ಆಕ್ಟ್ ೧೯೮೮ರ ಸಹಾಯ ಪಡೆಯಬಹುದು ಎಂದಿದ್ದಾರೆ. ಗ್ರಾಹಕ ವೇದಿಕೆಗಳ ಕುರಿತು ಆಶಾಭಾವನೆಯೊಂದಿಗೆ ಮುಂದುವರಿಸುತ್ತ ಜಾಗತೀಕರಣದ ಈ ಕಾಲದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ನ್ಯಾಯಕ್ಕಾಗಿ ಜಿಲ್ಲಾ ಗ್ರಾಹಕ ವೇದಿಕೆಗಳ ಬಾಗಿಲು ತಟ್ಟುತ್ತಿರುವುದು ಭಾರತಕ್ಕೆ ಆಶಾದಾಯಕ ಎಂದಿದ್ದಾರೆ. ಕೊನೆಗೆ ಅವರು ಗ್ರಾಹಕ ವೇದಿಕೆಯ ಜನರಿಗೆ ತರಬೇತಿಯ ಪಠ್ಯಕ್ರಮವನ್ನು ಕೂಡ ಕೊಟ್ಟಿದ್ದಾರೆ.[೫]

**೨.೨.೬ ರಾಜೇಂದರ ಚೌಧರಿ:** ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್ ೧೯೮೬–**"ಬೂನ್ ಟು ಫಾರ್ಮರ್ಸ್ ಆಂಡ್ ವ್ಹಿಲೇಜ ಕಂಜುಮರ್ಸ್"** ಎನ್ನುವ ಲೇಖನದಲ್ಲಿ ಗ್ರಾಹಕ ಸಂರಕ್ಷಣೆಯ ಕಾನೂನು ೧೯೮೬ರ ಎಲ್ಲ ಗ್ರಾಹಕ ಹಕ್ಕುಗಳ ವಿವರಣೆಯೊಂದಿಗೆ ಪ್ರಾರಂಭಿಸಿದ್ದಾರೆ. ನಂತರ ಹಳ್ಳಿಯ ಗ್ರಾಹಕನು ಎಂದರೆ ಯಾರು ಎನ್ನುತ್ತ ನಮ್ಮ ದೇಶದ ಜನಸಂಖ್ಯೆಯಲ್ಲಿ ಎಪ್ಪತ್ತು ಪ್ರತಿಶತ ಹಳ್ಳಿ ಗ್ರಾಹಕರೇ ಇದ್ದರೂ, ಅವರೆ ನಿರ್ಲಕ್ಷತೆಗೆ ಒಳಗಾಗಿದ್ದಾರೆ. ಗ್ರಾಮೀಣ ಗ್ರಾಹಕರಿಗೆ ತಮ್ಮ ಹಕ್ಕಿನ ಅರಿವಿಲ್ಲ. ಗ್ರಾಹಕ ಸಂರಕ್ಷಣೆ ಕಾಯ್ದೆ ಎಲ್ಲರಿಗೂ ಅನ್ವಯಿಸುತ್ತದೆ ಹಿಂದಿನ ಯಾವ ಗ್ರಾಹಕ ಕಾಯ್ದೆ ಗಳು ಒಳಗೊಳ್ಳದ ಗ್ರಾಹಕರನ್ನು ೧೯೮೬ ರ ಕಾಯ್ದೆ ಒಳಗೊಂಡಿದೆ. ಹಳ್ಳಿಗಳಲ್ಲಿ ಸಣ್ಣ ವ್ಯಾಪಾರಸ್ಥರು ಅವರ ಜೊತೆ ಹೆಗಲು ಕೊಟ್ಟು ಬೇರೆ ಬೇರೆ ವ್ಯವಸಾಯ ಮಾಡುವ ಮನೆಯ ಹೆಣ್ಣುಮಕ್ಕಳು ಕೂಡ ಗ್ರಾಹಕರು ಎನಿಸಿಕೊಳ್ಳುತ್ತಿದ್ದಾರೆ. ಲೇಖಕರು ತಮ್ಮ ಲೇಖನದಲ್ಲಿ ಗ್ರಾಮೀಣ ಪ್ರದೇಶವನ್ನು ಅಳೆಯುವ ಹಳೆಯ ಮಾಪನಗಳು ಉಪಯೋಗವಿಲ್ಲವೆಂದು ಹೇಳುತ್ತ ಗ್ರಾಹಕರನ್ನು ವಿಭಜಿಸುವ ಗ್ರಾಮೀಣ ಮಾರುಕಟ್ಟೆ ಈಗಿನ ದಿನಗಳಲ್ಲಿ ತುಂಬಾ ತ್ರಾಸದಾಯಕ. ಏಕೆಂದರೆ ವಸ್ತುಗಳನ್ನು ತಯಾರಿಸುವಾಗ ಹಿಂದಿನ ಗ್ರಾಹಕ ವಿಭಜನೆಯನ್ನು ಲೆಕ್ಕಕ್ಕೆ ತೆಗೆದುಕೊಂಡರೇ ಗ್ರಾಹಕರ ಉಪಯೋಗಿ ಮನೋಭಾವನೆಯನ್ನು ಅಳೆಯುವುದು ತುಂಬಾ ಕಷ್ಟ ಎಂದಿದ್ದಾರೆ. ಗ್ರಾಮೀಣ ಗ್ರಾಹಕರಲ್ಲಿ ಜಾಹಿರಾತಿನ ಮೂಲಕ ಮಾಹಿತಿ ಕೊಡುವಾಗ ತೊಡಕಾಗಿ ಪರಿಣಮಿಸಬಹುದು ಎಂದಿದ್ದಾರೆ. ಲೇಖಕರು ಮುಂದುವರೆದು ತೊಂದರೆಗಳು ಒಂದೇ ಆಗಿದ್ದರೂ ನಗರ ಹಾಗೂ ಗ್ರಾಮೀಣ ಗ್ರಾಹಕರಿಗೆ ಆಗುವ ತೊಂದರೆಗಳಲ್ಲಿ ಅಗಾಧ ಅಂತರವಿರುವದನ್ನು ವಿವರಿಸಿದ್ದಾರೆ. ನಂತರ ಗ್ರಾಮೀಣ ಗ್ರಾಹಕರು ಅನುಭವಿಸುವ ತೊಂದರೆಗಳನ್ನು ಹದಿನಾಲ್ಕು ವಿಭಾಗಗಳಾಗಿ ವಿವರಿಸಿದ್ದಾರೆ. ಲೇಖಕರು ರೈತರಿಗೆ ಗುಣಮಟ್ಟದ ಬೀಜಗಳು ದೊರೆಯುವಲ್ಲಿ ಆಗುವ ತೊಂದರೆಯನ್ನು ವಿವರಿಸುತ್ತ ಗ್ರಾಹಕ ಸಂರಕ್ಷಣಾ ಕಾಯ್ದೆ

೧೯೮೬ನ್ನು ಜಾರಿಗೆ ತರುವುದಕ್ಕಿಂತ ಮೊದಲು ರೈತರ ತೊಂದರೆಯನ್ನು ನಿವಾರಿಸಲು ಸರ್ಕಾರ ಸೀಡ್ ಆಕ್ಟ್ (ಬೀಜ ಕಾಯ್ದೆ) ಪ್ರಕಾರ ಬೀಜ ತಪಾಸಣೆ ಮಾಡುವವರು, ರೈತರ ಹತ್ತಿರ ಇರುವ ಎಲ್ಲ ಮಾಹಿತಿಯನ್ನು ಕೇಳುವ ಪ್ರತಿಯನ್ನು ಲೇಖಕರು ವಿವರಿಸಿದ್ದಾರೆ. ಮುಂದೆ ೧೯೮೩ರಲ್ಲಿ ಕಂಟ್ರೋಲ ಆರ್ಡರ ಬಿಡುಗಡೆ ಮಾಡಿದ, ಅದರಂತೆ ಡಿಲರ್ಸ್ ಎಲ್ಲ ಮಾಹಿತಿಯನ್ನು ಬಿಡುಗಡೆ ಮಾಡಬೇಕೆಂದು ವಿವರಿಸಿದ್ದಾರೆ. ಆದರೆ ಈ ಎರಡರಲ್ಲೂ ಗ್ರಾಹಕನಿಗೆ ನಷ್ಟ ತುಂಬಿ ಕೊಡುವ ಅಂಶವಿಲ್ಲ. ಆದರೆ ಗ್ರಾಹಕ ಸಂರಕ್ಷಣಾ ಕಾಯ್ದೆ ಯಲ್ಲಿ ಗ್ರಾಹಕನಿಗೆ ನಷ್ಟಕ್ಕೆ ಪರಿಹಾರ ದೊರೆಯುವ ಅಂಶವಿದೆ. ಗ್ರಾಹಕ ಕೆಲವೊಂದು ಮಹತ್ವದ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಗ್ರಾಹಕ ವೇದಿಕೆಯ ಮೊರೆ ಹೋಗಬಹುದು ಎಂದು ಲೇಖಕರು ವಿವರಿಸಿದ್ದಾರೆ. ಈ ಒಂದು ಅಂಶವನ್ನು ಪುಷ್ಠಿ ನೀಡುವಂತೆ ಲೇಖಕರು ಮಹಾರಾಷ್ಟ್ರದ ರಾಯಗಡ ತಾಲೂಕಿನ ಹಲವು ಉದಾಹರಣೆಗಳನ್ನು ವಿವರಿಸಿದ್ದಾರೆ. ಲೇಖಕರು ಆ ಮುಂದೆ ಒಂದು ಮಹತ್ವದ ಅಂಶವನ್ನು ಬೆಳಕಿಗೆ ತಂದಿದ್ದಾರೆ. ೧೯೯೭ರ ಉಚ್ಚ ನ್ಯಾಯಾಲಯದ ಒಂದು ತೀರ್ಪಿನ ಪ್ರಕಾರ ನೀರು ಒಂದು ಸಾರ್ವಜನಿಕ ಆಸ್ತಿ. ಪ್ರತಿದಿನ ಅವಶ್ಯಕತೆಗೆ ಬೇಕಾಗುವ ಇದನ್ನು ರಾಜ್ಯ ಸರ್ಕಾರ ಜವಾಬ್ದಾರಿಯಿಂದ ಉಪಯೋಗದಾರನಿಗೆ ಪೂರೈಸಬೇಕು. ಆದರೆ ಗ್ರಾಹಕ ಇದನ್ನು ಹಕ್ಕಿನಿಂದ ದೊರೆಕಿಸಿಕೊಳ್ಳುವುದು ಆಗುತ್ತಿಲ್ಲ. ಆದರೆ ೨೦೦೬ ರಲ್ಲಿ ಚಾಮರಾಜ ನಗರ ಜಿಲ್ಲೆಯಲ್ಲಿ ಒಬ್ಬ ಗ್ರಾಹಕ ವೇದಿಕೆಯ ಮೊರೆ ಹೋದಾಗ ಆತನಿಗೆ ನ್ಯಾಯ ದೊರೆಕಿಸಿಕೊಟ್ಟ ಶ್ರೇಯಸ್ಸು ಜಿಲ್ಲೆಯ ವೇದಿಕೆಗೆ ಸಂದಿದೆ. ಇದರಿಂದ ನೀರಾವರಿ ಸಲುವಾಗಿ ಪೂರೈಸುವ ನೀರು ಕೂಡ ಗ್ರಾಹಕನಾಗಿ ರೈತ ಪಡೆಯಬಹುದೆಂಬ ಅಂಶ ಬೆಳಕಿಗೆ ಬಂದಿದೆ. ಲೇಖಕರು ತಮ್ಮ ಲೇಖನದ ಮುಂದಿನ ಭಾಗದಲ್ಲಿ ರಾಷ್ಟ್ರೀಯ ಆಯೋಗ ರಾಜ್ಯ ಆಯೋಗ ಹಾಗೂ ಜಿಲ್ಲಾ ವೇದಿಕೆಗಳು ತೆಗೆದುಕೊಂಡ ವ್ಯಾಜ್ಯಗಳು ತೀರ್ಪು ನೀಡಿದ ವ್ಯಾಜ್ಯಗಳು ಹಾಗೂ ತೀರ್ಮಾನಿಸಲಾಗದೆ ಉಳಿದ ವ್ಯಾಜ್ಯಗಳು ೨೦೦೮ ಏಪ್ರೀಲ್ ವರೆಗಿನ ಮಾಹಿತಿ ನೀಡುತ್ತ ನಮ್ಮ ದೇಶದಲ್ಲಿ ಗ್ರಾಹಕ ಯಾವ ರೀತಿ ರಾಷ್ಟ್ರಮಟ್ಟ, ರಾಜ್ಯ ಮಟ್ಟ ಹಾಗೂ ಜಿಲ್ಲಾ ಮಟ್ಟದಲ್ಲಿ ನಷ್ಟಕ್ಕೆ ಪರಿಹಾರ ಕೋರಿ ವೇದಿಕೆಗಳ ಮೊರೆ ಹೋಗಬಹುದು ಹಾಗೆಯೆ ಹೋಗುವಾಗ ಯಾವ ಅಂಶಗಳನ್ನು ಮನದಲ್ಲಿ ಇರಿಸಿಕೊಳ್ಳಬೇಕೆಂದು ತಿಳಿಸಿದ್ದಾರೆ. ಹೀಗೆ ಗ್ರಾಮೀಣ ಗ್ರಾಹಕರಿಗೆ ತಿಳುವಳಿಕೆ ನೀಡುವ ನಿಟ್ಟಿನಲ್ಲಿ ಗ್ರಾಹಕ ಕ್ಷೇತ್ರದಲ್ಲಿ ಆಸಕ್ತಿ ಉಳ್ಳವರು, ಸರ್ಕಾರಗಳು, ಗ್ರಾಹಕ ಸಂಘ ಸಂಸ್ಥೆಗಳು, ಮಾಧ್ಯಮದವರ ಸಹಕಾರ ಗ್ರಾಹಕನಿಗೆ ಅವಶ್ಯ ಎಂದಿದ್ದಾರೆ.[೬]

**೨.೨.೭ ಡಾ. ಶೀತಲ್ ಕಪೂರ "ಡೆವಲೆಪ್‌ಮೆಂಟ್ ಆಫ್ ಕಂಜ್ಯುಮರಿಸಂ ಇನ್ ಇಂಡಿಯನ್ ವ್ವಿಲೇಜ"** ಎನ್ನುವ ಲೇಖನದಲ್ಲಿ ಲೇಖಕರು ಗ್ರಾಮೀಣ ಭಾರತದ ಚಿತ್ರಣವನ್ನು ಅಂಕಿಸಂಖ್ಯೆಗಳಿಂದ

ಸುವ್ಯವಸ್ಥಿತವಾಗಿ ಪ್ರಾರಂಭಿಸಿದ್ದಾರೆ. ರಾಷ್ಟ್ರೀಯ ಸಂಖ್ಯಾ ಮತ್ತು ಅರ್ಥಶಾಸ್ತ್ರದ ವರದಿ ಪ್ರಕಾರ ಗ್ರಾಮೀಣ ಜನಸಂಖ್ಯೆ ಸರಿಯಾಗಿ ಎರಡು ಪಟ್ಟು ಇರುವದರಿಂದ ಮಾರುಕಟ್ಟೆಯವರಿಗೆ ಭಾರತೀಯ ಗ್ರಾಮೀಣ ಗ್ರಾಹಕರಿಂದ ಬದಲಾವಣೆಗಳು ಕಂಡು ಬಂದಿದೆ. ಮಾಹಿತಿ ತಂತ್ರಜ್ಞಾನದ ಬೆಳವಣಿಗೆ ಸರಕಾರದ ಪಾಲಿಸಿಗಳು, ಕಾರ್ಪೋರೇಟ್‌ರ ಪದ್ಧತಿಗಳು ಸಂವಹನ ಮಾಧ್ಯಮಗಳಿಂದ ಗ್ರಾಮೀಣ ಮಾರುಕಟ್ಟೆ ಬದಲಾಗುತ್ತಿದೆ ಎಂದಿದ್ದಾರೆ. ಎಲ್ಲ ತರಹದ ವಸ್ತುಗಳು ಗ್ರಾಮೀಣ ಮಾರುಕಟ್ಟೆಗೆ ಲಗ್ಗೆ ಇಟ್ಟಿದ್ದು ಗ್ರಾಹಕತ್ವ ಹಾಗೂ ಗ್ರಾಹಕ ಚಳುವಳಿಗಳು ಈ ಪ್ರದೇಶಗಳಲ್ಲಿ ಬೆಳವಣಿಗೆಯಾಗುತ್ತಿವೆ. ಗ್ರಾಮೀಣ ಮಾರುಕಟ್ಟೆಗಳು, ಜಾಗತೀಕ ಮಾರುಕಟ್ಟೆಗಳನ್ನು ಮತ್ತು ಮಾಧ್ಯಮದವರನ್ನು ಆಕರ್ಷಿಸುತ್ತಿವೆ ಎನ್ನುತ್ತ ಗ್ರಾಮೀಣ ಮಾರುಕಟ್ಟೆಯ ಬದಲಾದ ಗುಣ ಲಕ್ಷಣಗಳನ್ನು ವಿವರಿಸಿದ್ದಾರೆ. ಗ್ರಾಹಕ ಚಳುವಳಿಗಳ ಯಶಸ್ಸು ಗ್ರಾಮೀಣ ಜನರ ಅರಿವು ತಿಳುವಳಿಕೆ ಮೇಲೆ ಅವಲಂಬಿಸಿದೆ, ಯಾರ ಲಾಭಕ್ಕಾಗಿ ಈ ಚಳುವಳಿಗಳು ಆರಂಭವಾಗುತ್ತವೆಯೋ ಚಳುವಳಿಯ ಬಗ್ಗೆ ಸಕಾರಾತ್ಮಕ ದೃಷ್ಟಿಕೋನ ಬೇಕಾಗುತ್ತದೆ. ಗ್ರಾಮೀಣ ಗ್ರಾಹಕರ ಕುರಿತು ಶ್ರದ್ಧೆ ಮತ್ತು ಸಂರಕ್ಷಣೆ ಬಹಳ ಮುಖ್ಯವಾಗಿ ಬೇಕಾಗುತ್ತದೆ. ಈ ಗ್ರಾಹಕರಿಗೆ ಹಕ್ಕುಗಳ ಕುರಿತು ಮನವರಿಕೆ ಮಾಡಿಕೊಡುವುದು ಅತ್ಯವಶ್ಯಕವಾದುದೆಂದು ಲೇಖಕರ ಅನಿಸಿಕೆ. ಇದಕ್ಕಾಗಿ ಪ್ರತಿಯೊಬ್ಬ ತಿಳುವಳಿಕೆ ಮತ್ತು ಆಸಕ್ತಿಯುಳ್ಳ ನಾಗರಿಕ (ಸಂಶೋಧಕ) ಸರಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಈ ನಿಟ್ಟಿನಲ್ಲಿ ಕಾರ್ಯ ತತ್ಪರರಾಗಬೇಕೆಂದು ಬರೆಯುತ್ತಾರೆ. ಈಗಿನ ಗ್ರಾಮೀಣ ಜನತೆ ಹೊಸದರ ಕುರಿತು ಹೆಚ್ಚಿನ ಆಸಕ್ತಿ ಹೊಂದಿರುವುದರಿಂದ ಗ್ರಾಹಕತ್ವದ ಕುರಿತು ಅವರಿಗೆ ಶಿಕ್ಷಣ ನೀಡುವ ನಿಟ್ಟಿನಲ್ಲಿ ಎಲ್ಲರೂ ಕಾರ್ಯತತ್ಪರರಾಗಬೇಕೆಂದು ತಿಳಿಸುತ್ತ ಈಗಿನ ಸರ್ಕಾರಗಳು ಮಾಧ್ಯಮಗಳ ಮೂಲಕ ಗ್ರಾಹಕ ಕಾರ್ಯಕ್ರಮಗಳನ್ನು ಹರಡುತ್ತಿವೆ ಎಂದಿದ್ದಾರೆ. ಈ ಒಂದು ಬೆಳವಣಿಗೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ತೆಗೆದುಕೊಂಡ ನಿರ್ಣಯಗಳು ಹಾಗೂ ಸರ್ಕಾರಿ ಸ್ವಾಮ್ಯದ ಶಾಖೆಗಳು ಹಾಕಿಕೊಂಡ ಕಾರ್ಯಕ್ರಮಗಳನ್ನು ವಿಶಾಲವಾಗಿ ವಿವರಿಸುತ್ತ, ಗ್ರಾಹಕ ಮಾಹಿತಿ ಕೋಶದ ಕುರಿತು ಕೂಡ ಬರೆದಿದ್ದಾರೆ. ಕೊರ್, ಐಐ, ಎಂಐಟಿ, ಮಿಡಿಯಾ ಲ್ಯಾಬ್, ಎನ್‌ಜಿಓ, ಎಡಿಆರ್‌ಎಂ ಇವುಗಳ ಕುರಿತು ಕೂಡ ಬರೆದಿದ್ದಾರೆ. ಇದಲ್ಲದೆ ಗ್ರಾಮೀಣ ಗ್ರಾಹಕರನ್ನೊಳಗೊಂಡ ಸಂಘ ಸಂಸ್ಥೆಗಳ ಬದಲಾವಣೆ ಮಾಹಿತಿ ತಂತ್ರಜ್ಞಾನದ ಸವಲತ್ತು ಅಂತರ್ಜಾಲದ ಶಿಕ್ಷಣ ಮುಂತಾದವುಗಳಿಂದ ಎಲ್ಲ ಗ್ರಾಹಕರಿಗೆ ಅನುಕೂಲ ವಾತಾವರಣ ಕಲ್ಪಿಸಬಹುದು ಎಂದಿದ್ದಾರೆ. ಇದಕ್ಕೆ ಸೇವಾ, ಗ್ಯಾನ್‌ದೂತ್ ಮುಂತಾದ ಪ್ರೋಜೆಕ್ಟ್‌ಗಳನ್ನು ಉದಾಹರಿಸಿದ್ದಾರೆ.[೭]

**೨.೨.೮** ಗ್ರಾಹಕ ರಕ್ಷಣಾ ಅಧಿನಿಯಮ ೧೯೮೬ ಕ್ಕೆ ಸಹಾಯಕವಾಗಿರುವ **'ರೈಟ್ ಟು ಇನ್ಫಾರ್ಮೇಶನ್ ಆಕ್ಟ್ ೨೦೦೫"** ರ ವಿಷಯವಾಗಿ ಚಿಕ್ಕೋಡಿಯಲ್ಲಿ ಹಮ್ಮಿಕೊಳ್ಳಲಾಗಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ವಿಚಾರದ ಅನುಸಾರ:

೧. ಡಾ. ಸಿ.ರಾಜಶೇಖರ ಇವರ ಪ್ರಕಾರ ಮಾಹಿತಿ ಹಕ್ಕು ಸಂವಿಧಾನಬದ್ದ ಹಕ್ಕು ಎಂದು ರುಜುವಾತಾಗಿದೆ.

೨. ಡಾ. ರಮೇಶ ಮಂಡಿಸಿದ ವಿಚಾರ ಮಾಹಿತಿ ಹಕ್ಕು ಕಾಯ್ದೆ ೨೦೦೫ ರ ಕಾರ್ಯ

೩. ಡಾ. ಸಿ.ಎಸ್. ಪಾಟೀಲರ ವಿಷಯ ಮಾಹಿತಿ ಹಕ್ಕು ಕಾಯ್ದೆ ೨೦೦೫ ರ ಮುಂದಿರುವ ಸವಾಲುಗಳು.

ಈ ಮೇಲಿನ ಎಲ್ಲ ವಿಚಾರ ಮಂಡನೆಗಳು ಗ್ರಾಹಕನ ವ್ಯಾಪ್ತಿಗೆ ಒಳಪಟ್ಟು ವಿಷಯಗಳು ಓದುಗನಿಗೆ ವಿಚಾರ ಮಾಡಿ ಅಧಿನಿಯಮದ ಉಪಯೋಗ ಪಡೆಯಲು ಪ್ರೇರೇಪಿಸುತ್ತವೆ.[೮]

**೨.೨.೯ಡಾ. ಮಹಿಂದರ ಸಿಂಗ್ ಮಿ ಅಮಿತ ಕುಮಾರ** ಇವರು ತಮ್ಮ ಲೇಖನ **"ನೆಸೇಸಿಟಿ ಆಫ್ ಕಂಜುಮರ್ಸ್ ಪ್ರೊಟೆಕ್ಷನ್ ಅವೇಯರ್ನೆಸ್ ಇನ್ ವ್ಹಿಲೇಜಿಸ್"** ದಲ್ಲಿ ಪ್ರಸ್ತಾವಿಕವಾಗಿ ಬರೆಯುತ್ತಾ ಹಿಂದಿನ ದಿನಗಳಂತೆ ಗ್ರಾಹಕರ ಜಾಗೃತಿಗೆ ಬಳಸುತ್ತಿದ್ದ ಪದ್ಧತಿಗಳು ಈಗ ಉಪಯೋಗವಿಲ್ಲ ಎಂದು ವಿವರಿಸುತ್ತಾರೆ. ಲೇಖನದ ಮುಂದಿನ ಭಾಗದಲ್ಲಿ ಗ್ರಾಮೀಣ ಗ್ರಾಹಕರ ಕೊಳ್ಳುವ ವರ್ತನೆಯ ಮೇಲೆ ಬೀರುವ ಪರಿಣಾಮಗಳನ್ನು ಪ್ರಸ್ತಾಪಿಸಿದ್ದಾರೆ. ನಂತರ ಗ್ರಾಮೀಣ ಗ್ರಾಹಕರು ಮೋಸ ಹೋಗುವ ದಾರಿಗಳನ್ನು ವಿಶಾಲವಾಗಿ ವಿವರಿಸಿದ್ದಾರೆ. ಕೊನೆಗೆ ಗ್ರಾಹಕರನ್ನು ಬಲಗೊಳಿಸಲು ಹಲವಾರು ದಾರಿಗಳನ್ನು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.[೯]

**೨.೨.೧೦ ಶ್ರೀ ಅಕ್ಬರ್ ಸಿದ್ದಿಕಿ ಹಾಗೂ ರಘುರಾಮ "ಕಂಜುಮರ್ಸ್ ಪ್ರೊಟೆಕ್ಷನ್ ಇನ್ ಇಂಡಿಯಾ-ಸಮ್ ರಿಫ್ಲೇಕ್ಷನ್ಸ್"** ಈ ಲೇಖನದಲ್ಲಿ ಗ್ರಾಮೀಣ ಭಾಗದ ಗ್ರಾಹಕರ ಶಿಕ್ಷಣದ ಅವಶ್ಯಕತೆಯನ್ನು ವಿವರಿಸಿದ್ದಾರೆ. ಗ್ರಾಹಕರ ರಕ್ಷಣಾ ಚಳುವಳಿಗಳಿಗೆ ಸರ್ಕಾರಗಳು, ವಾಣಿಜ್ಯ, ಸಮಾಜ, ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆಗಳ ಒತ್ತಾಸೆ ಬೇಕು ಎಂದಿದ್ದಾರೆ. ಕಾಯ್ದೆ ಕಾನೂನುಗಳು, ಕಾರ್ಯಕ್ರಮಗಳು ಯಶಸ್ವಿಯಾಗಬೇಕಾದರೆ ಸಂಸ್ಥೆಗಳ ಹಾಗೂ ಗ್ರಾಹಕರ ಒಳಗೊಳ್ಳುವಿಕೆ ಮಹತ್ವದ್ದಾಗಿದೆ ಎಂದು ಕರೆ ನೀಡಿದ್ದಾರೆ. ತಮ್ಮ ಲೇಖನದಲ್ಲಿ ಗ್ರಾಹಕ ರಕ್ಷಣೆಯ ಕಾಯ್ದೆ ಯಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ವಿವರಿಸಿದ್ದಾರೆ. ಕೊನೆಗೆ ಗ್ರಾಹಕ ಎಚ್ಚೆತ್ತುಕೊಳ್ಳಬೇಕಾದ ಸಂದೇಶವನ್ನು ನೀಡಿದ್ದಾರೆ.[೧೦]

**೨.೨.೧೧ ಸತ್ಯಂ ಸುಂದರಂ ಬರೆದ ಲೇಖನ "ವ್ಯಾಲ್ಯುವಂಟರಿಸಂ ಇನ್ ನಿವ್ ಏರಾ"** ದ ಪ್ರಕಾರ ಭಾರತದಲ್ಲಿ ಒಂದು ಲಕ್ಷಕ್ಕೂ ಮೀರಿ ಸ್ವಯಂ ಸಂಸ್ಥೆಗಳಿವೆ. ಈ ಸಂಸ್ಥೆಗಳು ಸಮಾಜದ ದಿಕ್ಕನ್ನು ಸರಿ ಮಾಡುವ ಕಾರ್ಯವನ್ನು ವಿಶ್ಲೇಷಿಸಿದ್ದಾರೆ. ಹಲವು ಕಾರಣಗಳಿಂದ ಗ್ರಾಮದ ಬಡವರನ್ನು ಸಂಘಟಿಸಲು ಅಸಾಧ್ಯ, ಆ ಕೆಲಸವನ್ನು ಸ್ವಯಂ ಸಂಘ ಸಂಸ್ಥೆಗಳು ಮಾಡಬೇಕು ಎಂದಿದ್ದಾರೆ.[೧೧]

**೨.೨.೧೨ ಎನ್. ಸರಾಫರ ಲೇಖನ "ಕಂಜುಮರ್ಸ್ ಪ್ರೊಟೆಕ್ಷನ್ ಇನ್ ಇಂಡಿಯಾ"** ದಲ್ಲಿ ಮೂಲ ತತ್ವಗಳನ್ನು ವಿಶ್ಲೇಷಿಸಿದ್ದಾರೆ. ಗ್ರಾಹಕರ ಕಾಯ್ದೆಗಳ ಕುರಿತು ಬರೆಯುತ್ತ ಗ್ರಾಹಕರ ಒತ್ತಡದಿಂದ ಗ್ರಾಹಕ ಸಂರಕ್ಷಣಾ ನಿಬಂಧನೆಗಳು ಹೇಗೆ ಉದ್ಭವವಾದವು ಹಾಗೂ ಕಾಯ್ದೆಗಳ ಸುಧಾರಣೆ ಕೂಡ ಈಗ ಅವಶ್ಯವೆಂದಿದ್ದಾರೆ ಲೇಖಕರು. ನಿಯಮಗಳನ್ನು ಮಾಡುವ ಜನರು ಇದರ ಕುರಿತು ವಿಚಾರ ಮಾಡಬೇಕು ಎಂದಿದ್ದಾರೆ.[೧೨]

**೨.೨.೧೩ ಡಾ. ಆರ್. ಕೆ. ಬಾಂಗಿಯಾ** ಬರೆದ **"ಕಂಜುಮರ್ಸ್ ಪ್ರೊಟೆಕ್ಷನ್ ಲಾ ಆಂಡ್ ಪ್ರೊಸಿಜರ್"** ಎನ್ನುವ ಪುಸ್ತಕದಲ್ಲಿ ಸಾಮಾನ್ಯ ಮನುಷ್ಯರಿಗೆ ಅವಶ್ಯವಿರುವ ಮಾಹಿತಿಯನ್ನು ಕೊಡುವ ಒಂದು ದಿಸೆಯಲ್ಲಿ ಗ್ರಾಹಕರ ಸಂರಕ್ಷಣಾ ಕಾಯ್ದೆಯ ಅಂಶಗಳನ್ನು ವಿವರಿಸಿದ್ದಾರೆ. ಈ ಪುಸ್ತಕದಲ್ಲಿ ಜಿಲ್ಲಾ ವೇದಿಕೆ, ರಾಜ್ಯ ವೇದಿಕೆ ಹಾಗೂ ರಾಷ್ಟ್ರ ವೇದಿಕೆಯ ಎಲ್ಲ ಮಾಹಿತಿಯನ್ನು ಒದಗಿಸಿದ್ದಾರೆ. ಗ್ರಾಹಕ ಎಂದರೆ ಯಾರು ಎಂದು ವಿವರಿಸುತ್ತ, ಹಲವಾರು ಸಂಘ ಸಂಸ್ಥೆಗಳಲ್ಲಿ ದೂರುಗಳನ್ನು ವೇದಿಕೆಗಳ ಪರಿಹರಿಸಿದ ಬಗ್ಗೆ ವಿವರಿಸಿದ್ದಾರೆ. ಗ್ರಾಹಕ ಸಂಘಗಳ ಕುರಿತು ವಿವರಿಸಿದ್ದಾರೆ. ಗ್ರಾಹಕ ಸಂರಕ್ಷಣೆಗೆ ಸಂಬಂಧಿಸಿದ ಎಲ್ಲ ಕಾಯ್ದೆಗಳನ್ನು ವಿವರಿಸಿ, ಗ್ರಾಹಕ ರಕ್ಷಣೆಯನ್ನು ಮಾಡುವ ಕುರಿತು ಪ್ರಸ್ತಾಪಿಸಿದ್ದಾರೆ. ಹಲವು ಮಾಹಿತಿಗಳನ್ನು ನೀಡಿ ಗ್ರಾಹಕ ತನ್ನ ಹಕ್ಕುಗಳನ್ನು ಕಾಯ್ದುಕೊಳ್ಳುವ ಬಗ್ಗೆ ವಿವರಿಸಿದ್ದಾರೆ.[೧೩]

**೨.೨.೧೪ ಸುಜಾ ಆರ್. ನೈಯರ** ಬರೆದ **"ಕಂಜುಮರ್ಸ್ ಬಿಹೇವಿಯರ್"** ಒಂದು ಉಪಯುಕ್ತ ಗ್ರಂಥ, ಇವರು ತಮ್ಮ ಪುಸ್ತಕವನ್ನು ಎಂಟು ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಮೊದಲನೆ ಅಧ್ಯಾಯ ಮಾರುಕಟ್ಟೆಯಲ್ಲಿ ಗ್ರಾಹಕ ವರ್ತನೆಯ ಪಾತ್ರ ಎನ್ನುವ ಕುರಿತು ವಿವರಿಸಿದ್ದಾರೆ. ಎರಡನೇಯ ಅಧ್ಯಾಯದಲ್ಲಿ ಗ್ರಾಹಕನ ನಿರ್ಣಯದ ಹಂತಗಳನ್ನು ವಿವರಿಸಿದ್ದಾರೆ. ಮೂರನೇ ಅಧ್ಯಾಯದಲ್ಲಿ ಸಮಾಜದಲ್ಲಿಯ ವರ್ಗ ಹಾಗೂ ಸಮಾಜದ ತೃಪ್ತಿಯ ಕುರಿತು ವಿವರಿಸುತ್ತಾ ಸಾಮಾನ್ಯ ಗ್ರಾಹಕನ ವರ್ತನೆಯ ಮೇಲೆ ಪ್ರಭಾವ ಬೀರುವ ಸಮಾಜದ ಅಂಶಗಳನ್ನು ವಿವರಿಸಿದ್ದಾರೆ. ನಾಲ್ಕನೇಯ

ಅಧ್ಯಾಯದಲ್ಲಿ ಗ್ರಾಹಕನ ವರ್ತನೆಯ ಮೇಲೆ ಗುಂಪಿನ ಪ್ರಭಾವದ ಕುರಿತು ವಿವರಿಸಿದ್ದಾರೆ. ಐದನೇಯ ಅಧ್ಯಾಯದಲ್ಲಿ ಹೊಸ ಸಂಶೋಧನೆಯ ಕುರಿತು ಗ್ರಾಹಕರ ವರ್ತನೆಯನ್ನು ವಿಷಯವಾಗಿ ವಿವರಿಸಿದ್ದಾರೆ. ಆರನೇಯ ಅಧ್ಯಾಯದಲ್ಲಿ ಗ್ರಾಹಕ ವರ್ತನೆಯ ಸಮಗ್ರ ಅವಲೋಕನವಿದೆ. ಏಳನೇ ಅಧ್ಯಾಯದಲ್ಲಿ ಕೈಗಾರಿಕೆ ಗ್ರಾಹಕ ವರ್ತನೆಯ ಕುರಿತು ಮಾಹಿತಿ ನೀಡಿದ್ದಾರೆ. ಕೊನೆಗೆ ಎಂಟನೇ ಅಧ್ಯಾಯದಲ್ಲಿ ಗ್ರಾಹಕ ಮತ್ತು ಮಾರುಕಟ್ಟೆ ವಿಭಜನೆಯ ಕುರಿತು ಮಾಹಿತಿ ಇದೆ. ಪ್ರಸ್ತುತ ಅಧ್ಯಯನದ ಮಾಹಿತಿ ಸಂಗ್ರಹಣೆಯಲ್ಲಿ ಗ್ರಾಹಕನ ವರ್ತನೆಗೆ ಸ್ಪಂದಿಸಲು ಈ ಒಂದು ಗ್ರಂಥ ಉಪಯುಕ್ತವಾಗಿದೆ.[೧೪]

**೨.೨.೧೫ ಶ್ರೀ ವಿದ್ಯಾದೀಶ ಉಪಾಧ್ಯೆ** ಬರೆದ **"ಗ್ರಾಹಕ ರಕ್ಷಣಾ ಅಧಿನಿಯಮ ೧೯೮೬ ಹಾಗೂ ಗ್ರಾಹಕರ ರಕ್ಷಣಾ ನಿಯಮಗಳು ೧೯೮೭"** ಎನ್ನುವ ಕಿರು ಹೊತ್ತಿಗೆ ಸಂಶೋಧನೆಗೆ ಉಪಯುಕ್ತವಾಗಿದೆ. ಈ ಪುಸ್ತಕ ನಾಲ್ಕು ಭಾಗವಾಗಿ ಸರಳವಾದ ಮಾಹಿತಿಯನ್ನು ನೀಡಿದೆ. ಜನ ಸಾಮಾನ್ಯರು ಈ ಅಧಿನಿಯಮಗಳನ್ನು ಅರಿತುಕೊಳ್ಳುವುದು ಅವಶ್ಯಕವಾಗಿದೆ.[೧೫]

**೨.೨.೧೬ ಡಾ. ವ್ಹಿ. ಕೆ. ಅಗರವಾಲರ "ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್ ೧೯೮೬"** ಒಂದು ಉಪಯುಕ್ತ ಪುಸ್ತಕದಲ್ಲಿ, ಗ್ರಾಹಕ ರಕ್ಷಣೆಯ ಕುರಿತು ಅಂತರ ರಾಷ್ಟ್ರೀಯ ಸ್ಥರದಲ್ಲಿ ಆದ ಬೆಳವಣಿಗೆ ಹಾಗೂ ಭಾರತದಲ್ಲಿಯ ಬದಲಾವಣೆಯ ಕುರಿತು ವಿವರಿಸಿದ್ದಾರೆ. ಗ್ರಾಹಕ ರಕ್ಷಣೆಯಲ್ಲಿ ಇತ್ತೀಚಿಗೆ ಆದ ಬೆಳವಣಿಗೆಗಳ ಕುರಿತು ವಿವರಿಸಿದ್ದಾರೆ. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಕೈಗೊಳ್ಳಬೇಕಾದ ಕಾರ್ಯಗಳನ್ನು ಅವರು ಸೂಚಿಸಿದ್ದಾರೆ. ಲೇಖಕರು ತಮ್ಮ ಪುಸ್ತಕದ ಎರಡನೇ ಭಾಗದಲ್ಲಿ ಗ್ರಾಹಕರ ರಕ್ಷಣೆಯ ಅಧಿನಿಯಮದ ಕುರಿತು ವಿವರಿಸಿದ್ದಾರೆ. ವಿಷಯಗಳನ್ನು ಮುಂದುವರೆಸುತ್ತ ೧೯೮೮ ಕರ್ನಾಟಕ ಗ್ರಾಹಕ ರಕ್ಷಣಾ ಅಧಿನಿಯಮಗಳನ್ನು ವಿವರಿಸಿದ್ದಾರೆ ಗ್ರಾಹಕ ಸಂಘಗಳು ಕಾರ್ಯನಿರ್ವಹಿಸುತ್ತಿರುವ ವಿವರಗಳನ್ನು ಕೊಟ್ಟಿದ್ದಾರೆ.[೧೬]

**೨.೨.೧೭** ಅಖಿಲ ಭಾರತೀಯ ಗ್ರಾಹಕ ಪಂಚಾಯತ ಮೈಸೂರು ಜಿಲ್ಲಾ ಘಟಕದವರು ೨೦೦೫ ರಲ್ಲಿ ಬಿಡುಗಡೆ ಮಾಡಿದ ಹೊತ್ತಿಗೆ **"ಗ್ರಾಹಕ ಹಿತರಕ್ಷಣಾ ಕಾಯ್ದೆ ೧೯೮೬"**[೧೭]ರ ಕೈಪಿಡಿಯಲ್ಲಿ ಗ್ರಾಹಕ ವೇದಿಕೆಗಳು ನೀಡಿದ ಹಲವು ತೀರ್ಪುಗಳನ್ನು ವಿವರಿಸಿದ್ದಾರೆ. ಈ ಕೈಪಿಡಿಯಲ್ಲಿ ಭಾಗ ಮೂರರಲ್ಲಿ ವಿವಿಧ ಕಾಯ್ದೆಗಳ ಜಿಲ್ಲಾ ವೇದಿಕೆಗಳ ವಿವರಗಳನ್ನು ನೀಡಿದ್ದಾರೆ. ಐದನೇಯ ಹಾಗೂ ಕೊನೆಯ ಭಾಗದಲ್ಲಿ ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಕಾಯ್ದೆ ೨೦೦೨ನ್ನು ವಿವರವಾಗಿ ನೀಡಿದ್ದಾರೆ.[೧೭]

**೨.೨.೧೮ ಶ್ರೀ ಕೆ. ಆರ್. ಬುಲಚಂದಾನಿಯವರ** ಪುಸ್ತಕ **"ಬಿಜಿನೇಸ್ ಫಾರ್ ಮ್ಯಾನೆಜಮೆಂಟ್"** ದಲ್ಲಿಯ ಎರಡನೆಯ ಭಾಗದ ೫ ನೇ ಪ್ರಕರಣ "ಲಾ ರಿಲೇಟಿಂಗ್ ಕಂಜುಮರ್ಸ್ ಪ್ರೊಟೆಕ್ಷನ್" ನಲ್ಲಿ ಗ್ರಾಹಕರಿಗೆ ಸಂಬಂಧಿಸಿದ ಕಾಯ್ದೆಗಳನ್ನು ವಿವರಿಸಿದ್ದಾರೆ. ಪೀಠಿಕೆಯ ಭಾಗದಲ್ಲಿ ಗ್ರಾಹಕರ ಚಳುವಳಿಯ ಕುರಿತು ಹೊರದೇಶ ಹಾಗೂ ಭಾರತದಲ್ಲಿ ಕಾಲಕಾಲಕ್ಕೆ ಆದ ಬದಲಾವಣೆಗಳನ್ನು ವಿವರಿಸಿದ್ದಾರೆ. ನಂತರ ಗ್ರಾಹಕ ಕಾಯ್ದೆ ೧೯೮೬ ರ ಕುರಿತು ಪ್ರಸ್ತಾಪಿಸಿದ್ದಾರೆ. ೨೦೦೨ ರ ಬದಲಾದ ಕಾಯ್ದೆಯನ್ನು ವಿವರಿಸಿದ್ದಾರೆ. ಗ್ರಾಹಕ ಕಾಯ್ದೆ ೧೯೮೬ ಶಾಸನ ಮಾಡಿದಾಗ ಗ್ರಾಹಕ ವೇದಿಕೆಗಳನ್ನು ತೆರೆಯುವ ಸಂಬಂಧಿತ ಶಾಸನಗಳನ್ನು ಮಾಡಿರುವುದಾಗಿ ಉಲ್ಲೇಖವಿದೆ ಗ್ರಾಹಕ ರಕ್ಷಣೆಯ ಪರಿಮಿತಿ ಕೂಡ ಅವರು ಕೊಟ್ಟಿದ್ದಾರೆ. ಅಧ್ಯಾಯದ ಮೊದಲನೆಯ ಭಾಗದಲ್ಲಿ ಗ್ರಾಹಕ ಹಾಗೂ ಗ್ರಾಹಕರ ವ್ಯಾಜ್ಯದ ಅರ್ಥವನ್ನು ಕೊಡುವ ಪ್ರಯತ್ನ ಮಾಡಿದ್ದಾರೆ. ಹಲವು ಪ್ರಕರಣಗಳನ್ನು ಉದಾಹರಿಸುತ್ತ ಗ್ರಾಹಕ ಎಂದರೆ ಯಾರು? ಎಂದು ತಿಳಿಸಿದ್ದಾರೆ. ಮುಂದಿನ ಭಾಗದಲ್ಲಿ ಗ್ರಾಹಕ ರಕ್ಷಣಾ ಮಂಡಳದ ಕುರಿತು ಮಾಹಿತಿ ನೀಡಿದ್ದಾರೆ. ಕೇಂದ್ರ, ರಾಜ್ಯ, ಹಾಗೂ ಜಿಲ್ಲೆಯ ಮಂಡಳಗಳ ಅರ್ಥ ಅಲ್ಲಿಯ ಸದಸ್ಯರು ಸಭೆಯ ವಿಧಾನ ವಿವರಿಸುತ್ತಾ ಅವುಗಳ ಉದ್ದೇಶಗಳನ್ನು ಕೊಟ್ಟಿದ್ದಾರೆ. ಮೂರನೇ ಭಾಗದಲ್ಲಿ ಗ್ರಾಹಕ ವಾಜ್ಯಗಳ ಪರಿಹಾರ ಕಾರ್ಯಕಾರಿ ಕಚೇರಿ (ಏಜೆನ್ಸ್)ಗಳ ಕುರಿತು ಮಾಹಿತಿ ನೀಡಿದ್ದಾರೆ. ಜಿಲ್ಲಾ ವೇದಿಕೆ, ರಾಜ್ಯ ಆಯೋಗ, ರಾಷ್ಟ್ರ ಆಯೋಗಗಳ ಅರ್ಥ, ಕಾಯ್ದೆಯ ವ್ಯಾಪ್ತಿ ಕಾರ್ಯದ ವಿಧಾನ, ರಚನೆ ಕುರಿತು ವಿವರಿಸಿದ್ದಾರೆ. ಸಂಶೋಧಕರಿಗೆ ಅನುಕೂಲವಾದ ಎಲ್ಲ ಮಾಹಿತಿ ಈ ಗ್ರಂಥದಲ್ಲಿ ಅಡಕವಾಗಿದೆ. ಜಿಲ್ಲಾ ಗ್ರಾಹಕ ವೇದಿಕೆಯ ಕಾರ್ಯ ವೈಖರಿಯ ವಿಶ್ಲೇಷಣೆಗೆ ಈ ಗ್ರಂಥ ಅನುಕೂಲವಾಗಿದೆ.[೧೮]

**೨.೨.೧೯ ಚಂದ್ರಕಾಂತ ಶರ್ಮಾ**ರ ಸಂಶೋಧನೆ **"ರೋಲ್ ಆಫ್ ಕಂಜುಮರ್ಸ್ ಆರ್ಗನೈಜೇಷನ್ ಇನ್ ಕಂಜುಮರ್ಸ್ ಪ್ರೊಟೆಕ್ಷನ್"** ಇಲ್ಲಿ ಸ್ವಯಂ ಗ್ರಾಹಕ ಸಂಸ್ಥೆಗಳ ಕಾರ್ಯಗಳನ್ನು ವಿಶ್ಲೇಷಿಸಿದ್ದಾರೆ. ತಮ್ಮ ಸಂಶೋಧನೆಯಲ್ಲಿ ಮೂರು ಅಂಶಗಳಿಗೆ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಸರ್ಕಾರದ ಸಂಸ್ಥೆಗಳು, ವ್ಯಾಪಾರಸ್ಥರು ಹಾಗೂ ಸಹಕಾರದ ಪ್ರಯತ್ನಗಳನ್ನು ವಿಶ್ಲೇಷಿಸಿದ್ದಾರೆ. ಸಂಶೋಧಕರು ಗ್ರಾಹಕ ಜಾಗೃತಿಯ ಅವಶ್ಯಕತೆ ಹಾಗೂ ವ್ಯಾಜ್ಯಗಳನ್ನು ಪರಿಹರಿಸುವ ವಿಧಾನಗಳಲ್ಲಿ ಸುಧಾರಣೆಯ ಮೇಲೆ ಬೆಳಕು ಚೆಲ್ಲಿದ್ದಾರೆ. ಸಮಾಜ ಹಾಗೂ ಪರಿಸರಗಳು ಗ್ರಾಹಕರ ಸ್ಥಿತಿಗೆ ಕಾರಣ ಎಂದಿದ್ದಾರೆ. ಸಂಘ ಸಂಸ್ಥೆಗಳು ಗ್ರಾಹಕ ಶಿಕ್ಷಣ ಮಾಹಿತಿ ಹಾಗೂ ರಕ್ಷಣಾ ಚಟುವಟಿಕೆಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಕೆಲಸ ಮಾಡಲು ಸೂಚಿಸಿದ್ದಾರೆ.[೧೯]

**೨.೨.೨೦ ಆರ್.ಕೆ. ನಾಯಕ** ತಮ್ಮ ಪುಸ್ತಕ **"ಕಂಜುಮರ್ಸ್ ಪ್ರೊಟೆಕ್ಷನ್ ಇನ್ ಇಂಡಿಯಾ"** ದಲ್ಲಿ ಶಾಸನಗಳನ್ನು ತರುವುದು ಭಾರತದಲ್ಲಿ ತುಂಬಾ ತೊಂದರೆ. ಅದರಲ್ಲೂ ಗ್ರಾಹಕರನ್ನು ದೌರ್ಜನ್ಯದಿಂದ ಪಾರು ಮಾಡುವುದು, ಮತ್ತು ನಿಯಂತ್ರಿಸುವುದು ಕಷ್ಟ ಸಾಧ್ಯ. ಗ್ರಾಹಕರು ಸುಶಿಕ್ಷಿತರಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕು. ಸರ್ಕಾರುಗಳು ಇದರಲ್ಲಿ ತೊಡಗಿಸಿಕೊಳ್ಳುವುದಕ್ಕಿಂತ ಗ್ರಾಹಕ ಸಂಘ ಸಂಸ್ಥೆಗಳು ಹಾಗೂ ಗ್ರಾಹಕರೆ ಎಚ್ಚೆತ್ತುಕೊಳ್ಳಬೇಕು ಎಂದಿದ್ದಾರೆ.[೨೦]

**೨.೨.೨೧ ಎಂ.ಜೆ. ಆಂಟೋನಿಯವರ** ಗ್ರಂಥ **"ಕಂಜುಮರ್ಸ್ ರೈಟ್ಸ್"** ದಲ್ಲಿ ಗ್ರಾಹಕರ ಜೊತೆಗಿನ ಬ್ಯಾಂಕುಗಳ ಇನ್ಸುರನ್ಸ್ ಕಂಪನಿಗಳ ಸಾರ್ವಜನಿಕ ಕಂಪನಿಗಳ ಸಂಬಂಧವನ್ನು ಒಳಗೊಂಡಿದೆ. ಇದನ್ನಲ್ಲದೆ ಪುಸ್ತಕದಲ್ಲಿ ಮೋಸದ ವ್ಯವಹಾರಗಳು, ಹಾದಿತಪ್ಪಿಸುವ ಜಾಹೀರಾತುಗಳು, ನಿರ್ಬಂಧಿತ ವ್ಯವಹಾರಗಳು, ಗ್ರಾಹಕ ವೇದಿಕೆಯ ಕುರಿತು ಮತ್ತು ತೂಕ ಅಳತೆಯ ಕುರಿತು ಹೇರಳ ಮಾಹಿತಿ ಇದೆ. ಅಲ್ಲದೆ ವಿವರಣೆಗಳನ್ನು ಒಳಗೊಂಡ ಗ್ರಾಹಕರ ವ್ಯಾಜ್ಯಗಳು, ಪ್ರಸಿದ್ಧ ಪತ್ರಿಕೆಗಳ ವಿಮರ್ಶೆಗಳು, ಸಾರ್ವಜನಿಕರ ಅನಿಸಿಕೆಗಳನ್ನು ಹೊಂದಿದೆ.[೨೧]

**೨.೨.೨೨ ಗುರ್ಜಿತ ಸಿಂಘರ** ಪುಸ್ತಕ **"ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್ ೧೯೮೬ ಇನ್ ಇಂಡಿಯಾ"** ಗ್ರಾಹಕ ರಕ್ಷಣಾ ಕಾಯ್ದೆಯ ಕುರಿತು ಮಾಡಿದ ಸಂಶೋಧನೆಯ ಗ್ರಂಥ. ಈ ಒಂದು ಸಂಶೋಧನೆಯ ಪ್ರಕಾರ ಭಾರತದಲ್ಲಿ ೭೫೦೦ ನ್ಯಾಯಾಲಯಗಳು ಇದ್ದರೂ ಅರ್ಧದಷ್ಟು ಜನಸಂಖ್ಯೆ ಇದರ ಸದುಪಯೋಗದಿಂದ ವಂಚಿತವಾಗಿದ್ದಾರೆ. ಹಲವಾರು ವರ್ಷಗಳಿಂದ ಈ ನ್ಯಾಯಾಲಯಗಳು ನಗರದ ಮಧ್ಯಮ ವರ್ಗ ಹಾಗೂ ಶ್ರೀಮಂತರ ದೂರುಗಳಿಗೆ ಸ್ಪಂದಿಸುತ್ತಿವೆ. ಇವು ಗ್ರಾಮದ ಜನರ ಕಷ್ಟಗಳಿಗೆ ಸ್ಪಂದಿಸುತ್ತಿಲ್ಲ. ನ್ಯಾಯಾಲಯಗಳು ಕೂಡ ಕೆಲಸದ ಒತ್ತಡಗಳಿಂದ ಸುಸ್ತಾಗಿವೆ. ಕಾಯ್ದೆಯ ವ್ಯವಸ್ಥೆ ಹೀಗೆ ಮುಂದುವರೆದರೆ ಹದಗೆಡುವುದರಲ್ಲಿ ಸಂಶಯವಿಲ್ಲ ಎನ್ನುವುದು ಸಂಶೋಧಕರ ಚಿಂತನೆ. ಹೀಗಿರುವಾಗ ಗ್ರಾಹಕರಿಗಾಗಿಯೆ ಬೇರೆ ಶಾನಸಗಳನ್ನು ಕಾಯ್ದೆ ಕಾನೂನುಗಳನ್ನು ಮಾಡಿ ಪ್ರತ್ಯೇಕವಾದ ಕೋರ್ಟಿನ ವ್ಯವಸ್ಥೆ ಮಾಡಬಹುದು ಎಂದು ಸೂಚಿಸಿದ್ದಾರೆ. ಅವರ ಪ್ರಕಾರ ಗ್ರಾಹಕ ಶಿಕ್ಷಣವು ಪ್ರಮುಖವಾದ ಗ್ರಾಹಕ ರಕ್ಷಣೆಯ ಶಾಸನದ ಲಕ್ಷಣವಾಗಬೇಕು ಎಂದಿದೆ. ಆಧುನಿಕ ಭಾರತದಲ್ಲಿ ಸದ್ಯದ ಪರಿಸ್ಥಿತಿಯಲ್ಲಿ ತೀವ್ರವಾದ ಸಾಮಾನ್ಯ ಮನುಷ್ಯರಿಗೆ ದೊರೆಯುವ ಶಾಸನಗಳ ಅವಶ್ಯಕತೆಯ ಕುರಿತು ಪ್ರಸ್ತಾಪಿಸಿದ್ದಾರೆ. ಎಲ್ಲರೂ ತಿಳಿದಂತೆ ಇದನ್ನು ಪಾಶ್ಚಿಮಾತ್ಯದಿಂದ ತರಲಾಗದು. ಹಾಗೆಯೇ ಗ್ರಾಹಕನ ಬರಿದಾದ ಒಡಲನ್ನು ಕೂಡ ಇದು ತುಂಬದು. ಆದರೆ ಗ್ರಾಹಕನ ಸಾಮಾನ್ಯವಾದ ಬೇಡಿಕೆಗಳಾದ ನೀರಿನ ಅನುಕೂಲ ಪರಿಸರ ಮಾಲಿನ್ಯ

ಮುಂತಾದವುಗಳ ಕಡೆ ಗಮನ ಹರಿಸಿದರೆ ನಿಜವಾದ ಸಾಧನೆ ಮಾಡಿದಂತಾಗುತ್ತದೆ ಎಂದಿದ್ದಾರೆ. ಸಿಂಘರ ಈ ಒಂದು ಸಂಶೋಧನಾ ಗ್ರಂಥ, ಗ್ರಾಹಕರ ಸಂರಕ್ಷಣೆಯಲ್ಲಿ ವಾಣಿಜ್ಯದ ಸ್ವಯಂ ಪ್ರತಿಬಿಂಬವನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಈ ಒಂದು ಉಪಯುಕ್ತ ಗ್ರಂಥ ಗ್ರಾಹಕರ ಸಂರಕ್ಷಣೆಗೆ ಕಾನೂನಿಗಿಂತ ಬೇರೆ ಶಾಸನಗಳ ಅವಶ್ಯಕತೆ ಹೆಚ್ಚು ಮಹತ್ವ ನೀಡಿದೆ. ಉದಾಹರಣೆಗೆ ಗ್ರಾಹಕ ಶಿಕ್ಷಣ ಗ್ರಾಹಕ ಕಾನೂನು ಪ್ರಜ್ಞೆ ಅಂತರಾಷ್ಟ್ರೀಯ ಸಹಭಾಗಿತ್ವ ಮುಂತಾದವುಗಳು. ಗುರ್ಜಿತ ಸಿಂಘ ತಮ್ಮ ಸಂಶೋಧನೆಯ ಕೊನೆಯ ಭಾಗದಲ್ಲಿ ಗ್ರಾಹಕರ ಸಂರಕ್ಷಣಾ ಅಧಿನಿಯಮ ೧೯೮೬ ರ ಶಾಸನ ಬದ್ದ ಕೆಲಸ, ಸಂಶೋಧನೆ, ಶಾಸನ ಯಶಸ್ವಿ ಕಾರ್ಯವನ್ನು ಉಲ್ಲೇಖಿಸಿದ್ದಾರೆ. ಅದರ ಪರಿಣಾಮವನ್ನು ವಿಶ್ಲೇಷಿಸಿದೆ. ಆದರೆ ಶಾಸನದ ಲಾಭ ಗ್ರಾಹಕರಿಗೆ ದೊರೆಯಬೇಕಾದರೆ ಅದನ್ನು ಕಾರ್ಯರೂಪಕ್ಕೆ ತರಲು ಬೇಕಾಗುವ ಎಲ್ಲ ಸೌಲಭ್ಯಗಳನ್ನು ಒದಗಿಸಬೇಕು ಎಂದಿದ್ದಾರೆ. ಕೊನೆಗೊಳಿಸುತ್ತಾ ಸಂಶೋಧಕರು ಭಾರತದಂತಹ ದೇಶದಲ್ಲಿ ಯಾವುದೇ ಶಾಸನ ಯಶಸ್ವಿಯಾಗಿ ಉಪಯೋಗವಾಗಬೇಕಾದರೆ ಶಾಸನದ ಜೊತೆಗೆ ಜನಸಾಮಾನ್ಯರ ಸ್ಪಂದನೆಯ ಅವಶ್ಯಕತೆ ಇರುತ್ತದೆ ಎಂದಿದ್ದಾರೆ.[೨೨]

**೨.೨.೨೩ ಪುಷ್ಪಾ ಗಿರಿಮಾಜಿಯವರು** ಬರೆದ ಪುಸ್ತಕ **“ಕಂಜ್ಯುಮರ್ಸ್ ರೈಟ್ಸ್ ಫಾರ್ ಎವರಿವನ್, ಟೆಕ್ನಿಕಲ್ ರಿಡ್ರೆಸಲ್ ಸ್ಕಿಲ್ ಆಂಡ್ ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್ ೧೯೮೬”** ಕುರಿತು ಒಳಗೊಂಡಿದೆ. ಮೊದಲನೇ ಅಧ್ಯಾಯದಲ್ಲಿ ಗ್ರಾಹಕ ಪರಿಹಾರ ಪದ್ಧತಿ ಕುರಿತು ವಿಶ್ಲೇಷಿಸಿದ್ದಾರೆ. ಎರಡನೇ ಅಧ್ಯಾಯದಲ್ಲಿ ಗ್ರಾಹಕರ ಪರಿಹಾರ ಪದ್ದತಿ ಕುರಿತು ಚರ್ಚಿಸಿದ್ದಾರೆ. ನಂತರದ ಅಧ್ಯಾಯಗಳನ್ನು ವಿಶೇಷ ಸೇವೆಗಳಾದ ಹೌಸಿಂಗ, ವಿದ್ಯುತ್ ಸರಬರಾಜು, ದೂರಸಂಪರ್ಕ ಸೇವೆ, ರೈಲ್ವೆ, ಜೀವ ವಿಮಾ ನಿಗಮದ ಸೇವೆ ಹಾಗೂ ಆರೋಗ್ಯ ಸೇವೆಗಳ ಕುರಿತು ಮಹತ್ವದ, ಗ್ರಾಹಕರಿಗೆ ಉಪಯೋಗವಾಗುವಂಥಹ ಮಾಹಿತಿಯನ್ನು ನೀಡಿದ್ದಾರೆ. ಕೊನೆಯ ಅಧ್ಯಾಯದಲ್ಲಿ ಕಾನೂನಿನ ತಿಳುವಳಿಕೆ ಅರಿಯುವಲ್ಲಿ ಗ್ರಾಹಕನಿಗೆ ಆಗುವ ತೊಂದರೆಯನ್ನು ವಿವರಿಸಿದ್ದಾರೆ. ಹಾಗೆಯೇ ಬಹಳ ಸಲ ದೂರುಗಳಿಗೆ ಗ್ರಾಹಕನಿಗೆ ವಿರುದ್ದವಾಗಿ ತೀರ್ಪು ನೀಡಲ್ಪಡುತ್ತದೆ. ಲೇಖಕಿ ಅಚ್ಚರಿಯೊಂದಿಗೆ ವಿವರಿಸುತ್ತಾ ಸಾರ್ವಜನಿಕ ಉದ್ಯಮಗಳ ತಪ್ಪು ಮಾಡಿದರೂ ಕೋರ್ಟಗಳು ಅವರಿಗೆ ಕ್ಲಿನ್ ಚಿಟ್ ಕೊಡುವ ಪರಿ ವರ್ಣಿಸಿದ್ದಾರೆ. ಕೊನೆಗೆ ಲೇಖಕಿ ಗ್ರಾಹಕರಿಗೆ ಹಲವಾರು ದೂರುಗಳನ್ನು ಸಲ್ಲಿಸುವ ದಾರಿಗಳನ್ನು ವಿವರಿಸಿದಾರೆ. ಸಾಕ್ಷಿಯ ಪುರಾವೆಗಳ ಮಹತ್ವ, ವ್ಯಾಪಾರ ವಹಿವಾಟಿನ ರಿಕಾರ್ಡ, ಪರಿಣಾಮಕಾರಿ ದೂರಗಳನ್ನು ಬರೆಯುವ ಮಹತ್ವನ್ನು ಲೇಖಕಿ ಸಾರಿ ಹೇಳಿದ್ದಾರೆ.[೨೩]

**೨.೨.೨೪ ಹೆಚ್.ಡಿ.ತ್ರಿವೇದಿ** ಈ ಲೇಖಕರು ಬರೆದ **"ಫುಡ್ ಅಡಲ್ಟರೇಶನ್ ಆಕ್ಟ್ ೧೯೫೪"** ರಲ್ಲಿ ಲೇಖಕರು ಗ್ರಾಹಕರಿಗೆ ಆಗುವ ಮೋಸ ಹೇಗೆ ಕಾನೂನಿನ ಮೂಲಕ ತಡೆಯಬಹುದು ಎಂದು ವಿವರಿಸಿದ್ದಾರೆ. ಈ ಒಂದು ಗ್ರಂಥದಲ್ಲಿ ಏಳು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೇ ಭಾಗದಲ್ಲಿ ಕಾನೂನಿನ ಶಿರೋನಾಮೆ ವ್ಯಾಕ್ಯಗಳು ರೂಲ್ಸಗಳನ್ನು ವಿವರಿಸಲಾಗಿದೆ. ಎರಡನೇ ಭಾಗದಲ್ಲಿ ಕೇಂದ್ರ ಸಮಿತಿಯ ಕುರಿತು. ಮೂರನೇ ಭಾಗದಲ್ಲಿ ಸಾಮಾನ್ಯವಾದ ಕಾಯ್ದೆ ಗಳನ್ನು ಹಾಗೂ ಐದನೇ ಭಾಗದಲ್ಲಿ ಆಹಾರವನ್ನು ವಿಶ್ಲೇಷಣೆ ಮಾಡುವ ವಿಧಾನವನ್ನು ವಿವರಿಸಿದ್ದಾರೆ. ಆರನೇ ಭಾಗದಲ್ಲಿ ಹದಿನಾಲ್ಕು ರಾಜ್ಯಗಳ ಕಾಯ್ದೆಗಳನ್ನು ವಿವರಿಸಿದ್ದಾರೆ. ಏಳನೇ ಭಾಗದಲ್ಲಿ ಆಹಾರ ಕಲಬೆರಿಕೆ ತಡೆಯುವ ಕಾಯ್ದೆ ೧೯೫೫ ರ ಕುರಿತು ವಿವರಿಸಿದ್ದಾರೆ. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಗುರುತಿಸಿರುವ ಗ್ರಾಹಕ-ಹಕ್ಕುಗಳಲ್ಲಿ ಒಂದಾದ ರಕ್ಷಣೆಯ ಹಕ್ಕನ್ನು ಪಡೆಯ ಬೇಕಾದರೆ, ಗ್ರಾಹಕರಿಗೆ **"ಆಹಾರ ಕಲಬೆರಿಕೆ ತಡೆ ಕಾಯ್ದೆ ೧೯೫೪"**ರ ಅರಿವಿರಬೇಕು. ಪ್ರಸಿದ್ದ ವಕೀಲರಾದ ತ್ರಿವೇದಿಯವರು ಬರೆದ ಈ ಒಂದು ಗ್ರಂಥ ತುಂಬ ಉಪಯುಕ್ತವಾಗಿದೆ.[೨೪]

**೨.೨.೨೫ ಪಿ.ಎಲ್. ಮಲ್ಲಿಕ** ಇವರು ಬರೆದ **"ವೇಟ್ಸ್ ಆಂಡ್ ಮೇಜರಮೆಂಟ್ ಲಾ"** ಎನ್ನುವ ಗ್ರಂಥ ಗ್ರಾಹಕ ತೂಕ ಹಾಗೂ ಅಳತೆಗಳಿಂದ ವ್ಯಾಪಾರಿಗಳಿಂದ ಆಗುವ ಮೋಸವನ್ನು ಹೇಗೆ ತಡೆಯಬಹುದು ಹಾಗೂ ಯಾವ ರೀತಿ ಎಚ್ಚರವಾಗಿರಬೇಕು ಎಂದು ವಿವರಿಸಿದ್ದಾರೆ. ಈ ಒಂದು ಗ್ರಂಥದಲ್ಲಿ ಒಂಬತ್ತು ವಿಭಾಗಗಳಿವೆ. ಮೊದಲನೇ ಭಾಗ ೧೯೭೬ರ ಕಾಯ್ದೆ, ಎರಡನೇ ಭಾಗ ೧೯೭೭ ರಲ್ಲಿಯ ಕಾನೂನುಗಳು, ಮೂರನೇ ಭಾಗ ೧೯೮೭ ರಲ್ಲಿ ಪಾಸಾದ ಸಾಮಾನ್ಯ ಕಾಯ್ದೆ, ನಾಲ್ಕನೇ ಭಾಗದಲ್ಲಿ ಪಾಸಾದ ಮಾದರಿಗಳು, ಐದನೇ ಭಾಗದಲ್ಲಿ ರಾಜ್ಯಗಳಲ್ಲಿ ತಪಾಸಾಗುವ ಹಾಗೂ ನಮೂನೆಗಳ ಕಾಯ್ದೆ ೧೯೮೭, ಆರನೇ ಭಾಗದಲ್ಲಿ ಅಂಕಿಅಂಶಗಳನ್ನನ್ನೊಳಗೊಂಡ ರಾಷ್ಟ್ರೀಯ ಮಾದರಿಗಳು ೧೯೮೮ ರ ಕಾಯ್ದೆ, ಏಂಟನೇ ಭಾಗದಲ್ಲಿ ತೂಕ ಮತ್ತು ಅಳತೆಗಳ ಘೋಷಣೆ, ಒಂಬತ್ತನೇ ಅಧ್ಯಾಯದಲ್ಲಿ ೧೯೮೫ ರಲ್ಲಿ ತೂಕ ಮತ್ತು ಅಳತೆ ಕಾಯ್ದೆ ಯ ಜಾರಿಗೆ ಹೀಗೆ ಎಲ್ಲ ವಿಷಯಗಳನ್ನು ಗ್ರಾಹಕರಿಗೆ ಉಪಯುಕ್ತವಾಗುಂತೆ ವಿವರಿಸಿದ್ದಾರೆ.[೨೫]

**೨.೨.೨೬ ಡಿ. ಪಿ. ವರ್ಸನಿ- "ಅವಶ್ಯವಾದ ಸಾಮಗ್ರಿಗಳ ಕಾಯ್ದೆ ೧೯೫೫"** ಈ ಒಂದು ಮಹತ್ತರವಾದ ಗ್ರಂಥವನ್ನು ಬರೆದಿದ್ದಾರೆ. ಈ ಒಂದು ಗ್ರಂಥ ಅಭಿವೃದ್ಧಿಯ ಬೆಳವಣಿಗೆ ಮತ್ತು ಸಾಮಾಜಿಕ ಲಾಭಗಳು ಶ್ರೀಮಂತ ಶಕ್ತಿದಾಯಕ ಹಾಗೂ ಸ್ವಾರ್ಥ ಜನರಿಗಷ್ಟೆ ಸಿಗದೆ ಜನಸಾಮಾನ್ಯರಿಗೆ ದೊರೆಯಬೇಕೆನ್ನುವ ಉದ್ದೇಶದಿಂದ ಬರೆದಿದ್ದಾಗಿ ಲೇಖಕರು ಕಳಕಳಿಯಿಂದ ಹೇಳಿದ್ದಾರೆ. ಈ

ಒಂದು ಪುಸ್ತಕ ಅವಶ್ಯಕ ವಸ್ತುಗಳಿಗೆ ಸಂಬಂಧಿಸಿದ ಕೇಂದ್ರ ಸರಕಾರ ಬಿಡುಗಡೆ ಮಾಡಿದ ಎಲ್ಲ ಕಾಯ್ದೆಗಳನ್ನು ವಿಸ್ತಾರವಾಗಿ ತಿಳಿಸಿಕೊಡುತ್ತದೆ. ಇದರಿಂದ ಗ್ರಾಹಕ ಹೇಗೆ ತನ್ನನ್ನು ತಾನು ರಕ್ಷಿಸಿಕೊಳ್ಳಬಹುದು ಎಂದು ತಿಳಿಸುತ್ತದೆ.[೨೬]

**೨.೨.೨೭ ಸುಧಾರಾಣಿ ಶ್ರೀವಾತ್ಸವರ** ಗ್ರಂಥ **"ಕಂಜುಮರಿಸಂ ಇನ್ ಕಮ್ಯೂನಿಕೇಶನ್ ಆಂಡ್ ಲಾ"** ವಿಷಯದಲ್ಲಿ ಗ್ರಾಹಕ ಸಂರಕ್ಷಣಾ ಅಧಿನಿಯಮ ೧೯೮೬ ರ ಮಾಹಿತಿ ಇದೆ. ಅಲ್ಲದೆ ಗ್ರಾಹಕ ರಕ್ಷಣಾ ಪರಿಷತ್ ಮತ್ತು ಗ್ರಾಹಕ ವಾಜ್ಯಗಳ ಪರಿಹಾರ ಏಜೆನ್ಸಿಗಳ ಮಾಹಿತಿ ಕೂಡ ಇದೆ. ಭಾರತದಲ್ಲಿ ಹಲವು ರಾಜ್ಯಗಳ ಗ್ರಾಹಕ ಸಂರಕ್ಷಣಾ ಕಾಯ್ದೆಯ ನಿಯಮಗಳನ್ನು ಒಳಗೊಂಡಿದೆ.[೨೭]

**೨.೨.೨೮ "ಕಂಜುಮರ್ಸ್ ಪ್ರೊಟೆಕ್ಷನ್"** ಎನ್ನುವ ಗ್ರಂಥವನ್ನು ಡಿ. ಹಿಮಾಚಲಮ್ ಸಂಗ್ರಹಿಸಿದ್ದಾರೆ. ಇದರಲ್ಲಿ ಬೇರೆ ಬೇರೆ ಲೇಖಕರು ಬರೆದ ೧೯ ಲೇಖನಗಳಿವೆ. ಈ ಎಲ್ಲ ಲೇಖನಗಳಲ್ಲಿ ಗ್ರಾಹಕರ ಶೋಷಣೆಯ ಕುರಿತು, ನಂತರ ಭಾರತದಲ್ಲಿ ಗ್ರಾಹಕತ್ವ ಏಕೆ ಬಲಿಷ್ಠವಾಗಿಲ್ಲ, ಸಾಮಾನ್ಯ ನಾಗರಿಕರ ಅಂಜುವ ಸ್ವಭಾವ, ಗ್ರಾಹಕರ ನಿರ್ಲಕ್ಷ, ಜನಸಂಖ್ಯೆ ಹೆಚ್ಚಳ, ಗ್ರಾಹಕನಿಗೆ ಅರಿವಿನ ಕೊರತೆ ಮುಂತಾದವುಗಳನ್ನು ವಿಶ್ಲೇಷಿಸಿದ್ದಾರೆ. ಗ್ರಾಹಕರ ಚಳುವಳಿಗಳಲ್ಲಿ ಹೊಸ ವಿಷಯಗಳಾದ ಪರಿಸರ ಮಾಲಿನ್ಯ, ಹೂಡಿಕೆದಾರರ ಸಂರಕ್ಷಣೆ, ವೈದ್ಯಕೀಯ ಮತ್ತು ಅಂತರಾಷ್ಟ್ರೀಯ ಮಾರುಕಟ್ಟೆಯ ವಿಷಯಗಳನ್ನು ತಿಳಿಸಿದ್ದಾರೆ. ಗ್ರಾಹಕತ್ವದ ಬೆಳವಣಿಗೆಯಲ್ಲಿ ಸಹಕಾರ ಸಂಘಗಳ ಪಾತ್ರವನ್ನು ಕೂಡ ವಿವರಿಸಲಾಗಿದೆ. ಗ್ರಾಹಕರ ಹಿತವನ್ನು ಕಾಪಾಡಲು ವಿಧಾನಗಳನ್ನು ಈ ಗ್ರಂಥದಲ್ಲಿ ನಮೂದಿಸಿದ್ದಾರೆ. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಸರಿಯಾಗಿ ಪರಿಣಾಮಕಾರಿಯಾಗಿ ಗ್ರಾಹಕನಿಗೆ ತಲುಪಲು ಸರ್ಕಾರ ಮತ್ತು ಪ್ರಸಾರ ಮಾಧ್ಯಮಗಳು ಗ್ರಾಹಕ ಚಳುವಳಿಗಳಲ್ಲಿ ಭಾಗವಹಿಸುವ ಸಲಹೆಯನ್ನು ಲೇಖಕರು ನೀಡಿದ್ದಾರೆ.[೨೮]

**೨.೨.೨೯ ಎಸ್.ಆಯ್.ಪೇರುಮಾಳ್,** ರಿಸರ್ಚ ಸ್ಕಾಲರ ಇನ್ ಮ್ಯಾನೇಜಮೆಂಟ ಭಾರತೀಯಾರ ಯುನಿರ್ವಸಿಟಿ ಕೊಯಮುತ್ತುರ, ಇವರ **"ಇಂಪ್ಯಾಕ್ಟ್ ಆಫ್ ಎಕನಾಮಿಕ ಗ್ಲೊಬಲಾಯಜೇಶನ್ ಆಂಡ್ ಕಂಜುಮರ್ಸ್ ಎಕ್ಸಪೇಕ್ಟೇಶನ್ ಇನ್ ಲಾಯಿಫ್ ಇನ್ಸುರೆನ್ಸ್"** ಒಂದು ಉಪಯುಕ್ತ ಲೇಖನ ಈ ಒಂದು ಲೇಖನದಲ್ಲಿ ಲೇಖಕರು ಸರ್ಕಾರಿ ವಿಮಾ ನಿಗಮದ ಗ್ರಾಹಕರು ಹಾಗೂ ಖಾಸಗಿ ವಿಮಾ ನಿಗಮದ ಗ್ರಾಹಕರಿಂದ ಸಂಗ್ರಹಿಸಿದ್ದ ಪ್ರಾಥಮಿಕ ಮಾಹಿತಿ ಆಧಾರದ ತುಲನಾತ್ಮಕ ಅಧ್ಯಯನ ಮಾಡಿದ್ದಾರೆ. ಅವರ ಈ ಸಂಶೋಧನಾ ಲೇಖನದಿಂದ ಸಂಶೋಧನೆಯ ವಿಧಾನ, ನಮೂನೆಯ

ಪ್ರಮಾಣ, ಪ್ರಮುಖ ಮಿತಿಗಳು ಹಾಗೂ ಮಾಹಿತಿ ವಿಶ್ಲೇಷಣಾ ವಿಧಾನದ ಕುರಿತು ಅರಿತುಕೊಳ್ಳಬಹುದು.[೨೯]

**೨.೨.೩೦ ಶ್ರೀ ಶಿ. ಕೆ. ಪಿ ಫಣೆಕರ್** ಇವರ ಜನೇವರಿ ೧೯೯೭ ರ ಪ್ರೀಯಂವದಾ ಪತ್ರಿಕೆಯಲ್ಲಿಯ ಲೇಖನ **"ಕಂಜುಮರ್ಸ್ ಪ್ರೋಟೆಕ್ಷನ್ ಆಕ್ಟ್ ೧೯೮೬"** ಸಂಶೋಧನೆಗೆ ಉಪಯುಕ್ತ ಲೇಖನ. ಈ ಲೇಖನದಲ್ಲಿ ಅವರು ಈ ಮಹತ್ವದ ಕಾನೂನು ಜಾರಿಗೆ ಬರುವ ಮೊದಲಿನ ಗ್ರಾಹಕ ಪರಿಸ್ಥಿತಿಯನ್ನು ವಿವರಿಸಿದ್ದಾರೆ. ೧೯೬೦ರ ನಂತರದ ಗ್ರಾಹಕ ಚಳುವಳಿ ಕುರಿತು ವಿವರಿಸಿದ್ದಾರೆ. ಈ ಕಾನೂನಿನ ಅಡಿಯಲ್ಲಿ ಗ್ರಾಹಕನ ತೊಂದರೆಗಳಿಗೆ ಪರಿಹಾರವಾಗಿ ತೆರೆಯಲ್ಪಟ್ಟ ಗ್ರಾಹಕ ಪರಿಷತ್ ಹಾಗೂ ಗ್ರಾಹಕ ಪರಿಹಾರ ಏಜೆನ್ಸಿಗಳ ಉಪಯೋಗಗಳ ಕುರಿತು ನಮೂದಿಸಿದ್ದಾರೆ.[೩೦]

**೨.೨.೩೧ ಶ್ರೀ ಎಸ್. ಎ. ಶೇರ್ಲೆಕರರ** ಉಪಯುಕ್ತ ಗ್ರಂಥ **"ಮಾರ್ಕೆಟಂಗ್ ಮ್ಯಾನೇಜಮೆಂಟ್"** ಒಂದು ಅಧ್ಯಾಯ **"ಗ್ರಾಹಕ ಸಂರಕ್ಷಣಾ ಚಳುವಳಿಯಲ್ಲಿ"** ಗ್ರಾಹಕ ಚಳುವಳಿಯ ಹುಟ್ಟು ಬೆಳವಣಿಗೆ, ಗ್ರಾಹಕ ಸಂರಕ್ಷಣೆ, ಗ್ರಾಹಕ ಸಂರಕ್ಷಣೆಯ ಅವಶ್ಯಕತೆ, ಕಂಜುಮರ್ಸ್ ಬಿಲ್ ಆಫ್ ರೈಟ್ಸ್ ಗ್ರಾಹಕ ಸಂರಕ್ಷಣೆ ಏಕೆ ಬೇಕು, ಗ್ರಾಹಕ ಸಂರಕ್ಷಣೆಯನ್ನು ಗ್ರಾಹಕರಿಗೆ ಹೇಗೆ ಒದಗಿಸಬಹುದು, ಮುಂತಾದ ವಿಷಯಗಳ ಕುರಿತು ಮಾಹಿತಿ ಇದೆ. ೧೯೬೨ರಲ್ಲಿ ಅಮೇರಿಕಾದ ಅಧ್ಯಕ್ಷರಾದ ಜಾನ್.ಎಫ್. ಕೆನಡಿ ಜಾರಿಗೆ ತಂದ ಗ್ರಾಹಕ ಹಕ್ಕುಗಳ ಸವಿವರಣೆಯನ್ನು ಈ ಅಧ್ಯಾಯ ಒಳಗೊಂಡಿದೆ. ಗ್ರಾಹಕ ಸಂರಕ್ಷಣೆ ಕಾಯ್ದೆ ಯ ಅನ್ವಯ ಸ್ಥಾಪಿಸಲ್ಪಡುವ ಗ್ರಾಹಕ ಪರಿಹಾರ ಏಜೆನ್ಸಿಗಳ ಕುರಿತು ಮಾಹಿತಿ ಇದೆ. ವೇದಿಕೆಗಳನ್ನು ಸ್ಥಾಪಿಸುವ ವಿಧಾನ, ಅಲ್ಲಿಯ ಕಾರ್ಯದ ವಿಧಾನ, ಅಧ್ಯಕ್ಷರ ಹಾಗೂ ಸದಸ್ಯರ ನೇಮಕಾತಿ, ದೂರುಗಳನ್ನು ಸ್ವೀಕರಿಸುವ ಪದ್ಧತಿ, ಮುಂತಾದ ಸಂಶೋಧನೆಗೆ ಸಹಾಯಕವಾಗುವ ಮಾಹಿತಿಯೊಡನೆ ಈ ಅಧ್ಯಾಯ ಕೊನೆಗೊಂಡಿದೆ.[೩೧]

**೨.೨.೩೨ ಹೈಗ್ರಿವ ರಾಯರ** ಲೇಖನ **"ಕವೇಟ್ ಎಂಪ್ಟರ್: ದ ಕನಸ್ಟ್ರಕ್ಷನ್ ಆಫ್ ನಾನ್ – ಪ್ರಾಫಿಟ್ ಕಂಜುಮರ್ಸ್ ವಾಚ್ ಡಾಗ ಆಂಡ ಆರ್ಗನೈಜೇಶನ್"** ದಲ್ಲಿ ಗ್ರಾಹಕ ಸಂಘ ಸಂಸ್ಥೆಗಳು ಸಂಸ್ಕೃತಿಕ ಉದ್ದೇಶದಿಂದ ಹೇಗೆ ಸ್ಥಾಪಿಸಲ್ಪಟ್ಟವು ಎನ್ನುವುದುನ್ನು ವಿವರಿಸುತ್ತದೆ. ರಾವ್ ತಮ್ಮ ಲೇಖನದಲ್ಲಿ ಈ ಗ್ರಾಹಕ ಸಂಘ ಸಂಸ್ಥೆಗಳು ತಮ್ಮ ಕಾರ್ಯಗಳಿಂದ ಅಮೇರಿಕಾದ ವ್ಯಾಪಾರಿ ಜನರನ್ನು ಗ್ರಾಹಕರ ವಿಷಯಗಳಿಗಾಗಿಯೇ ವಿಶೇಷ ಶಾಖೆಗಳನ್ನು ತರೆಯಲು ಹೇಗೆ ಪ್ರೇರೆಪಿಸುತ್ತವೆ ಎಂದು ವಿವರಿಸಿದ್ದಾರೆ. ಗ್ರಾಹಕರ ಸಂರಕ್ಷಣೆಗೆ, ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಗ್ರಾಹಕ ಸಂಘ

ಸಂಸ್ಥೆಗಳು ಉತ್ತರವಾಗಿ ಬೆಳೆದವು ಎನ್ನುತ್ತಾರೆ. ಬೇರೆ ಬೇರೆ ದೇಶಗಳಲ್ಲಿ ಸಂಘ ಸಂಸ್ಥೆಗಳ ಹುಟ್ಟಿಗೆ ಬೇರೆ ಬೇರೆ ಉದ್ದೇಶಗಳಿದ್ದವು ಎನ್ನುತ್ತಾರೆ.[೩೨]

**೨.೨.೩೩ ಪೌಲ ಜೌಧರಿಯವರ** ಲೇಖನ **"ವ್ಯಾಲ್ಯುವೆಂಟರಿಸಂ ವೆಲಫೇರ್ ಎಂಡ್ ಡೇವಲಪಮೆಂಟ"**ದಲ್ಲಿ, ಸಬಲೀಕರಣದಲ್ಲಿ ಜನರ ಭಾಗವಹಿಸುವಿಕೆ, ಸಮಾಜದ ಕಲ್ಯಾಣ ಅಭಿವೃದ್ಧಿ ಮುಂತಾದವುಗಳಲ್ಲಿ ಚಳುವಳಿಕಾರರ ಪಾತ್ರವನ್ನು ಕುತೂಹಲಕಾರಿಯಾಗಿ ಚಿತ್ರಿಸಿದ್ದಾರೆ. ಗ್ರಾಮೀಣ ಬಡತನ, ಅಧಿಕಾರಶಾಯಿ ಶೋಷಣೆ, ಕಂದಾಚಾರ ಮತ್ತು ಜನರ ಅಸಹಾಯಕತೆ ಇವುಗಳ ಜೊತೆಗೆ ಶಾಸನಗಳ ಅಧಿಕಾರದ ಹಾಗೂ ನ್ಯಾಯಾಂಗ ಸಂಸ್ಥೆಗಳ ಕೊರತೆ ಮುಂತಾದವುಗಳಿಂದ ಮಧ್ಯಮವರ್ಗದ ಯುವಕರು ಹಾಗೂ ಯುವತಿಯರು ಹಲವಾರು ಕ್ಷೇತ್ರಗಳಲ್ಲಿ ಚಳುವಳಿಯಲ್ಲಿ ದುಮುಕುತ್ತಾರೆ. ಅವರು ಜನರ ಕಣ್ಣುಗಳಾಗಿ ಕೆಲಸ ಮಾಡುತ್ತಾರೆ, ಆದರೆ ಅವರು ಹಮ್ಮಿಕೊಳ್ಳುವ ಕೆಲಸದ ಕ್ಷೇತ್ರ ಚಿಕ್ಕದು ಎಂದಿದ್ದಾರೆ. ಲೇಖಕರು ಸರ್ಕಾರ ಸ್ವಯಂ ಸಂಘ ಸಂಸ್ಥೆಗಳು ಹಾಗೂ ಜನರು ಒಟ್ಟಾಗಿರಬೇಕು ಎಂದು ತಮ್ಮ ಲೇಖನ ಮುಗಿಸಿದ್ದಾರೆ.[೩೩]

**೨.೨.೩೪ ಶಕುಂತಲಾ ಬಲರಾಮನ್** ಮತ್ತು **ವಿಸಾ ರವೀಂದ್ರನ್** ತಮ್ಮ ಲೇಖನ **"ಚೆಂಜಿಂಗ ಪೇಸ್ ಆಪ್ ವ್ಯಾಲ್ಯುವಂಟರಿಸಂ",**ನಲ್ಲಿ ಎನ್.ಜಿ.ಓ ಗಳ ಅವಶ್ಯಕತೆ ಹಾಗೂ ಅವುಗಳ ಪರಿಶೀಲನೆಯ ಕುರಿತು ವಿವರಿಸಿದ್ದಾರೆ. ಈ ಎನ್.ಜಿ.ಓಗಳ ಕಾರ್ಯಗಳಲ್ಲಿ ಪಾರದರ್ಶಕತೆ ಬೇಕು ಹಾಗೂ ಅವುಗಳ ಲೆಕ್ಕ ತಪಾಸಣೆಯನ್ನು ಕೈಗೊಳ್ಳುವ ಕಾರ್ಯ ಪ್ರಾರಂಭವಾಗಬೇಕು ಎಂದಿದ್ದಾರೆ. ಲೇಖಕರ ಹೇಳಿಕೆಯಲ್ಲಿ ಸತ್ಯವಿದೆ. ಹಲವಾರು ಕೋಟಿ ರೂ. ಹಣವನ್ನು ವ್ಯಯಿಸುವ ಈ ಸಂಸ್ಥೆಗಳ ಲೆಕ್ಕ ಪತ್ರವನ್ನು ಪ್ರತಿ ವರ್ಷ ತಪಾಸಣೆಗೊಳಪಡಿಸುವುದು ಅವಶ್ಯಕ.[೩೪]

**೨.೨.೩೫ ಲತಾ ಶೆಟ್ಟಿ**ಯವರ **"ಪ್ರೊಫೇಶನಲಾಯಜೇಶನ್ ಆಫ್ ಸೋಸಿಯಲ್ ವರ್ಕ ಇನ್ ಯುನೈಟೆಡ ಸ್ಟೇಟ್ಸ್ ಆಂಡ ಇಂಡಿಯಾ",** ಲೇಖನದಲ್ಲಿ. ಭಾರತದ ಕೆಲವೇ ಸ್ವಯಂ ಸಂಘ ಸಂಸ್ಥೆಗಳು ವೃತ್ತಿಪರವನ್ನು ಅಳವಡಿಕೊಳ್ಳಲು ಸಫಲವಾಗಿವೆ. ಬಹಳಷ್ಟು ಸಂಸ್ಥೆಗಳು ವೃತ್ತಿಪರತೆ ಅಥವಾ ಸಂಘದ ಲಕ್ಷಣಗಳನ್ನು ಹೊಂದಿಲ್ಲ. ಅವು ಮುಂದುವರೆಯಲು ಮತ್ತು ತಮ್ಮ ಕ್ಷಮತೆ ಹೆಚ್ಚಿಸಿಕೊಳ್ಳಲು ಇದು ಅವಶ್ಯ ಎಂದಿದ್ದಾರೆ.[೩೫]

**೨.೨.೩೬ ಶ್ರೀ ಎಸ. ಎಸ್. ಗುಲ್ಸನ್** ತಮ್ಮ ಗ್ರಂಥ **"ಕಂಜುಮರ್ಸ್ ಪ್ರೋಟೆಕ್ಸನ್ ಆಂಡ ಸ್ಯಾಟಿಸಪ್ಯಾಕ್ಷನ್"** ನಲ್ಲಿ ಭಾರತದ ಸ್ವಯಂ ಸಂಘ ಸಂಸ್ಥೆಗಳ ಕಾರ್ಯಕ್ಷಮತೆಗಳಿಗೆ ಒತ್ತು ಕೊಟ್ಟು ಗ್ರಾಹಕ ಸಂಸ್ಥೆಗಳ

ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಸ್ವಯಂ ಸಂಘ ಸಂಸ್ಥೆಗಳು, ವಾಣಿಜ್ಯ ಸಂಸ್ಥೆಗಳು ಮತ್ತು ಗ್ರಾಹಕರು ಗ್ರಾಹಕ ಚಳುವಳಿಯ ಯಶಸ್ವಿಗೆ ಪ್ರಮುಖರು ಎಂದಿದ್ದಾರೆ. ಭಾರತದ ವಾಣಿಜ್ಯ ವ್ಯಾಪಾರ, ಗ್ರಾಹಕತ್ವದ ಪರವಾಗಿದೆ ಎಂದು ನಂಬೋಣ ಎಂದಿದ್ದಾರೆ. ಭಾರತದ ಗ್ರಾಹಕ ಜಡತ್ವ ತೊರೆದು ಎಚ್ಚರಗೊಳ್ಳುತ್ತಿದ್ದಾನೆ ಎಂದು ಆಶಿಸೋಣ ಎಂದಿದ್ದಾರೆ.[೩೬]

**೨.೨.೩೭ ಶ್ರೀ ಎಚ. ಎನ್ ಗಿರಿ**ಅವರ ಅಲ್ಹಾಬಾದ ವಿಶ್ವವಿದ್ಯಾಲಯದಲ್ಲಿ ಡಿ.ಫಿಲಗಾಗಿ ಸಲ್ಲಿಸಿದ ಮಹಾ ಪ್ರಬಂಧ ಆಧಾರ ಗ್ರಂಥ **"ಕಂಜುಮರ್ಸ್ ಕ್ರೈಮ್ ಆಂಡ್ ಲೇಕ್"** ಇದರಲ್ಲಿ ಗ್ರಾಹಕ ಹಿತಾಸಕ್ತಿ, ಗ್ರಾಹಕರ ಸಂಘಗಳು ಮತ್ತು ಗ್ರಾಹಕರ ಸಂಘ ಸಂಸ್ಥೆಗಳು ಹೇಗೆ ಕೆಲಸ ಮಾಡುತ್ತವೆ ಎಂದು ವಿಶ್ಲೇಷಿಸಿದ್ದಾರೆ. ಇವರ ಈ ಒಂದು ಸಂಶೋಧನಾ ಗ್ರಂಥದಲ್ಲಿ ಗ್ರಾಹಕರ ಪೋಷಕಾಂಶದ ಹಾಗೂ ಆರೋಗ್ಯದ ಕುರಿತು ಹಾಗೂ ಸಂರಕ್ಷಣೆಯ ಕುರಿತು ವಿಶ್ಲೇಷಿಸಿದ್ದಾರೆ. ಗ್ರಾಹಕ ಸ್ವಯಂ ಸಂಘಗಳು ಈ ವಿಷಯಗಳ ಕಡೆಗೆ ಗಮನ ಹರಿಸಬೇಕು ಎಂದಿದ್ದಾರೆ. ಗ್ರಾಹಕರ ವಿರುದ್ಧ ಆಗುವ ಈ ಅಪರಾಧಗಳು ಹಲವು ಸಲ ಸಾಮಾಜಿಕ ಆರ್ಥಿಕ ಅಪರಾಧಗಳಾಗಿ ಪರಿವರ್ತನೆಗೊಳ್ಳಬಹುದಾದ ಸಾದ್ಯತೆಗಳಿವೆ. ಈ ಎಲ್ಲ ಅಪರಾಧಗಳು ಸಂಭವಿಸುವುದು ಮದ್ಯಮ ವರ್ಗದ ಹಾಗೂ ಉನ್ನತ ವರ್ಗದ ಜನರಿಂದ. ಭಾರತದ ಇನ್ನೊಂದು ಮಹತ್ವದ ಗ್ರಾಹಕರ ಸಮಸ್ಯೆ ಪೋಷಕಾಂಶರಹಿತ ಆಹಾರ ಅವುಗಳ ಕಾರಣಗಳನ್ನು ವಿವರಿಸಿದ್ದಾರೆ. ಈ ಎಲ್ಲ ಶೋಷಣೆಗಳನ್ನು ಎದುರಿಸಲು ಸಂಶೋಧಕರು ಪರಿಹಾರಗಳನ್ನೂ ಸೂಚಿಸಿದ್ದಾರೆ. ಅಪರಾಧಿಗಳ ಹೆಸರುಗಳನ್ನು ಪ್ರಕಟಿಸಬೇಕು ಹಾಗೂ ಅವರಿಗೆ ಕೊಡುವ ಶಿಕ್ಷೆ ಸಮಾಜದಲ್ಲಿ ನಡೆಯುವ ಅಪರಾಧಗಳಿಗೆ ಕಡಿವಾಣ ಹಾಕಬಹುದು ಎಂದಿದ್ದಾರೆ. ಸಂಶೋಧಕರ ಪ್ರಕಾರ ಹಲವಾರು ಶಾಸನಗಳು ಗ್ರಾಹಕರ ಸಂರಕ್ಷಣೆಗೆ ಸಹಾಯಕಾರಿಯಾಗಿದ್ದರೂ ಅವುಗಳ ಸರಿಯಾದ ಉಪಯೋಗ ಇಡಿ ದೇಶದ ತುಂಬ ಹರಡಬೇಕು ಎಂದಿದ್ದಾರೆ.[೩೭]

**೨.೨.೩೮ ಮೋಹಿನಿ ಶೇಠ** ಮತ್ತು **ಪ್ರೇಮಾವತಿ ಸೀತಾರಾಮರ** ಗ್ರಂಥ **"ಕಂಜುಮರಿಸಂ ಕನ್ಸೆಪ್ಟ",** ಇದರಲ್ಲಿ ಗ್ರಾಹತ್ವದ ಮಹತ್ವದ ಬೆಳೆವಣಿಗೆಗಳನ್ನು ಐದು ವಿಭಾಗಗಳಲ್ಲಿ ವಿವರಿಸಿದ್ದಾರೆ.ಮೊದಲನೇ ಭಾಗ ಗ್ರಾಹಕತ್ವದ ಪೀಠಿಕೆಯನ್ನು ಒಳಗೊಂಡಿದೆ. ಈ ಭಾಗದಲ್ಲಿ ಗ್ರಾಹಕರು ಹೇಗೆ ಶೋಷಣೆಗೆ ಒಳಗಾಗುತ್ತಾರೆ ಎನ್ನುವುದನ್ನು ವಿವರಿಸಿದ್ದಾರೆ. ಗ್ರಾಹಕ ಚಳುವಳಿಯ ತತ್ವಜ್ಞಾನ ಹಾಗೂ ಉದ್ದೇಶಗಳನ್ನು ವಿವರಿಸಿದ್ದಾರೆ. ಗ್ರಾಹಕನ ಚಳುವಳಿ ತೀವ್ರವಾಗಲು ಕಾರಣಗಳನ್ನು ವಿವರಿಸಿದ್ದಾರೆ. ಎರಡನೇ ಭಾಗದಲ್ಲಿ ಗ್ರಾಹಕ ಚಳುವಳಿಯಲ್ಲಿ ಗ್ರಾಹಕರ ಶಿಕ್ಷಣದ ಮಹತ್ವವನ್ನು ವಿವರಿಸಿದ್ದಾರೆ.

ಗ್ರಾಹಕತ್ವದ ಅರಿವಿಗೆ ಗ್ರಾಹಕರ ಹಕ್ಕುಗಳು ಹಾಗೂ ಕರ್ತವ್ಯಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ ಎಂದಿದ್ದಾರೆ. ವಸ್ತುಗಳನ್ನು ಪರೀಕ್ಷಿಸುವಾಗ ನಾವು ಖರೀದಿಸುವ ಹಂತದಲ್ಲಿ ಮಾದಕ ವಸ್ತು ಔಷಧಿ, ಆಹಾರ ಕಲಬೆರಕೆ, ಆಹಾರವನ್ನು ಆರಿಸುವ ರೀತಿ, ಖಚಿತತೆ, ಮಾರಾಟದ ನಂತರದ ಸೇವೆ, ಉಳಿತಾಯ, ವೇಳೆ ಮಹತ್ವ ಮುಂತಾದವುಗಳ ಕುರಿತು ವಿವರಿಸಿದ್ದಾರೆ. ಮೂರನೇ ಭಾಗದಲ್ಲಿ ಮಾರುಕಟ್ಟೆಯ ಕುರಿತು ವಿವರಿಸಿದ್ದಾರೆ. ಗ್ರಾಹಕರಿಗೆ ಏನು ಎಲ್ಲಿ ಯಾವಾಗ ಎಷ್ಟು ಖರೀದಿಸಬೇಕು ಎನ್ನುವುದಕ್ಕೆ ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ.[೩೮]

**೨.೨.೩೯ ಶಿರಾಜುದ್ದೀನ ಸಿದ್ಧಕಿ** ಮತ್ತು ಸಿ. **ಆರ್ ಶರ್ಮಾ**ರ ಸಂಶೋಧನ ಗ್ರಂಥ **"ಆರ್ಗನೈಜೇಶನ್ ಆಂಡ್ ಫಾರ್ ಕಂಜುಮರ್ಸ ಪ್ರೊಟೆಕ್ಷನ್ – ಕಂಜುಮರ್ಸ ಪ್ರಾಬ್ಲೆಮ್ಸ ಆಂಡ್ ರಿಡ್ರೇಸಲ್ ವೇಸ"** ಅವರ ಪ್ರಕಾರ ಶೋಷಣೆಯ ಅರಿವು ಬಡವರಲ್ಲಿ ಹೆಚ್ಚು. ಆದರೆ ಅವರಿಗೆ ಅವುಗಳ ವಿರುದ್ದ ಧ್ವನಿ ಎತ್ತಲು ದಾರಿ ಗೊತ್ತಿಲ್ಲ. ಈ ಜನರ ಸಲುವಾಗಿ ಇರುವ ಸಂಘಗಳು ಇವರಿಗೆ ಸಹಾಯ ಮಾಡಿದರೆ ಅವರು ಉತ್ಸಾಹದಿಂದ ತಮ್ಮ ಹಕ್ಕುಗಳಿಗೆ ಕೆಲಸ ಮಾಡುತ್ತಾರೆ. ಮಧ್ಯಮ ವರ್ಗದ ಜನರು ತಮ್ಮ ವೇಳೆ ಮತ್ತು ಹಣವನ್ನು ಗ್ರಾಹಕ ಶೋಷಣೆಗೆ ವಿರೋಧ ತೋರಿಸಲು ಬಳಸುವುದಿಲ್ಲ. ಸಂಶೋಧಕರ ಈ ವಿಷಯಕ್ಕೆ ಹಲವಾರು ಸಂಶಯಗಳನ್ನು ವ್ಯಕ್ತ ಪಡಿಸಿದ್ದಾರೆ. ಶ್ರೀಮಂತರು ಇಂಥಹ ಶೋಷಣೆಗೆ ಒಳಗಾಗುವುದಿಲ್ಲ. ಸಂಶೋಧಕರು ಗ್ರಾಹಕರ ಸಮಸ್ಯೆಗಳಿಗೆ ನಾಲ್ಕು ಸಲಹೆಗಳನ್ನು ಕೊಟ್ಟಿದ್ದಾರೆ ಅವು–

೧) ಗ್ರಾಹಕ ಸಂಘ ಸಂಸ್ಥೆಗಳು ಕಾನೂನಿನ ಸಹಾಯ ಪಡೆಯಬೇಕು.

೨) ಗ್ರಾಹಕರಿಗೆ ಶಿಕ್ಷಣ ಕೊಡಬೇಕು.

೩) ಶಾಸನಗಳ ಹಾಗೂ ಪ್ರತಿಬಂಧಕ ಏಜೆನ್ಸಿಗಳು

೪) ಸ್ವಯಂ ಪ್ರತಿಬಂಧಕಗಳನ್ನು ಉದ್ಯಮಿಗಳು ಪಾಲಿಸಬೇಕು.[೩೯]

**೨.೨.೪೦ ಆಂಡ್ರೆ ರೇಬೆಲ್ಲೊ** ರವರ **"ಸೊಸೈಟಲ್ ರಿಸ್ಪೊನ್ಸ ಟು ಕಂಜುಮರ್ಸ ಮುವ್‌ಮೆಂಟ ಆಂಡ್ ಗವರ್ನಮೆಂಟ್"** ಈ ಗ್ರಂಥದಲ್ಲಿ ಸಂಸ್ಥೆಗಳ ಉಲ್ಲೇಖವಿದೆ. ಗ್ರಾಹಕ ಸಂರಕ್ಷಣೆಯ ಕಾಯ್ದೆ ೧೯೮೬ ಅಡಿಯಲ್ಲಿ ಗ್ರಾಹಕ ಸಂರಕ್ಷಣಾ ಪರಿಷತ್‌ನ್ನು ಸ್ಥಾಪಿಸಿದೆ. ಸರಕಾರಗಳ ಕೆಲಸ ಕಾರ್ಯಗಳು ಗ್ರಾಹಕ ಸಂರಕ್ಷಣಾ ನಿಟ್ಟಿನಲ್ಲಿ ಏನು ಸಾಧಿಸಲಾಗದು. ಅವರ ಪ್ರಕಾರ ಈ ವೇದಿಕೆಗಳು ಶಾಸನಬದ್ದ ಕಾಯಂ ಆಗಿ ಸ್ಥಾಪಿಸಲ್ಪಟ್ಟರೂ ಕೇವಲ ಹಾಳೆಗಳ ಮೇಲೆ ಆದರೆ ವಾಸ್ತವಿಕವಾಗಿ ಈ ವೇದಿಕೆಗಳ ಒಂದೇ ಒಂದು ಸಲವಾದರೂ ಪರಸ್ಪರ ಕೆಲಸಗಳನ್ನು ವಿನಿಮಯ ಮಾಡಿಕೊಂಡಿಲ್ಲ. ಕೆಲವು ಅವಶ್ಯಕ ಸೇವೆಗಳನ್ನು ಪೂರೈಸಲು ಸರ್ಕಾರಗಳೆ ಕಾರ್ಯಮಾಡುತ್ತವೆ. ಆದ್ದರಿಂದ ಸರ್ಕಾರದ ಸೇವೆಯನ್ನು

ಗ್ರಾಹಕರಿಗೆ ಸರಿಯಾದ ವೇಳೆಗೆ ತಲುಪಿಸಬೇಕು ಹಾಗೂ ಗುಣಮಟ್ಟದ ಸೇವೆಯನ್ನು ಯಾವ ಬೆಲೆ ಕೊಡದೆ ಗ್ರಾಹಕರು ಅನುಭವಿಸುತ್ತಾರೆ. ಆದರೆ ಗ್ರಾಹಕನಿಗೆ ಇದರಿಂದ ಹೆಚ್ಚಿಗೆ ಏನೂ ಸಹಾಯ ಸಿಗದೆ ಸೇವೆಯ ಗುಣಮಟ್ಟ ಕೆಡುತ್ತ ಹೋಗುತ್ತದೆ. ೧೯೮೬ ಗ್ರಾಹಕ ಸಂರಕ್ಷಣೆ ಕಾಯ್ದೆ ಜಾರಿಗೆ ಬಂದ ಮೇಲೂ ಸರ್ಕಾರದ ನಿರ್ಲಕ್ಷ ಮುಂದುವರೆದಿದೆ. ಗ್ರಾಹಕರಿಗೆ ಅವರ ಚಳುವಳಿಕಾರರೆ ಪ್ರೇರಣೆ ಎನ್ನುವದನ್ನು ಕೊನೆಯ ಭಾಗದಲ್ಲಿ ವಿವರಿಸಿದ್ದಾರೆ. ವ್ಯಾಪಾರಿಗಳ ಹಾಗೂ ಅಧಿಕಾರ ಶಾಹಿಗಳ ವಿರುದ್ಧ ಧ್ವನಿಯಾಗಿ ಗ್ರಾಹಕರ ಸಂಸ್ಥೆಗಳು ಕೆಲಸ ಮಾಡಬೇಕೆಂದು ಲೇಖಕರು ಸಲಹೆ ಕೊಟ್ಟಿದ್ದಾರೆ. ಎರಡನೇ ಗ್ರಂಥ "ಸೋಸಿಯೇಟಲ್ ರಿಸ್ಪಾನ್ಸ ಟು ಕಂಜುಮರ್ಸ ರಿಸ್ಪಾನ್ಸ" ನಲ್ಲಿ ಲೇಖಕರು ವ್ಯಾಪಾರಿಗಳು ಹಾಗೂ ಉದ್ದಿಮೆದಾರರು ಎಚ್ಚರಗೊಳ್ಳುವ ಅಗತ್ಯವನ್ನು ಪ್ರತಿಪಾದಿಸಿದ್ದಾರೆ. ಗ್ರಾಹಕರ ಹಿತರಕ್ಷಣೆಗೆ ಸ್ವಯಂ ಪ್ರತಿಬಂಧಗಳನ್ನು ಹಾಕಿಕೊಳ್ಳುತ್ತಿವೆ ಎಂದಿದ್ದಾರೆ.[೪೦]

**೨.೨.೪೧ ಪ್ರೀತಿ ಶಹಾ** ಬರೆದ **"ಎಮರ್ಜನ್ಸಸ್ ಆಂಡ ಫಾರ್ಮೆಶನ್ ಆಫ್ ಕಂಜುಮರ್ಸ ಗ್ರುಪ್ಸ"** ಈ ಗ್ರಂಥದಲ್ಲಿ ೩೦ ಗ್ರಾಹಕ ಸಂಘ ಸಂಸ್ಥೆಗಳು, ಇತರ ಗ್ರಾಹಕ ಸಂಬಂಧಿ ಸಂಘಗಳು, ೫ ಗ್ರಾಹಕ ಸಂಘಗಳು, ಫೆಡರೇಶನ್ಸ್ ಜರ್ಮನಿಯ ಒಂದು ಪೌಂಡೇಶನ್ ಕುರಿತು ಮಾಹಿತಿ ಇದೆ. ೩೦ ಗ್ರಾಹಕ ಸಂಘ ಸಂಸ್ಥೆಗಳಲ್ಲಿ ಕರ್ನಾಟಕದ ಬೆಂಗಳೂರು ಕೆ.ಸಿ.ಎಸ್.ಎಸ್ ಹಾಗೂ ಉಡಪಿಯ ಗ್ರಾಹಕ ವೇದಿಕೆಯ ಕುರಿತು ಪ್ರಾಸ್ತಾವನೆ ಕೂಡ ಇದೆ. ನಾಲ್ಕನೇ ದಶಕದಲ್ಲಿ ೧೯೮೬ ಗ್ರಾಹಕ ಸಂರಕ್ಷಣ ಕಾನೂನು ಜಾರಿಗೆ ಬಂದ ವರ್ಷ. ಈ ಕಾನೂನು ಗ್ರಾಹಕ ಚಳುವಳಿಯ ಒಂದು ಮೈಲುಗಲ್ಲು ಎಂದು ವರ್ಣಿಸುತ್ತಾರೆ. ಈ ಕಾಲದಲ್ಲಿ ಹಲವಾರು ಗ್ರಾಹಕ ಸಂರಕ್ಷಣ ಸಂಘಗಳು ಸ್ಥಾಪಿಸಲ್ಪಟ್ಟವು. ಗ್ರಂಥದ ಕೊನೆಗೆ ಗ್ರಾಹಕ ಸಂರಕ್ಷಣೆಯ ಚಳುವಳಿಯ ಅಂತರರಾಷ್ಟ್ರಿಯ ಸ್ಥಳದಲ್ಲಿ ಬೆಳವಣಿಗೆಯನ್ನು ವಿವರಿಸಲಾಗಿದೆ. ಗ್ರಾಹಕ ಸಂಘ ಸಂಸ್ಥೆಗಳು, ಸೆಂಟ್ರಲ್ ಎಜೆನ್ಸಿ ಹಾಗೂ ರಾಜ್ಯ ಮಟ್ಟದ ಫೇಡರೇಶನ್‌ಗಳ ಮಹತ್ವದ ಪಾತ್ರವನ್ನು ವಿವರಿಸಲಾಗಿದೆ. ಜರ್ಮನದ ಫ್ರೇಡ್ರಿಚ್ ನವ್‌ಮ್ಯಾನ್ ಫೌಂಡೇಶನ್ ಇನ್ ಕಂಜುಮರ್ಸ ಪ್ರೋಟೆಕ್ಸನ್ ಮುವಮೆಂಟದ ಕುರಿತು ವಿವರಿಸಲಾಗಿದೆ.[೪೧]

**೨.೨.೪೨ ಡಾ. ಕೆ ಕರುಣಾಕರನ್** ಗ್ರಂಥ **"ಮಾರ್ಕೆಟಿಂಗ್ ಮ್ಯಾನೆಜಮೆಂಟ್‌ನ"** ೧೮ನೇ ಅಧ್ಯಾಯವು ಗ್ರಾಹಕವಾದವನ್ನು ಒಳಗೊಂಡಿದೆ. ಮೊದಲನೆಯ ಪರಿವಿಡಿಯಲ್ಲಿ ಒಂದು ದಾವೆಯನ್ನು ವಿವರಿಸಲಾಗಿದೆ. ನಂತರ ಗ್ರಾಹಕತ್ವದ ಅರ್ಥವನ್ನು ಹಾಗೂ ವ್ಯಾಖ್ಯೆಯನ್ನು ಕೊಡಲಾಗಿದೆ. ಮುಂದಿನ ಭಾಗದಲ್ಲಿ ಭಾರತದಲ್ಲಿ ಗ್ರಾಹಕ ಚಳುವಳಿ, ಕುರಿತು ವಿವರಿಸಲಾಗಿದೆ. ಮುಂದಿನ ಪರಿವಿಡಿಯಲ್ಲಿ ಭಾರತದ ಗ್ರಾಹಕರ ಸಮಸ್ಯೆಗಳನ್ನು ವಿವರಿಸಲಾಗಿದೆ. ಗ್ರಾಹಕರ ಹಿತರಕ್ಷಣೆಯಲ್ಲಿ ಸರ್ಕಾರದ

ಪಾತ್ರವನ್ನು ಸರ್ಕಾರದ ಹಲವಾರು ಕಾನೂನುಗಳನ್ನು ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಗ್ರಾಹಕರ ಕುರಿತು ಸಂಶೋಧನೆ ಕೈಗೊಳ್ಳಲು ಬೇಕಾಗುವ ಮಾಹಿತಿಗೆ ಒಂದು ಉತ್ತಮ ಗ್ರಂಥವಾಗಿದೆ.[೪೨]

ಹೀಗೆ ಒಟ್ಟು ೪೨ ವಿವಿಧ ಸಾಹಿತ್ಯದ ಅವಲೋಕನ ಮಾಡಿ ವಿಮರ್ಶಿಸಲಾಗಿದೆ. ಇವುಗಳಲ್ಲಿ ಮೂರು ಸಂಶೋಧಕರ ಅಧ್ಯಯನಗಳನ್ನು ಅವಲೋಕಿಸಲಾಗಿದೆ. ಈ ಮೂರು ಪ್ರಬಂಧಗಳ ಪೈಕಿ ಎರಡು ಸಂಶೋಧನೆಗಳು ಗ್ರಾಹಕರ ಸಂರಕ್ಷಣೆಗೆ ಹೆಚ್ಚು ಒತ್ತು ನೀಡಿದರೆ, ಕೇವಲ ಒಂದು ಅಧ್ಯಯನ ಗ್ರಾಹಕ ವೇದಿಕೆ ಹಾಗೂ ಬೇರೆ ನ್ಯಾಯಾಲಯಗಳ ತುಲನಾತ್ಮಕ ಅಧ್ಯಯನ ಒಳಗೊಂಡಿದೆ. ಉಳಿದ ೩೮ ಅವಲೋಕನಗಳು, ವಿವಿಧ ಲೇಖಕರ ಗ್ರಾಹಕ ಸಂರಕ್ಷಣೆಗೆ ಸಂಬಂಧಿಸಿದ ವಿವಿಧ ಗ್ರಂಥಗಳು, ಲೇಖನಗಳನ್ನು ಒಳಗೊಂಡಿವೆ. ಈ ಅಧ್ಯಾಯದ ಅವಲೋಕನದಿಂದ ಕಂಡು ಬರುವುದೇನೆಂದರೆ, ಕರ್ನಾಟಕದಲ್ಲಿ ಅಷ್ಟೆ ಅಲ್ಲ, ಇಡೀ ಭಾರತದಲ್ಲಿ ಗ್ರಾಹಕ ವೇದಿಕೆಗಳ ಕಾರ್ಯ ನಿರ್ವಹಣೆಯ ವಿಶ್ಲೇಷಣೆಯಾಗಲಿ ಕಾರ್ಯಗುಣಮಟ್ಟದ ನಿಷ್ಕರ್ಶೆಯಾಗಲಿ, ಇಲ್ಲಿಯವರೆಗೆ ಆಗಿಲ್ಲ. ಹಲವು ಸಂಶೋಧಕರು ಗ್ರಾಹಕ ಸಂರಕ್ಷಣೆಯ ಕುರಿತು ಆಸಕ್ತಿ ಹೊಂದಿ ಅಧ್ಯಯನ ಕೈಗೊಂಡಿದ್ದಾರೆ. ಆದರೆ ಪ್ರಸ್ತುತ ಸಂಶೋಧಕರು ಗ್ರಾಹಕ ವೇದಿಕೆಗಳ ಬಗ್ಗೆ ಕೈಕೊಂಡ ಈ ಅಧ್ಯಯನ ವಿಭಿನ್ನವಾಗಿದೆ.

**ಟಿಪ್ಪಣಿಗಳು :**

೧. ವೆಂಕಟೇಶ ಎಚ್. ಆರ್. (೨೦೦೩) –"ಕಂಜುಮರ್ಸ್ ಪ್ರೊಟೆಕ್ಷನ್ ಇನ್ ಕರ್ನಾಟಕ – ಎ ಡೈಗ್ನೊಸ್ಟಿಕ ಸ್ಟಡಿ" ಪಿಎಚ್.ಡಿ. ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೨. ಕುಲಕರ್ಣಿ ಎಸ್. ಜಿ. (೨೦೦೩) –"ಕಂಜುಮರ್ಸ ಪ್ರೊಟೆಕ್ಷನ್ ಆಂಡ್ ಎ ಕೇಸ ಸ್ಟಡಿ ಆಫ್ ಸಿಲೆಕ್ಟೆಡ್ ಕಂಜುಮರ್ಸ ಗುಡ್ಸ ಇನ್ ಬೆಳಗಾವ್ ಟೌನ್" ಎಮ್.ಫಿಲ್ ಪ್ರಬಂಧ ಶಿವಾಜಿ ವಿಶ್ವವಿದ್ಯಾಲಯ ಕೊಲ್ಲಾಪೂರ.

೩. ನಂದೀಮಠ ಓಂಪ್ರಕಾಶ–(೧೬–೧೦–೨೦೦೭) –"ಕಂಜುಮರಿಸಮ್ ಆಂಡ ಕಂಜುಮರ್ಸ ಪ್ರೊಟೆಕ್ಷನ್ ಲಾ" ಜಿ.ಕೆ.ಲಾ ಕಾಲೇಜ ಹುಬ್ಬಳ್ಳಿ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನ.

೪. ಪಾಟೀಲ ಜಿ. ಎಸ್ (೧೬–೧೦–೨೦೦೭) –"ಇಂಟರ್‌ನ್ಯಾಶನಲ್ ಕಂಜುಮರಿಸಂ" ಜಿ. ಕೆ.ಲಾ ಕಾಲೇಜ, ಹುಬ್ಬಳ್ಳಿ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನ.

೫. ಶಹಾ ಸಂತೋಷ ವಿ. (೧೬–೧೦–೨೦೦೭) –"ಕಂಜುಮರ್ಸ ಪ್ರೊಟೆಕ್ಷನ್" ಹುಬ್ಬಳ್ಳಿ ಲಾ ಕಾಲೇಜದ ಕಾರ್ಯಾಗಾರದಲ್ಲಿ ಮಂಡಿಸಿದ ಲೇಖನ.

೬. ಚೌಧರಿ ರಾಜಿಂದರ್ – (ಮೇ ೨೦೦೮) –"ಕಂಜುಮರ್ಸ ಪ್ರೊಟೆಕ್ಷನ್ ಆಕ್ಟ ೧೯೮೬ – "ಎ ಬೂನ್ ಫಾರ ಪಾರ್ಮ್‌ರ್ಸ ಆಂಡ್ ರೂರಲ್ ಕಂಜುಮರ್ಸ" ಕುರುಕ್ಷೇತ್ರ. ಪು.ನಂ ೨೯

೭. ಕಪೂರ ಶೀತಲ್ (ಜೂನ್ ೨೦೦೯) – "ಡೆವಲಪಮೆಂಟ್ ಆಫ್ ಕಂಜುಮರಿಸಂ ಇನ್ ಇಂಡಿಯನ್ ವ್ಹಿಲೇಜ" ಕುರುಕ್ಷೇತ್ರ ಪು. ನಂ. ೨೯.

೮. ಕೆ. ಎಲ್. ಇ. ಲಾ ಸೊಸೈಟಿ ಚಿಕ್ಕೋಡಿ – "ರೈಟ ಟು ಇನ್ಫಾರ್ಮೆಷನ್ ಆಕ್ಟ ೨೦೦೫" ಒಂದು ದಿನದ ಕಾರ್ಯಾಗಾರದ ಕೈಪಿಡಿ ಪು. ನಂ. ೧ ರಿಂದ ೪೨.

೯. ಸಿಂಘ ಮಹಿಂದರ್ ಮತ್ತು ಅಮಿತ್‌ಕುಮಾರ (ಅಗಸ್ಟ ೨೦೦೯) – "ರೂರಲ್ ಕಂಜುಮರ್ಸ ಪ್ರೊಟೆಕ್ಷನ್ ನೀಡ್ ಫಾರ್ ಅವೇಯರ್ನೆಸ" ಕುರುಕ್ಷೇತ್ರ ಪು. ನಂ ೪೧.

೧೦. ಸಿದ್ಧಕಿ ಅಕ್ಬರ್ ಆಂಡ್ ರಘುರಾಂ (ಫೆಬ್ರವರಿ, ೧೫, ೨೦೦೯)– "ಕಂಜುಮರ್ಸ ಪ್ರೊಟೆಕ್ಷನ್ ಇನ್ ಇಂಡಿಯಾ ಸಮ್ ರಿಫ್ಲೇಕ್ಷನ್ಸ" ಸದರ್ನ ಎಕನಾಮಿಸ್ಟ ಪು. ನಂ. ೨೭.

೧೧. ಸತ್ಯಂ ಸುಂದರಂ (೧೯೯೮) – "ವ್ಯಾಲ್ಯುವಂಟರಿಸಂ ಇನ್ ನಿವ್ ಎರಾ" ಸದರ್ನ ಎಕನಾಮಿಷ್ಟ ಪು. ನಂ. ೨೮.

೧೨. ಸರಾಫ ಡಿ. ಎನ್. (೨೦೦೩. ಏಪ್ರಿಲ್ ೪) – "ಕಂಜುಮರ್ಸ ಪ್ರೊಟೆಕ್ಷನ್ ಇನ್ ಇಂಡಿಯಾ" ಎಕನಾಮಿಕ್ ಆಂಡ್ ಪೊಲಿಟಿಕಲ ವೀಕ್ಲಿ.

೧೩. ಬಾಂಗಿಯಾ ಆರ್.ಕೆ. (೨೦೦೨) "ಕಂಜುಮರ್ಸ ಪ್ರೊಟೆಕ್ಷನ್ ಲಾ ಆಂಡ್ ಪ್ರೊಸಿಜರ್" ಪೊಯನಿಯರ್ ಪಬ್ಲಿಕೇಶನ್ ನವದೆಹಲಿ.

೧೪. ಶ್ರೀಮತಿ ಸುಜಾ ಆರ್. ನೈಯರ್ (೨೦೦೮) – "ಕಂಜುಮರ್ಸ ಬಿಹೇವಿಯರ್" ಹಿಮಾಲಯ ಪಬ್ಲಿಕೇಶನ್ ನವದೆಹಲಿ.

೧೫. ಉಪಾಧ್ಯೆ ವಿದ್ಯಾದೀಶ (೨೦೦೨) – "ಗ್ರಾಹಕರ ರಕ್ಷಣಾ ಅಧಿನಿಯಮ ೧೯೮೬ ಮತ್ತು ಗ್ರಾಹಕರ ರಕ್ಷಣಾ ನಿಯಮಗಳು" ಹೊಸ ಸಹಸ್ರಮಾನ ಪಬ್ಲಿಕೇಶನ್, ಬೆಂಗಳೂರು.

೧೬. ಅಗ್ರವಾಲ್ ವ್ಹಿ. ಕೆ. (೨೦೦೦) – "ಕಂಜುಮರ್ಸ ಪ್ರೊಟೆಕ್ಷನ್ ಆಕ್ಟ ೧೯೮೬." ಬಿ. ಎಲ್. ಎಚ್. ಪಬ್ಲಿಷರ್ಸ ನವದೆಹಲಿ.

೧೭. ಅಖಿಲ ಭಾರತೀಯ ಗ್ರಾಹಕ ಪಂಚಾಯತ್ ಮೈಸೂರು(೨೦೦೫) – "ಗ್ರಾಹಕ ಹಿತರಕ್ಷಣಾ ಕಾಯ್ದೆ ೧೯೮೬".

೧೮. ಬುಲಚಂದಾನಿ ಕೆ.ಆರ್. (೨೦೦೮) – "ಬಿಜಿನೇಸ್ ಲಾ ಆಂಡ್ ಫಾರ್ ಮ್ಯಾನೇಜಮೆಂಟ್" ಹಿಮಾಲಯ ಪಬ್ಲಿಷಿಂಗ್ ಹೌಸ.

೧೯. ಚಂದ್ರಕಾಂತ ಶರ್ಮಾ ಸಂಶೋಧನೆ ಗ್ರಂಥ – "ರೋಲ ಆಫ್ ಕಂಜುಮರ್ಸ ಆರ್ಗನೈಜೇಶನ್ ಇನ್ ಕಂಜುಮರ್ಸ ಪ್ರೊಟೆಕ್ಷನ್" ನವದೆಹಲಿ ಪಬ್ಲಿಕೇಶನ್.

೨೦. ನಾಯರ ಆರ್. ಕೆ. (೨೦೦೫) – "ಕಂಜುಮರ್ಸ ಪ್ರೊಟೆಕ್ಷನ್ ಇನ್ ಇಂಡಿಯಾ" ಬಿ.ಎಲ್ ಎಚ್. ಪಬ್ಲಿಕೇಷನ್ ನವದೆಹಲಿ.

೨೧. ಅಂಟೋನಿ ಎಂ.ಜೆ. (೨೦೦೧) – "ಕಂಜುಮರ್ಸ ರೈಟ್" ಚಾಂದ ಆಂಡ್ ಚಾಂದ ಕಂಪನಿ ನವದೆಹಲಿ.

೨೨. ಸಿಂಘ ಗುರ್ಜಿತ್ ಸಂಶೋಧನೆ ೨೦೦೩– "ಕಂಜುಮರ್ಸ ಪ್ರೊಟೆಕ್ಷನ್ ಇನ್ ಇಂಡಿಯಾ, ನವದೆಹಲಿ ಪಬ್ಲಿಕೇಶನ್.

೨೩. ಗಿರಮಾಜಿ ಪುಷ್ಪಾ (೨೦೦೧) – "ಕಂಜುಮರ್ಸ ರೈಟ್ ಟು ಎವ್‌ರಿವನ್" ನವದೆಹಲಿ ಪಬ್ಲಿಕೇಷನ್.

೨೪. ತ್ರಿವೇದಿ. ಎಚ್.ಡಿ.(೧೯೮೯) – "ಫುಡ್‌ಅಡಲ್ಟರೇಶನ್ ಆಕ್ಟ ೧೯೫೪" ನವದೆಹಲಿ ಪಬ್ಲಿಕೇಷನ್.

೨೫. ಮಲ್ಲಿಕ ಪಿ.ಎಲ್. (೧೯೮೩) – "ವೈಟ್ಸ ಆಂಡ್ ಮೆಜರ್‌ಮೆಂಟ್ ಲಾ" – ನವದೆಹಲಿ ಪಬ್ಲಿಕೇಷನ್.

೨೬. ವರ್ಷನಿ ಡಿ.ಪಿ. (೧೯೯೮) – "ಏಷೆನ್ಸಿಯಲ್ ಕಮೋಡಿಟಿ ಆಕ್ಟ ೧೯೫೫" ದೆಹಲಿ ಪಬ್ಲಿಕೇಷನ್.

೨೭. ಶ್ರೀವಾತ್ಸವ ಸುಧಾರಾಣಿ (೧೯೮೬) – "ಕಂಜುಮರಿಸಂ ಇನ್ ಕಮ್ಯುನಿಕೇಷನ್ ಆಂಡ್ ಲಾ" ನವದೆಹಲಿ ಪಬ್ಲಿಕೇಷನ್.

೨೮. ಹಿಮಾಚಲಂ ಡಿ – "ಕಂಜುಮರ್ಸ ಪ್ರೊಟೆಕ್ಷನ್" ಹಿಮಾಲಯ ಪಬ್ಲೀಕೇಷನ್ ನವದೆಹಲಿ.

೨೯. ಪೇರುಮಾಳ ಎಸ್. ಎಮ್.(ಮಾರ್ಚ್ ೨೦೧೦) – "ಇಂಪ್ಯಾಕ್ಟ ಆಫ್ ಎಕನಾಮಿಕ ಗ್ಲೋಬಲಾಯಜೇಶನ್ ಆಂಡ್ ಕಂಜುಮರ್ಸ ಎಕ್ಸಪೇಕ್ಟೇಶನ್ ಇನ್ ಲಾಯಿಫ ಇನ್ಸುರನ್ಸ" ಸದರ್ನ ಎಕನಾಮಿಕ್ಸ. ಪುಟ.ನಂ೨೬.

೩೦. ಪಣಿಕರ್ ಕೆ.ಪಿ. (ಜನೇವರಿ ೧೯೯೭) ಲೇಖನ – "ಕಂಜುಮರ್ಸ ಪ್ರೊಟೆಕ್ಷನ ಆಕ್ಟ ೧೯೮೬" ಪ್ರಿಯಂವಧಾ, ಪುಟ.ನಂ ೨೯.

೩೧. ಶೇರ್ಲೆಕರ್ ಎಸ್. ಏ. (೧೯೯೮) ಗ್ರಂಥ – "ಮಾರ್ಕೆಟಿಂಗ ಮ್ಯಾನೇಜಮೆಂಟ" ಹಿಮಾಲಯ ಪಬ್ಲಿಕೇಷನ್ ನವದೆಹಲಿ.

೩೨. ರಾಯ್ ಹೈಗ್ರೀವ್ (೨೦೦೫ ಜೂನ್ ೧೫.) – "ಕವೇಟ್ ಎಂಪ್ಟರ್" ಕುರುಕ್ಷೇತ್ರ ಪುಟ. ನಂ.೩೨.

೩೩. ಚೌಧರಿ ಪೌಲ (೧೯೯೮ ಮೆ ೫) – "ವ್ಯಾಲ್ಯುವಂಟರಿಸಂ, ವೆಲ್‌ಫೇಯರ್ ಆಂಡ್, ಡೆವಲಪ್‌ಮೆಂಟ – ಕುರುಕ್ಷೇತ್ರ. ಪುಟ.ನಂ. ೨೭.

೩೪. ಬಲರಾಮ್ ಶಕುಂತಲಾ ಮತ್ತು ರವೀಂದ್ರನ್ ವಿಸಾ.( ೨೦೦೧) – "ಚೆಂಜಿಂಗ ಫೇಸ್ ಆಫ್ ವ್ಯಾಲ್ಯುವಂಟರಿಸಂ – ಸದರ್ನ ಎಕನಾಮಿಸ್ಟ. ಪುಟ.ನಂ ೧೮.

೩೫. ಶೆಟ್ಟಿ ಲತಾ(೨೦೦೩ ಏಪ್ರೀಲ್ ೪)– "ಪ್ರೋಫೆಶನಲಿಸಂ ಇನ್ ಸೊಸಿಯಲ್ ಸರ್ವಿಸ್ ಇನ್ ಯು.ಕೆ. ಆಂಡ್ ಇಂಡಿಯಾ" ಎಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ. ಪುಟ. ನಂ ೨೭.

೩೬. ಗುಲ್ಸನ್ ಎಸ್. ಎಸ್.( ಜನವರಿ ೨೦೦೩)– "ಕಂಜುಮರ್ಸ ಪ್ರೊಟೆಕ್ಷನ್ ಆಂಡ್ ಸ್ಯಾಟಿಸ್‌ಫ್ಯಾಕ್ಷನ್" ಸದರ್ನ ಎಕನಾಮಿಸ್ಟ ಪು.ನಂ. ೨೮.

೩೭. ಗಿರಿ ಎಚ್.ಎನ್.(೨೦೦೮) ಮಹಾಪ್ರಬಂಧ – "ಕಂಜುಮರ್ಸ ಕ್ರೈಮ್ ಆಂಡ್ ಲೇಕ್" ನವದೆಹಲಿ ಪಬ್ಲಿಕೇಷನ್.

೩೮. ಶೇತ ಮೋಹಿನಿ ಮತ್ತು ಸೀತಾರಾಮ ಪ್ರೇಮಾವತಿ (೨೦೦೩) – "ಕಂಜುಮರಿಸಂ ಕನ್ಸೆಪ್ಟ".
ನವದೆಹಲಿ ಪಬ್ಲಿಕೇಷನ್.

೩೯. ಸಿದ್ಧಕಿ ಶಿರಾಜುದ್ದಿನ ಮತ್ತು ಶರ್ಮಾ ಸಿ.ಆರ್. (ಮಾರ್ಚ ೧೯೯೯) – "ಆರ್ಗನೈಜೇಷನ್ ಫಾರ್ ಕಂಜುಮರ್ಸ ಪ್ರೊಟೆಕ್ಷನ್ – ಕಂಜುಮರ್ಸ ಪ್ರಾಬ್ಲೇಮ್ಸ ಆಂಡ್ ರಿಡ್ರೆಸಲ್ ವೇಸ್" ಸದರ್ನ ಎಕನಾಮಿಸ್ಟ, ಪುಟ.ನಂ ೨೮.

೪೦. ರೇಬೆಲ್ಲೊ ಆಂಡ್ರೆ (೨೦೦೩)– "ಸೊಸೈಟಲ್ ರಿಸ್ಪೊನ್ಸ ಟು ಕಂಜುಮರ್ಸ ಮುವಮೆಂಟ ಆಂಡ್ ಗವರ್ನಮೆಂಟ್" ಸಿ.ಆರ್.ಸಿ. ಪಬ್ಲಿಕೇಷನ್ ನವದೆಹಲಿ.

೪೧. ಶಹಾ ಪ್ರೀತಿ (೨೦೦೨) – "ಎಮರ್ಜನ್ಸಸ್ ಆಂಡ್ ಫಾರ್ಮೇಷನ್ ಆಫ್ ಕಂಜುಮರ್ಸ ಗ್ರುಪ್ಸ್" ಸಿ.ಆರ್.ಸಿ. ಪಬ್ಲಿಕೇಷನ್ ನವದೆಹಲಿ.

೪೨. ಕರುಣಾಕರನ್ ಕೆ (೨೦೦೮)– "ಮಾರ್ಕೆಟಿಂಗ ಮ್ಯಾನೇಜಮೆಂಟ – ಕಂಜುಮರಿಸಂ" ಹಿಮಾಲಯ ಪಬ್ಲಿಕೇಷನ್ ನವದೆಹಲಿ.

*********

# ಅಧ್ಯಾಯ –೩

## ಗ್ರಾಹಕ ವೇದಿಕೆಗಳ ಪರಿಕಲ್ಪನೆಯ ಹಿನ್ನೆಲೆ

೩.೧ ಗ್ರಾಹಕ ವೇದಿಕೆ

೩.೨ ಗ್ರಾಹಕ

೩.೩ ಸರಕು

೩.೪ ಸೇವೆ

೩.೫ ಗ್ರಾಹಕತ್ವ

೩.೬ ಗ್ರಾಹಕ ಸಂರಕ್ಷಣೆ

೩.೭ ಗ್ರಾಹಕ ಚಳುವಳಿ

೩.೮ ಭಾರತದಲ್ಲಿ ಗ್ರಾಹಕ ಚಳುವಳಿ

೩.೯ ಕರ್ನಾಟಕದಲ್ಲಿ ಗ್ರಾಹಕ ಚಳುವಳಿ

೩.೧೦ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬

## ಅಧ್ಯಾಯ – ೩

# ವೇದಿಕೆಗಳ ಪರಿಕಲ್ಪನೆಯ ಹಿನ್ನೆಲೆ

ವೇದಕಾಲದಲ್ಲಿಯೂ ಗ್ರಾಹಕ ಸಂರಕ್ಷಣೆಯ ಹಲವು ಕುತೂಹಲ ಉಂಟುಮಾಡುವ ನಿದರ್ಶನಗಳಿವೆ.[೧] ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗ್ರಾಹಕ ಸಂರಕ್ಷಣೆಯ ಕುರಿತು ಉಲ್ಲೇಖವಿದೆ. ಉದಾಹರಣೆಗೆ ವ್ಯಾಪಾರ ಹಾಗೂ ಕೈಗಾರಿಕೆಯ ಅನ್ಯಾಯಗಳು, ಮಾಪನ ಹಾಗೂ ಅಳತೆಯಲ್ಲಿ ಅನ್ಯಾಯ, ಕಲಬೆರಕೆ, ಇವುಗಳಿಗೆ ಶಿಕ್ಷೆ ಈ ಎಲ್ಲ ಅಂಶಗಳನ್ನು ಅರ್ಥಶಾಸ್ತ್ರದಲ್ಲಿ ನಮೂದಿಸಿದ್ದಾರೆ. ಆಹಾರ ಕಲಬೆರಿಕೆ, ಹೆಚ್ಚಿನ ಬೆಲೆ ಹೇರುವುದು, ತೂಕ ಮತ್ತು ಅಳತೆಗಳಲ್ಲಿ ವ್ಯತ್ಯಾಸ, ಪ್ರತಿಬಂಧ ಮಾಡಿದ ಸಾಮಾನುಗಳ ಮಾರಾಟ, ಮುಂತಾದವುಗಳ ಕಾನೂನಿನ ನಿಯಮಗಳು ಮತ್ತು ಅವುಗಳಿಗೆ ಶಿಕ್ಷೆ ಮುಂತಾದವುಗಳ ಉಲ್ಲೇಖವಿದೆ.[೨]

ಈ ಎಲ್ಲ ಮಾಹಿತಿಯಿಂದ ನಮಗೆ ತಿಳಿಯುವುದು ಏನೆಂದರೆ ಗ್ರಾಹಕ ಸಂರಕ್ಷಣೆ ನಮಗೆ ಹೊಸದೇನು ಅಲ್ಲ. ಹಳೆಯ ಕಾಲದಿಂದಲೂ ಇದು ಸಮಾಜದಲ್ಲಿ ಇತ್ತು. ಕ್ರಿ.ಶ. ೭೧೨ ರಿಂದ ೧೭೬೫ ಈ ಕಾಲದ ಮುಸ್ಲಿಮ ಆಡಳಿತದಲ್ಲಿ ಹಲವಾರು ಗ್ರಾಹಕ ಸಂರಕ್ಷಣಾ ಘಟನೆಗಳ ಉಲ್ಲೇಖವಿದೆ. ಸುಲ್ತಾನ ಅಲಿ–ಉದ್ದಿನ ಕೀಲ್ಜಿ, ಬೆಲೆ ನಿಯಂತ್ರಣಾ ಕಾಯ್ದೆಯನ್ನು ಜಾರಿಗೆ ತಂದಿದ್ದನು.

ವಸಾಹತು ಅವಧಿ ೧೭೬೫ ರಿಂದ ೧೯೪೭ರಲ್ಲಿ, ಬ್ರೀಟಿಷರು ಭಾರತವನ್ನು ವಶಪಡಿಸಿಕೊಂಡಾಗಿನ ಕಾಲದಲ್ಲಿ ಕೇವಲ ಕಾನೂನಿನ ವಾತಾವರಣದ ಸುವ್ಯವಸ್ಥೆ, ಕರ ಸಂಗ್ರಹಣೆ ಮತ್ತು ರಕ್ಷಣಾ ವ್ಯವಸ್ಥೆಯ ಆಡಳಿತ ಒಳಗೊಂಡಿತ್ತು. ಈ ಒಂದು ಕಾರ್ಯಾಚರಣೆಯಲ್ಲಿ ಬ್ರೀಟಿಷ ಸರ್ಕಾರ ಹಲವು ಶಾಸನಗಳನ್ನು ಸಾರ್ವಜನಿಕ ಹಿತಾಸಕ್ತಿಗೆ ಅಳವಡಿಸಿತ್ತು. ಅವುಗಳಲ್ಲಿ ಮಹತ್ವದ ಶಾಸನಗಳು :

೧. ಭಾರತೀಯ ಸರಕು ಮಾರಾಟ ಕಾಯ್ದೆ – ೧೯೩೦.

೨. ಕೃಷಿ ಉತ್ಪನ್ನ ವರ್ಗೀಕರಣ ಮತ್ತು ಗುರುತಿಸುವಿಕೆ.

೩. ಔಷಧ ಮತ್ತು ಸೌಂದರ್ಯವರ್ಧಕ ಸಾಮಗ್ರಿಗಳ ಕಾಯ್ದೆ.

೪. ಲಾಂಛನ ಮತ್ತು ಹೆಸರುಗಳ ಅನುಚಿತ ಬಳಕೆ.

೫. ಭಾರತೀಯ ಕಾನೂನು ಮಾಪನ ಸಂಸ್ಥೆ, ಕಾಯ್ದೆ – ೧೯೪೨.

೬. ರಫ್ತು ಕಾಯ್ದೆ.

ಹಲವಾರು ಭಾರತದ ವಿದ್ವಾನ್ ಮಹಿನಿಯರು ಉದಾ: ಶ್ರೀ ಜಿ.ಎ. ಭಟ್ ಮತ್ತು ಶ್ರೀಮತಿ ಕಾಡಿಲ್ಕರ್, ಸಹಕಾರ ಚಳುವಳಿಯನ್ನು ಗ್ರಾಹಕ ಸಂರಕ್ಷಣಾ ವಿಷಯಕ್ಕೆ ತಳಕು ಹಾಕಿದ್ದಾರೆ. ಆದರೆ ಶ್ರೀ ಗುರ್ಜಿತ ಸಿಂಘರಂತ ಲೇಖಕರು ಸಹಕಾರ ಚಳುವಳಿಯನ್ನು ಕೇವಲ ಗ್ರಾಹಕ ಸರಕು ಮತ್ತು ಸೇವೆಯನ್ನು ಹಂಚಿಕೆಯ ವಿಷಯವನ್ನಾಗಿಸಿ ಚಳುವಳಿ ಗ್ರಾಹಕ ಸಂರಕ್ಷಣೆಗೆ ಒತ್ತು ಕೊಡುವುದಿಲ್ಲ ಎಂದಿದ್ದಾರೆ.[೪] ಈ ಒಂದು ಅವಧಿ ಗ್ರಾಹಕರಿಗೆ ಯಾವುದೇ ಲಾಭವನ್ನು ಅಥವಾ ಸಂರಕ್ಷಣೆಯನ್ನು ನೀಡುವ ಭರವಸೆಯ ಅವಧಿಯಾಗಿರಲಿಲ್ಲ. ಆದರೂ ಕೂಡ ಈ ಕಾಲದಲ್ಲಿ ಗ್ರಾಹಕನ ಹಿತರಕ್ಷಣೆಗೆ ಒಂದು ಮೈಲುಗಲ್ಲೆಂದು ಪರಿಗಣಿಸಬಹುದು.

**೩.೧ ಗ್ರಾಹಕ ವೇದಿಕೆ**

ಗ್ರಾಹಕ ವೇದಿಕೆಯು, ಸರಕಾರೇತರ, ರಾಜಕೀಯವಲ್ಲದ, ಸ್ವಯಂ ಸಂಸ್ಥೆ. ಇದು ಸಂಘ ಕಾಯ್ದೆಗೆ ಒಳಪಟ್ಟು ನೋಂದಣಿಯಾಗಿರುತ್ತದೆ. ಗ್ರಾಹಕ ವೇದಿಕೆಯು ಗ್ರಾಹಕತ್ವದಿಂದ ಹಾಗೂ ಗ್ರಾಹಕ ಚಳುವಳಿಯಿಂದ ಉದ್ಭವವಾಗಿ ಬೆಳೆದಿರುತ್ತದೆ. ಗ್ರಾಹಕರ ಹಕ್ಕುಗಳನ್ನು ಹಾಗೂ ಹಿತಾಸಕ್ತಿಯನ್ನು ಕಾಪಾಡುವುದೆ ಈ ವೇದಿಕೆಯ ಉದ್ದೇಶವಾಗಿರುತ್ತದೆ.

ಭಾರತದಲ್ಲಿ ೧೯೭೯ರಲ್ಲಿ ದಿವಂಗತ ಶ್ರೀ ಗ್ಯಾನಪಂಡಿತರು ಗ್ರಾಹಕ ವೇದಿಕೆಗೆ ಹುಟ್ಟು ಹಾಕಿದರು. ಗ್ರಾಹಕತ್ವದ ಬೆಳೆವಣಿಗೆಗೆ ಅಸ್ತ್ರವಾಗಿ, ಗ್ರಾಹಕ ವೇದಿಕೆ ಬೆಳೆದು ಬಂದಿತು. ಆ ಒಂದು ಸಮಯದಲ್ಲಿ, ನಮ್ಮ ದೇಶ ಈ ವೇದಿಕೆಯ ಅರಿವನ್ನು ಹೊಂದಿರಲಿಲ್ಲ. ಗ್ರಾಹಕರ ಹಕ್ಕುಗಳಾಗಲಿ ಗ್ರಾಹಕರಿಗೆ ಪ್ರತ್ಯೇಕವಾದ ಕಾಯ್ದೆಯಾಗಲಿ ಇರಲಿಲ್ಲ. ನಂತರ ಶ್ರೀ ಗ್ಯಾನ ಪಂಡಿತರ ಪ್ರಯತ್ನದಿಂದ ಗ್ರಾಹಕ ಚಳುವಳಿಯ ರಾಜದೂತನಾಗಿ ಗ್ರಾಹಕವೇದಿಕೆ ನಮ್ಮ ದೇಶದಲ್ಲಿ ಕಾಲಿರಿಸಿತು. ಗ್ರಾಹಕರಿಗೆ ಬೇಕಾದ ಕಾಯ್ದೆ *"ಗ್ರಾಹಕ ಸಂರಕ್ಷಣಾ ಕಾಯ್ದೆ* ೧೯೮೬, ಚಾಲ್ತಿಯಲ್ಲಿ ಬಂದಿತು, ಎಪ್ರಿಲ್, ೧೫,೧೯೮೭ ರಂದು ನಂತರದ ಇಪ್ಪತ್ತು ವರ್ಷದ ಅವಧಿಯಲ್ಲಿ ಗ್ರಾಹಕ ವೇದಿಕೆ ಮುಂಚೂಣಿಯ ಸಂಸ್ಥೆಯಾಗಿ ನಿಂತಿದೆ.

ಈಗ ಈ ಗ್ರಾಹಕ ವೇದಿಕೆ, ಗ್ರಾಹಕರು ಅನುಭವಿಸುವ ಅನ್ಯಾಯಗಳ ಮೇಲೆ ಬೆಳಕು ಚೆಲ್ಲುವ ನಿಟ್ಟಿನಲ್ಲಿ ಬೆಳೆಯುತ್ತಿದೆ.

ಗ್ರಾಹಕ ವೇದಿಕೆ ವಿಶೇಷವಾಗಿ ಮೂರು ಅಂಗಗಳನ್ನು ಹೊಂದಿರುತ್ತದೆ.

೧. ವಿಚಾರ ಅಂಗ : ಇದರ ಉದ್ದೇಶ ಸಭೆಗಳನ್ನು ಹಾಗೂ ಚಳುವಳಿಗಳನ್ನು ಆಯೋಜಿಸುವುದು.

೨. ಪ್ರಚಾರ ಅಂಗ : ಗ್ರಾಹಕರನ್ನು ಜಾಗೃತಗೊಳಿಸುವುದು ಮತ್ತು ಗ್ರಾಹಕ ವಿಷಯಗಳ ಕುರಿತು ಪ್ರಚಾರ ಕೈಗೊಳ್ಳುವುದು

೩. ಕಾನೂನು ಅಂಗ : ಗ್ರಾಹಕರು ನೀಡಿದ ದೂರುಗಳಿಗೆ ಸ್ಪಂದಿಸುವುದು ಹಾಗೂ ಗ್ರಾಹಕರ ಅಳಲುಗಳನ್ನು ವಿಚಾರಿಸಿ ಕ್ರಮ ಕೈಗೊಳ್ಳುವುದು

ಈ ವೇದಿಕೆಗೆ ಲಂಡನನಲ್ಲಿ ಇರುವ "ಅಂತರಾಷ್ಟ್ರೀಯ ಗ್ರಾಹಕರ ಕೌನ್ಸಿಲ್" ಹಾಗೂ ಹೊಸ ದೆಹಲಿಯಲ್ಲಿರುವ "ಗ್ರಾಹಕರ ಸಹಭಾಗದ ಕೌನ್ಸಿಲನ" ಸದಸ್ಯತ್ವ ಹೊಂದಿರುತ್ತದೆ.

ಈ ಗ್ರಾಹಕರ ವೇದಿಕೆ, ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಕಾರ್ಯಗಳನ್ನು ಹಮ್ಮಿಕೊಳ್ಳುತ್ತದೆ. ಈ ಕಾರ್ಯಕ್ರಮಗಳನ್ನು ಕೆಳಗಿನಂತೆ ವಿಭಾಗಿಸಬಹುದು

**೧. ಸಾಮಾನ್ಯ ಕಾರ್ಯಕ್ರಮಗಳು:**

ವೇದಿಕೆಯ ಪ್ರಮುಖವಾದ ಕಾರ್ಯ ಗ್ರಾಹಕರ ದೂರುಗಳನ್ನು ಸ್ವೀಕರಿಸಿ ಅವರ ತೊಂದರೆಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯತತ್ಪರರಾಗುವುದು. ಪ್ರತಿ ತಿಂಗಳೂ ಗುಂಪು ಚರ್ಚೆ, ವಿಚಾರ ಗೋಷ್ಠಿ, ಉಪನ್ಯಾಸಗಳನ್ನು ಹಮ್ಮಿಕೊಂಡು, ಗ್ರಾಹಕ ಹಾಗೂ ಸರ್ಕಾರ, ಗ್ರಾಹಕ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ, ಸಂಬಂಧಗಳನ್ನು ಏರ್ಪಡಿಸಿ ಗ್ರಾಹಕರ ತೊಂದರೆಗಳನ್ನು ಅರಿತು, ಅದಕ್ಕೆ ಸ್ಪಂದಿಸುವಂತೆ ನೋಡಿಕೊಳ್ಳುವುದು ಈ ವಿಭಾಗದ ಉದ್ದೇಶ.

**೨. ಯೋಜನಾಬದ್ಧ ಕಾರ್ಯಗಳು:**

ಈ ವಿಭಾಗ ರಾಜ್ಯ ಸರ್ಕಾರಗಳು ಹಾಗೂ ಕೇಂದ್ರ ಸರ್ಕಾರಗಳು, ಗ್ರಾಹಕರಿಗೆ ಅವರ ಗ್ರಾಹಕ ಜ್ಞಾನವನ್ನು ಹೆಚ್ಚಿಸಲು, ಅವರಿಗೆ ತರಬೇತಿ ಕೊಡಲು, ಹಮ್ಮಿಕೊಳ್ಳುವ ಯೋಜನಾಬದ್ದ ಕಾರ್ಯಗಳನ್ನು ಒಳಗೊಂಡಿರುತ್ತದೆ. ಗ್ರಾಹಕರಿಗೆ ಅವರ ಹಕ್ಕುಗಳನ್ನು ಕರ್ತವ್ಯಗಳನ್ನು ಜವಾಬ್ದಾರಿಗಳನ್ನು ತಿಳಿಸಿಕೊಡುವ, ಉದ್ದೇಶದಿಂದ ಸರ್ಕಾರಗಳು ನಡೆಸುವ ಕಾರ್ಯಕ್ರಮಗಳು ಈ ವಿಭಾಗದಲ್ಲಿ ಅಳವಡಿಕೆಯಾಗಿವೆ.

**೩. ವಿಶೇಷ ಕಾರ್ಯಕ್ರಮಗಳು:**

ವರ್ತಮಾನ ಪರಿಸ್ಥಿತಿಗೆ ಅನುಗುಣವಾಗಿ ಗ್ರಾಹಕರ ಹಿತಕ್ಕೆ ಯಾವುದೆ ತೊಂದರೆಯಾಗದಂತೆ ಕಾರ್ಯಕ್ರಮಗಳನ್ನು ನಿರ್ವಹಿಸುವುದು ಈ ವಿಭಾಗದ ಉದ್ದೇಶವಾಗಿರುತ್ತದೆ. ಉದಾಹರಣೆಗೆ:

೧. ಎದೆಹಾಲಿನ ಪ್ರಾಮುಖ್ಯತೆಯ ಕುರಿತು ಕಾರ್ಯಕ್ರಮ.

೨. ಡಂಕಲ್ ಪ್ರಾಸ್ತಾವನೆಗೆ ವಿಚಾರ ಸಂಕಿರಣ ಆಯೋಜಿಸುವುದು.

೩. ಗ್ರಾಹಕರ ದೂರುಗಳಿಗೆ ಅಂತರ್ಜಾಲದ ಸೌಲಭ್ಯವನ್ನು ಒದಗಿಸುವುದು.

೪. ಪ್ರೌಢಶಾಲೆಗಳಲ್ಲಿ ಗ್ರಾಹಕರ ಜಾಗೃತೆಗೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೫. ಗ್ರಾಹಕರಿಗೆ ಜಾಗೃತಿಗೆ ಸಂಬಂಧಿಸಿದ ದಿನಪತ್ರಿಕೆಗಳನ್ನು ಹೊರಡಿಸುವುದು.

೬. ಶಾಸಕರ, ಸಚಿವರ ಪತ್ರಿಕಾ ಸಂದರ್ಶನಗಳನ್ನು, ವಿಚಾರ ಸಂಕಿರಣಗಳನ್ನು,

ಗೋಷ್ಠಿಗಳನ್ನು, ಉಪನ್ಯಾಸ, ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಗ್ರಾಹಕ ವೇದಿಕೆಯ ಉದ್ದೇಶ, ಗ್ರಾಹಕ ಚಟುವಟಿಕೆಗಳನ್ನು ಹಳ್ಳಿಗಳಿಗೆ ವಿಸ್ತರಿಸಿ ಗ್ರಾಹಕರನ್ನು ತರಬೇತಿಗೊಳಿಸುವುದು ಆಗಿದೆ. ಈ ಒಂದು ಸದುದ್ದೇಶವನ್ನು ಕಾರ್ಯರೂಪಕ್ಕೆ ತರಲು ವೇದಿಕೆ ಸರಿಯಾದ ಸ್ಥಳವನ್ನು ಆರಿಸಿ ಕಾರ್ಯಾಲಯಗಳನ್ನು ಒದಗಿಸಿ, ಅದರ ಸೌಲಭ್ಯಗಳನ್ನು ಸುಧಾರಿಸುವ ಕಾರ್ಯವನ್ನು ಕೂಡ ಇದು ನಿರ್ವಹಿಸುತ್ತದೆ.

**೩.೨ ಗ್ರಾಹಕ**

ಪ್ರತಿಯೊಬ್ಬ ಮನುಷ್ಯನು ಗ್ರಾಹಕನಾಗಿರುತ್ತಾನೆ. ಈ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯೂ ಗ್ರಾಹಕನೆ. ಕೆಲವು ಸಲ ವಸ್ತು ರೂಪದಲ್ಲಿ ಇನ್ನು ಕೆಲವು ಸಲ ಸೌಲಭ್ಯರೂಪದಲ್ಲಿ ಸೇವೆ ಬೇಕಾಗುತ್ತದೆ. ಆಧುನಿಕ ಕಾಲದಲ್ಲಿ ಮಾರುಕಟ್ಟೆಯಲ್ಲಿ ಮಾರುವ ಉಪಭೋಗಿಸುವ ವಸ್ತುಗಳನ್ನು ಉಪಯೋಗಿಸದೆ ಜೀವನ ಮಾಡುವುದು ಕನಸಿನ ಮಾತು. ಬಳಕೆ ಎನ್ನುವ ಶಬ್ದ ಮಾನವನಿಗೆ ಉತ್ಪಾದನೆಗಿಂತ ಹಳೆಯದು. ಹಳೆಯ ಕಾಲದಿಂದಲೂ ಮನುಷ್ಯ ನಿಸರ್ಗದ ಅವಲಂಬಿ.

ಗ್ರಾಹಕ, ಎನ್ನುವ ಪದವನ್ನು ಹಲವು ಬಗೆಯಾಗಿ ವ್ಯಾಖ್ಯಾನಿಸಬಹುದು. ಗ್ರಾಹಕ ಪದದ ಅರ್ಥಗಳನ್ನು ನೀಡಿದ ಹಲವು ತಜ್ಞರ ವ್ಯಾಖ್ಯೆಗಳನ್ನು ವಿಶ್ಲೇಷಿಸಲಾಗಿದೆ.

೧. "ಗ್ರಾಹಕ ಎಂದರೆ ಅನಪೇಕ್ಷಿತ ವ್ಯಕ್ತಿ ಅಲ್ಲ. ಆತ ನಮ್ಮಲ್ಲಿಗೆ ಬರುವ ಗೌರವಾನ್ವಿತ ವ್ಯಕ್ತಿ. ಆತ ನಮ್ಮಿಂದ ಉಪಕಾರ ಬಯಸುವುದಿಲ್ಲ. ಬದಲಾಗಿ ಆತನ ಭೇಟಿ ನಮಗೆ ಸೇವೆಯ ಅವಕಾಶ ಕೊಡುತ್ತದೆ " – ಗಾಂಧೀಜಿ

೨. ೧೯೮೬ ರ ಗ್ರಾಹಕ ಸಂರಕ್ಷಣಾ ಕಾಯ್ದೆ ಯ ಪ್ರಕಾರ ಗ್ರಾಹಕ ಎಂದರೆ

೧. "ಸರಕಿಗೆ ಸಂಬಂಧಿಸಿದಂತೆ :

ಅ) ಒಂದು ಸರಕನ್ನು ಪ್ರತಿಫಲಕ್ಕೆ ಪಡೆದಿರುವವನು ಅಥವಾ ಕೊಳ್ಳಲು ವಚನಬದ್ಧನು ಅಥವಾ ಭಾಗಶಃ ವಚನಬದ್ಧನು ಅಥವಾ ಯಾವುದೇ ರೀತಿಯ ವಿಳಂಬಿತ ಸಂದಾಯ ಪದ್ಧತಿಯಲ್ಲಿ ಸೇರಿರುವವನು.

ಆ) ಸರಕನ್ನು ಖರೀದಿಸಿದ ವ್ಯಕ್ತಿಯ ಅನುಮತಿಯಿಂದ ಉಪಯೋಗಿಸಬಹುದು

೨. ಸೇವೆಗೆ ಸಂಬಂಧಿಸಿದ ಗ್ರಾಹಕ ಎಂದರೆ:

ಅ) ಸೇವೆ ಅಥವಾ ಸೇವೆಗಳಿಗೆ ಬೆಲೆ ತೆತ್ತು ಅಥವಾ ಬೆಲೆ ಕೊಡಲು ವಚನಬದ್ಧನು ಅಥವಾ ಭಾಗಶಃ ವಚನಬದ್ಧನು ಅಥವಾ ಯಾವುದೇ ರೀತಿಯ ವಿಳಂಬಿತ ಸಂದಾಯ ಪದ್ಧತಿಯಲ್ಲಿ ಸೇರಿರುವವನು.

ಆ) ಸರಕನ್ನು ಖರೀದಿಸಿ ವ್ಯಕ್ತಿಯ ಅನುಮತಿಯಿಂದ ಉಪಯೋಗಿಸುವವನು."

ಮೇಲಿನ ವ್ಯಾಖ್ಯೆಯ ಪ್ರಕಾರ ಸರಕು ಮತ್ತು ಸೇವೆಯ ವ್ಯಾಪಾರಕ್ಕೆ ಕೆಳಗಿನ ನಿಬಂಧನೆಗಳು ಅವಶ್ಯಕ

೧. ವಸ್ತುವನ್ನು ಖರೀದಿಸಬೇಕಾದರೆ ಅದರ ಬೆಲೆಯನ್ನು ಕೊಡಬೇಕು ಅಥವಾ ಕೊಡುವ ವಾಗ್ದಾನ ಮಾಡಬೇಕು ಅಥವಾ ಅರ್ಧ ಕೊಡುವ ವಾಗ್ದಾನ ಮಾಡಬೇಕು.

೨. ಅಂಥಹ ಸರಕು ಖರೀದಿಸಿ ಮರುಮಾರಾಟ ಮಾಡಬಾರದು ಅಥವಾ ವ್ಯಾಪಾರಕ್ಕೆ ಖರೀದಿಸಬಾರದು. ವ್ಯಾಪಾರಕ್ಕೆ ಅಂದರೇ ತನ್ನ ಜೀವನಕ್ಕಾಗಿ ದುಡ್ಡು ಗಳಿಸಲು ಮತ್ತು ಸ್ವಯಂ ಉದ್ಯೋಗಕ್ಕಾಗಿ ಎಂದು ಅರ್ಥವಲ್ಲ.

೩. ಸೇವೆಯನ್ನು ಬೆಲೆ ಕೊಟ್ಟು ಅಥವಾ ವಾಗ್ದಾನ ಮಾಡಿ ತೆಗೆದುಕೊಳ್ಳಬೇಕು.

೪. ಬೆಲೆ ನೀಡದೆ ತೆಗೆದುಕೊಳ್ಳುವ ಸೇವೆ, ಸೇವೆ ಎಂದು ಪರಿಗಣಿಸಲಾಗದು.[೫]

೩. ಆದರೆ ಹಲವಾರು ಸಂಘ ಸಂಸ್ಥೆಗಳ ಪ್ರಕಾರ ಗ್ರಾಹಕ ಸಂರಕ್ಷಣಾ ಅದಿನಿಯಮ ೧೯೮೬ ರ ವ್ಯಾಖ್ಯೆ ಬಹಳ ಕಡಿಮೆ ಅರ್ಥ ಕೊಡುತ್ತದೆ ಎಂದಿವೆ. ಈ ಸಂಸ್ಥೆಗಳ ವ್ಯಾಖ್ಯೆಗಳಲ್ಲಿ ಕೆಲವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.



ಅ) ಗ್ರಾಹಕ ಶಿಕ್ಷಣ ಮತ್ತು ಸಂಶೋಧನಾ ಕೇಂದ್ರ ಅಹಮದಾಬಾದದ ಅನುಸಾರವಾಗಿ "ಯಾರು ಕರ ಅಥವಾ ಬೆಲೆಯನ್ನು ಕೊಟ್ಟು ಸರಕು ಅಥವಾ ಸೇವೆಯನ್ನು ಪಡೆಯುತ್ತಾರೊ ಅವರಿಗೆ ಗ್ರಾಹಕ ಎನ್ನುತ್ತಾರೆ".

ಆ) ಸಿ.ಜಿ.ಎಸ್.ಡಿ. ಪ್ರಕಾರ "ಯಾರಿಗೆ ಸರಕು ಅಥವಾ ಸೇವೆಯ ಅವಶ್ಯಕತೆ ಇರುತ್ತದೊ, ಅವರು ಗ್ರಾಹಕರು. ಯಾರಿಗೆ ಸರಕು ಅಥವಾ ಸೇವೆಯನ್ನು ಖರೀದಿಸುವ ತಾಕತ್ತಿರುವುದಿಲ್ಲವೊ, ಆದರೂ ಕೂಡ ಅದು ಅವಶ್ಯವಾದಾಗ ಅವರು ಗ್ರಾಹಕ ಎನಿಸಿಕೊಳ್ಳುತ್ತಾರೆ". ಮುಂದುವರೆದು "ಯಾರಿಗೆ ಅವಶ್ಯವಾದ ಸರಕು ಮತ್ತು ಮೂಲ ಸೇವಾ ಸೌಲಭ್ಯದ ಅವಶ್ಯಕತೆ ಇರುತ್ತದೆಯೋ ಅವರೆಲ್ಲ ಗ್ರಾಹಕತ್ವದ ಅಡಿಯಲ್ಲಿ ಬರುತ್ತಾರೆ. ಗ್ರಾಹಕ ಸಂರಕ್ಷಣೆ ಎಲ್ಲರಿಗಾಗಿ ಇರುತ್ತದೆ."

ಇ) ಉಡುಪಿ ಗ್ರಾಹಕ ವೇದಿಕೆಯ ಪ್ರಕಾರ "ಯಾರಿಗೆ ಸರಕು ಮತ್ತು ಸೇವೆಯನ್ನು ಪಡೆಯುವ ಹಕ್ಕಿರುತ್ತದೋ ಅವರೆಲ್ಲ ಗ್ರಾಹಕರು. ಅವನು/ಅವಳು ಈ ಹಕ್ಕುಗಳನ್ನು ಪರೋಕ್ಷವಾಗಿ ಅಥವಾ ಅಪರೋಕ್ಷವಾಗಿ ಬೆಲೆಯನ್ನು ಕೊಟ್ಟು ಪಡೆಯಬಹುದು".

ಈ) ಬಸ್ರುರ್ ಗ್ರಾಹಕ ವೇದಿಕೆ ಅನುಸಾರ "ಯಾರು ಬೆಲೆಯನ್ನು ಕೊಟ್ಟು ಸರಕು ಮತ್ತು ಸೇವೆಯನ್ನು ಖರೀದಿಸುತ್ತಾರೋ ಅವರು ಗ್ರಾಹಕ ಎನಿಸಿಕೊಳ್ಳುತ್ತಾರೆ ಮತ್ತು ಯಾರಿಗೆ ನೈಸರ್ಗಿಕವಾದ ಸರಕು ಮತ್ತು ಸೇವೆಯನ್ನು ಉಪಯೋಗಿಸುವ ಹಕ್ಕಿರುತ್ತದೆಯೋ ಅವರೆಲ್ಲ ಗ್ರಾಹಕರೆನಿಸಿಕೊಳ್ಳುತ್ತಾರೆ"

ಮೇಲಿನ ವ್ಯಾಕ್ಯಗಳ ಪ್ರಕಾರ ಎಲ್ಲರೂ, ಯಾರು ಸರಕನ್ನು ಕೊಳ್ಳುತ್ತಾರೊ, ಹಾಗೆ ಯಾರು ಸರ್ಕಾರ ಕಚೇರಿಯ ಸೇವೆಯನ್ನು ಕೊಳ್ಳುತ್ತಾರೊ, ಹಾಗೆ ಯಾರು ಸರ್ಕಾರ ಕಚೇರಿಯ ಸೇವೆಯನ್ನು ಪಡೆಯುತ್ತಾರೊ ಅವರೆಲ್ಲ ಗ್ರಾಹಕರೆ. ಅಂದರೆ ಸಾಮಾನ್ಯ ನಾಗರಿಕ ಕೂಡ ಗ್ರಾಹಕ ಎಂದಾಗುತ್ತದೆ. ಅವರೆಲ್ಲ ಸರ್ಕಾರಕ್ಕೆ ಕರವನ್ನು ಕೊಟ್ಟು ಸೇವೆಯನ್ನು ಪಡೆಯುತ್ತಾರೆ.

ಪ್ರತಿಯೊಬ್ಬ ಗ್ರಾಹಕನಿಗೆ ಸ್ವಚ್ಛವಾದ ಗಾಳಿ ಆರೋಗ್ಯಕರವಾದ ಪರಿಸರದ ಹಕ್ಕು ಇರುತ್ತದೆ. ಈ ಹಕ್ಕಿಗೆ ಅವನು ಬೆಲೆ ಕೊಡದಿದ್ದರೂ ಅವನು ಗ್ರಾಹಕನಾಗುತ್ತಾನೆ. ಆದ್ದರಿಂದ ತನ್ನನ್ನು ತಾನು ರಕ್ಷಿಸಿಕೊಳ್ಳುವ ಹಕ್ಕು ಅವನಿಗೆ ಇದೆ ಎಂದು ವಿಶ್ಲೇಷಿಸಿದ್ದಾರೆ.

ಗ್ರಾಹಕ ಎನ್ನುವ ಶಬ್ದ ನಾಗರಿಕ ಎನ್ನುವ ಅರ್ಥದೊಂದಿಗೆ ತಳಕು ಹಾಕಿಕೊಂಡಾಗ ನಾಗರಿಕನ ಎಲ್ಲ ಸಾಮಾಜಿಕ ಹಕ್ಕುಗಳು ಗ್ರಾಹಕನಿಗೆ ಅನ್ವಯಿಸುತ್ತವೆ. ಆದ್ದರಿಂದ ಗ್ರಾಹಕನ ಹಕ್ಕುಗಳಿಗೆ ಪರಿಮಿತಿ ಇರುವುದಿಲ್ಲ.[೬]

**೩.೩ ಸರಕು**

ಸರಕು ಮಾರಾಟ ಕಾಯ್ದೆ ೧೯೩೦ ರ ಪ್ರಕಾರ : ಸರಕು ಎಂದರೇ, ಎಲ್ಲಾ ರೀತಿಯ ಚರ ವಸ್ತುಗಳು, ದಾವೆಯಲ್ಲಿ ಹಕ್ಕು ಸಂಬಂಧಿಸತಕ್ಕ ವಸ್ತುಗಳು, ಮತ್ತು ಹಣದ ಹೊರತು, ಇದಲ್ಲದೆ ಷೇರು, ಮೂಲಧನ,ಬಂಡವಾಳ. ಭೂಮಿಯಲ್ಲಿ ಬೆಳೆಯುತ್ತಿರುವ ಧಾನ್ಯ, ಹುಲ್ಲು ಮತ್ತು ಭೂಮಿಗೆ ಸೇರಿದಂತಿದ್ದರೂ ಬೇರ್ಪಡಿಸಿ ಮಾರಾಟಕ್ಕೆ ಒಪ್ಪಿರುವಂತಹ ವಸ್ತುಗಳು.

**೩.೪ ಸೇವೆ**

ಸಂಭವನೀಯ ಬಳಕೆದಾರರಿಗೆ ಕೊಡಬಹುದಾದ ಯಾವುದೇ ತರಹ ವರ್ಣಿಸಬಹುದಾದ ಸೇವೆ, ಈ ಸೇವೆಯಲ್ಲಿ ಲೇವಾದೇವಿ ಹಣ ಚಲಾವಣೆ, ವಿಮೆ, ಸಾರಿಗೆ, ವಿದ್ಯುಚ್ಛಕ್ತಿ ಅಥವಾ ಬೇರೆ

ಶಕ್ತಿಯ ಸಂಸ್ಕರಣೆ ಮತ್ತು ಸರಬರಾಜು , ಊಟ ಅಥವಾ ವಸತಿ, ವಿವಿಧ ಮನರಂಜನೆ ಅಥವಾ ಸುದ್ದಿ ಇಲ್ಲವೆ ಸಮಾಚಾರ ಇವುಗಳನ್ನು ಒದಗಿಸುವುದು ಸೇರಿದೆ. ಆದರೆ ಪುಕ್ಕಟ್ಟೆ ಅಥವಾ ವ್ಯಯಕ್ತಿಕ ಕರಾರಿನ ಸೇವೆ ಇದರಲ್ಲಿ ಬರುವುದಿಲ್ಲ.[೭]

**೩.೫ ಗ್ರಾಹಕತ್ವ**

ಸರಕು ಸೇವೆಗಳನ್ನು ಪಡೆಯುವವನು ಗ್ರಾಹಕನಾಗುತ್ತಾನೆ. ಈ ಮೂಲಕ ಗ್ರಾಹಕ ಚಟುವಟಿಕೆಗಳಲ್ಲಿ ಅವನು ಭಾಗವಹಿಸುತ್ತಾನೆ. ತಾನು ಖರೀದಿಸುವ ಸರಕು ಸೇವೆಗಳಿಂದ ತೃಪ್ತಿ ದೊರೆತರೆ ಸಂತೋಷ ಪಡುತ್ತಾನೆ. ತಾನು ಕೊಟ್ಟ ಬೆಲೆಗೆ ತಕ್ಕುದಾದ ವಸ್ತು ಅಥವಾ ಸೇವೆಗಳು ದೊರಕದೆ ಯಾವುದೆ ರೀತಿಯ ಕೊರತೆ, ಅನ್ಯಾಯ, ವಂಚನೆಯಾಗಿದ್ದರೆ ಅದನ್ನು ಪ್ರತಿಭಟಿಸಬೇಕಾಗುತ್ತದೆ. ಹಾಗಾಗಿ ವ್ಯಕ್ತಿಗೆ ಯಾವುದೇ ಸರಕು ಅಥವಾ ಸೇವೆ ಖರೀದಿಸುವುದೇ ಮುಖ್ಯವಲ್ಲಾ. ಉತ್ತಮ ಸರಕು ಅಥವಾ ಸೇವೆಗಳು ನಿರೀಕ್ಷಿತ ಗುಣಮಟ್ಟದಲ್ಲಿರದಿದ್ದರೆ ಅವರ ವಿರುದ್ಧ ಕ್ರಮ ಜರುಗಿಸಬೇಕಾಗುತ್ತದೆ. ಬಹಳಷ್ಟು ಜನರು ಖರೀದಿಸಿದ ಸರಕು ಅಥವಾ ಸೇವೆ ಕೊರತೆಯಿಂದ ಕೂಡಿದ್ದರೂ ಪ್ರತಿರೋಧಿಸುವದಿಲ್ಲ ಇದು ಉತ್ತಮ ಗ್ರಾಹಕನ ಲಕ್ಷಣವಲ್ಲ.

"ಗ್ರಾಹಕ ತನ್ನ ವಿಷಯವಾಗಿ ನಿರಂತರವಾಗಿ ಕ್ರಿಯಾ ಶೀಲನಾಗಿರುವುದೇ ಗ್ರಾಹಕತ್ವ"

ಸರಕು ಅಥವಾ ಸೇವೆಯನ್ನು ಬೆಲೆ ಕೊಟ್ಟು ಖರೀದಿಸಿ ನಂತರ ಮರೆತು ಬಿಟ್ಟರೆ ಆತ ನಿಜವಾದ ಗ್ರಾಹಕ ಆಗುವುದಿಲ್ಲ. ಖರೀದಿಸಿದ ನಂತರ ಅದರ ಕುರಿತು ಯೋಚಿಸಿ ನಿರ್ಣಯಕ್ಕೆ ಬರುವ, ಕಾರ್ಯೋನ್ಮುಖವಾಗುವ ಪ್ರಕ್ರಿಯೆಗೆ ಗ್ರಾಹಕತ್ವ ಎನ್ನುತ್ತಾರೆ. ಗ್ರಾಹಕತ್ವ ಉತ್ತಮ ಗ್ರಾಹಕನ ನಿರಂತರ ಕ್ರಿಯೆಯ ಸಂಕೇತ. ಗ್ರಾಹಕತ್ವದ ಅರ್ಥ ವ್ಯಕ್ತಿಗೆ, ಸಮೂಹಕ್ಕೆ ಹಾಗೂ ಸಮಾಜಕ್ಕೆ ಒಂದೇ ಅರ್ಥಕೊಡುತ್ತದೆ.

ಗ್ರಾಹಕತ್ವದ ಅರ್ಥ ಅದನ್ನು ವ್ಯಾಖ್ಯಾನಿಸುವ ತಜ್ಞರ ಮೇಲೆ ಅವಲಂಭಿತವಾಗಿರುತ್ತದೆ. ಗ್ರಾಹಕತ್ವದ ಕುರಿತು ಹಲವಾರು ಅರ್ಥಗಳಿವೆ. ಗ್ರಾಹಕತ್ವ ಎನ್ನುವ ಪದ ಇತ್ತೇಚಿಗೆ ಹುಟ್ಟಿ ಬೆಳೆದು ಬಂದುದರಿಂದ ಬೇರೆ ಬೇರೆ ಅಭಿಪ್ರಾಯಗಳ ಅರ್ಥವನ್ನು ಅದು ಒಳಗೊಂಡಿದೆ. ಹಾಗೆಯೇ ಕಾಲಕಾಲಕ್ಕೆ ಅದರ ಅರ್ಥ ಬದಲಾಗುತ್ತ ಹೋಗುತ್ತದೆ.

ಗ್ರಾಹಕತ್ವದ ಪದದ ಅರ್ಥವನ್ನು ಎರಡು ರೀತಿಯಲ್ಲಿ ಎರಡು ಅರ್ಥ ಬರುವಂತೆ ವ್ಯಾಖ್ಯಾನಿಸಬಹುದು.

ಮೊದಲನೆಯ ಅರ್ಥವು ಆಕ್ಸಪರ್ಡ ಇಂಗ್ಲೀಷ ಡಿಕ್ಸನರಿಯಿಂದ ಬಂದ "ಗ್ರಾಹಕತ್ವ ಎಂದರೆ ಗ್ರಾಹಕನ ಹಿತಾಸಕ್ತಿ ರಕ್ಷಿಸುವುದು, ಎರಡನೆಯ ಅರ್ಥವು "ಗ್ರಾಹಕತ್ವ ಎಂದರೆ ಅತಿರೇಕದ

ವಾಸ್ತವವಾದ" ಈ ಎರಡು ಪದಗಳ ಅರ್ಥ ಅತ್ಯಂತ ವಿಶಾಲವಾದುದು. ಹೇಗೆಂದರೆ ಮೊದಲನೆಯ ಅರ್ಥದಲ್ಲಿ ಗ್ರಾಹಕ ಹಿತಾಸಕ್ತಿಯು ಇದ್ದರೆ ಎರಡನೇ ಅರ್ಥದಲ್ಲಿ ಗ್ರಾಹಕತ್ವ, ಗ್ರಾಹಕ ಸರಕು ಖರೀದಿಯನ್ನು ಒಳಗೊಂಡಿದೆ.

ಗ್ರಾಹಕ ಚಳುವಳಿಗೆ ಹೋಲಿಸಿದರೆ ಗ್ರಾಹಕತ್ವ ಇತ್ತೀಚಿಗೆ ಟಂಕಿಸಲಾದ ಪದ, ಗ್ರಾಹಕ ಚಳುವಳಿಗೆ ಶತಮಾನದ ಇತಿಹಾಸ ಇದ್ದರೆ ಗ್ರಾಹಕತ್ವದ ಚಿಂತನೆ ಇತ್ತೀಚಿನದು.

೧. ರೋಗರ್ ಮತ್ತು ಸ್ವಗ್ಲರ್ ಬರೆದಂತೆ "ಗ್ರಾಹಕತ್ವ" ಪದವನ್ನು ಗ್ರಾಹಕ ಚಳುವಳಿಗೆ ಜೋಡಿಸಿ ಹೇಳಲು ಸಾಧ್ಯವಾಗದಿದ್ದರೂ ೧೯೬೫-೬೬ರ ಅವಧಿಯಲ್ಲಿ ಈ ಒಂದು ಶಬ್ದವನ್ನು ಮಾತನಾಡುವಾಗ ಉಪಯೋಗಿಸಲಾಗುತ್ತಿತ್ತು. ಮುಂದುವರೆದು "ಗ್ರಾಹಕತ್ವ" ಶಬ್ದದ ಉಪಯೋಗದ ಕುರಿತು ಯಾವುದೇ ಪುರಾವೆ ಇಲ್ಲದಿದ್ದರೂ 'ದ ನಿವ್ ರಿಪಬ್ಲಿಕ' ಎನ್ನುವ ಮಾಸಿಕದಲ್ಲಿ "ಎಡ್ವರ್ಟಾಯಿಸಿಂಗ್ ಏಜ್" ಎನ್ನುವ ಲೇಖನದಲ್ಲಿ ಗ್ರಾಹಕತ್ವದ ಉಲ್ಲೇಖವಿದೆ. ಈ ಲೇಖನದಲ್ಲಿ "ಪರನೇಸ್ ರೂಲ್ ಹ್ಯಾಜ ಎಟ್ ಟು ಅನಹೊಲ್ಡ, ಬಟ್ ಓಲ್ಡ್ ಆರ್ಡರ್ ಇನ್ ಕಂಜುಮರಿಸಂ ಇಜ ಚೆಂಜಿಂಗ" ಎಂದಿದೆ. ಗ್ರಾಹಕತ್ವದ ಶಬ್ದ ೧೯೭೦ ರ ನಂತರ ವೇಗವಾಗಿ ಹರಡಲಾರಂಭಿಸಿತು

೨. ಜುಸ್ಕಿರ್ಕ ಮತ್ತು ರೂಥೆರ ವ್ಯಾಖ್ಯೆಯಂತೆ : "ಗ್ರಾಹಕತ್ವ ಒಂದು ಗ್ರಾಹಕರ ಸಹಕಾರ ಪ್ರಯತ್ನವಾಗಿ, ಅವರು ಜೀವನ ನಡೆಸುವಲ್ಲಿ ಅಸಂತುಷ್ಟರಾದಾಗ, ಅವರನ್ನು ಸುಧಾರಿಸುವಲ್ಲಿ ನಷ್ಟ ತುಂಬಿಕೊಡುವಲ್ಲಿ, ಪರಿಹಾರ ಪಡೆಯಲೆತ್ನಿಸುತ್ತದೆ"

೩ ಜೆಮ್. ಎಫ್, ಇಗ್ನಲ್ ಹಾಗೂ ಇತರರು ಕೊಟ್ಟಂಥ ವ್ಯವಹಾರ ಅರ್ಥದಂತೆ "ಕೊಡಕೊಳ್ಳುವ ಸಂಬಂದದಲ್ಲಿ ಗ್ರಾಹಕರ, ಸಭ್ಯ ಬೇಡಿಕೆಗಳಿಗೆ ಸ್ಪಂದಿಸಲು ವಾಣಿಜ್ಯ ಹಾಗೂ ಇತರ ಸಂಸ್ಥೆಗಳು ಸೋತಾಗ ಗ್ರಾಹಕತ್ವ ಉದ್ಭವವಾಗುತ್ತದೆ"

೪. ಫಜಲ್‌ರ ಪ್ರಕಾರ "ಕೊಡಕೊಳ್ಳುವ ಹಾದಿಯಲ್ಲಿ ಉತ್ತಮ ವ್ಯವಹಾರಕ್ಕೆ ಮೋಸದ ವಿರುದ್ದ ಹೋರಾಡಲು, ಸಾಮಾಜಿಕವಾದ ಚಳುವಳಿಯನ್ನು ಗ್ರಾಹಕರು ಗುಂಪಾಗಿ ಏರ್ಪಡಿಸುವುದಕ್ಕೆ ಗ್ರಾಹಕತ್ವ ಎನ್ನುತ್ತಾರೆ".

ಮೇಲಿನ ಎಲ್ಲ ಅರ್ಥಗಳನ್ನು ವಿಶ್ಲೇಷಿಸಿದಾಗ ಒಂದು ವಿಷಯ ತಿಳಿಯುತ್ತದೆ. ಗ್ರಾಹಕತ್ವದ ಮಹತ್ವ ಏನೆಂದರೆ ಗ್ರಾಹಕನ ಹಿತಾಸಕ್ತಿಯನ್ನು ಕಾಪಾಡುವುದು.

೫. ೧೯೮೯ ರಲ್ಲಿ ಆಕ್ಸಫರ್ಡ ಡಿಕ್ಸನರಿಯಲ್ಲಿರುವ ಎರಡನೆಯ ಅರ್ಥ "ಸ್ವಸ್ಥ ಆರ್ಥಿಕತೆಗೆ ಬೇಕಾದ ಸರಕಿನ ಉಪಭೋಗತೆ ಧಾರಾಕಾರವಾಗಿ ಹೆಚ್ಚುತ್ತಿರುವ ತತ್ವ ಪ್ರತಿಪಾದನೆಗೆ

ಗ್ರಾಹಕತ್ವ ಎನ್ನುತ್ತಾರೆ". ಗ್ರಾಹಕತ್ವವನ್ನು ನಮ್ಮ ಜೀವನದ ಚಟುವಟಿಕೆಯಲ್ಲಿ ಗ್ರಾಹಕರ ಹಿತಾಸಕ್ತಿಯನ್ನು ಸಂರಕ್ಷಿಸುವ ಅಂಶವಾಗಿ ಪರಿಗಣಿಸುವುದಕ್ಕಿಂತ ಮುನ್ನ ಅದನ್ನು ಈ ಮೇಲಿನ ರೀತಿಯಲ್ಲಿ ವರ್ಣಿಸಿ ಉಪಯೋಗಿಸುತ್ತಿದ್ದರು.

೬. ೧೯೬೦ ರಲ್ಲಿ ಉತ್ತಮ ಮಾರಾಟಗಾರ ವನ್ಸೆಪಾಕರ್ಡ ತನ್ನ ಪುಸ್ತಕ "ದ ವೆಸ್ಟ ಮೇಕರ್" ದಲ್ಲಿ ರೋಚಕ ವ್ಯಾಪಾರಿ ಜನರ ಕುರಿತು ಬರೆಯುತ್ತ "ವ್ಯಾಪಾರಿ ಜನ ಎಂದರೆ ಗ್ರಾಹಕತ್ವದ ಅಡಿಯಲ್ಲಿ ಕೊನೆಯಿಲ್ಲದ ಮಾನವನ ಬೇಡಿಕೆಗಳ ಸಾಧ್ಯತೆಗಳ ಬಗ್ಗೆ ಒಂದು ನೋಟವನ್ನು ಬೀರುವವರು" ಎಂದು ವಿವರಿಸಿದ್ದಾರೆ.

ಈ ಮೇಲಿನ ಅರ್ಥದಲ್ಲಿ ವ್ಯಾಪಾರಿ ಜನರ ಕುರಿತು ವಿವರಿಸುವಾಗ ಗ್ರಾಹಕತ್ವಕ್ಕೆ ಅವರು ಕೊಡುವ ಬೆಲೆಯನ್ನು ಕಂಡುಕೊಳ್ಳಬಹುದು. ಗ್ರಾಹಕತ್ವ ಇಲ್ಲಿ ಕೇವಲ ವಾಸ್ತವತೆಯಾದ ಬೇಡಿಕೆಗೆ ಸಂಬಂಧಿಸಿದ ಒಂದು ಕಾರ್ಯ. ಗ್ರಾಹಕತ್ವಕ್ಕೂ ಗ್ರಾಹಕರ ಹಿತರಕ್ಷಣೆಗೂ ಯಾವುದೇ ಸಂಬಂಧವಿಲ್ಲ ಎಂದು ನಿರೂಪಿಸುತ್ತದೆ.

೭. ಗ್ರಾಹಕತ್ವದ ಕುರಿತು ಬರುವ ಇನ್ನೊಂದು ವ್ಯಾಖ್ಯೆಯನ್ನು ಪರಿಶೀಲಿಸೋಣ. ಗ್ರಾಹಕತ್ವ ಅತಿರೇಕದ ವಾಸ್ತವದ ಅರ್ಥ ಪೊಪ ಜಾನ್ ಪಾಲ ೧ ರವರಿಗೆ ಸಂಬಂಧಿಸಿದ್ದು. ಇದು ಪೊಪ ಜಾನ ಪಾಲ್ ರವರು ೧೯೯೧ ರಲ್ಲಿ, ೧೦೦ ನೇ ವಾರ್ಷಿಕೋತ್ಸವದಲ್ಲಿ ಎಲ್ಲ ಬಿಷಪರಿಗೆ ಬರೆದ ಪತ್ರದಲ್ಲಿ ಕಾಣಿಸಿಕೊಂಡಿದೆ. ಈ ಪತ್ರದಲ್ಲಿ ಮಾರುಕಟ್ಟೆ ಸೌಕರ್ಯಗಳ ಕುರಿತು ಉಲ್ಲೇಖವಿದೆ. ಪೊಪರು ಗ್ರಾಹಕತ್ವದ ಕುರಿತು ಎಚ್ಚರಿಸಿದ್ದಾರೆ. ಬಂಡವಾಳಶಾಹಿ ವಿಪರೀತವಾಗಬಾರದು. ಅದು ಜೀವನ ಸೌಕರ್ಯಕ್ಕೆ ಪೂರಕವಾಗಿರಬೇಕು ಎಂದಿದ್ದಾರೆ. "ನಿವ್ಸವೀಕ್ ವರದಿಯಲ್ಲಿ" ಪೌಲ್‌ರ ಪತ್ರದಲ್ಲಿರುವ ಪೋಪರ ಎಚ್ಚರಿಕೆಯನ್ನು ವಿಶ್ಲೇಷಿಸುವಾಗ ಗ್ರಾಹಕತ್ವದ ಅರ್ಥವನ್ನು ವಿವರಿಸಲಾಗಿದೆ. "ಗ್ರಾಹಕತ್ವ ಕಮ್ಯುನಿಸನಂತೆ ಹೃದಯಹೀನವಾಗಿದೆ". ಈ ಲೇಖನ ಮುಂದುವರೆದು, ನಿರ್ಬಂಧಿಸಲಾಗದ ಗ್ರಾಹಕತ್ವದ ಶೋಷಣೆಯ ಕುರಿತು ವಿವರಿಸಿದೆ.

೮. ಸ್ವೆಗ್ಲರ್ ಮತ್ತು ಕೊಂಜ ಗ್ರಾಹಕತ್ವದ ಅರ್ಥವನ್ನು ಹೀಗೆ ಕೊಟ್ಟಿದ್ದಾರೆ "ಗ್ರಾಹಕತ್ವ ಒಂದು ರಭಸ. ಇದು ಕುಟುಂಬದ ವೇಳೆಯನ್ನು ನೆರೆಹೊರೆಯ ಸಂಬಂಧವನ್ನು ಮತ್ತು ಸಾರ್ವಜನಿಕ ಒಕ್ಕಟ್ಟನ್ನು ತಿಂದು ಹಾಕುತ್ತದೆ." ಮೇಲಿನ ಗ್ರಾಹಕತ್ವದ ಎರಡು ಅರ್ಥಗಳಲ್ಲಿ ಮೊದಲನೆಯ ಅರ್ಥ ಗ್ರಾಹಕತ್ವ ಅಂದರೆ ಗ್ರಾಹಕನ ಹಿತಾಸಕ್ತಿ ರಕ್ಷಿಸುವುದು. ಎರಡನೆಯದು ಗ್ರಾಹಕತ್ವ, ಅತಿರೇಕದ ವಾಸ್ತುವವಾದ. ಮೊದಲನೆಯ ವ್ಯಾಖ್ಯಾನವೇ ಹೆಚ್ಚು ಅರ್ಥಪೂರ್ಣ.

ಗ್ರಾಹಕತ್ವವೆಂದರೆ ಗ್ರಾಹಕನ ಸಂರಕ್ಷಣೆಗೆ ಮಹತ್ವ ಕೊಡುವ ಹಾಗೂ ಹೆಚ್ಚಾಗಿ ಜನಪ್ರೀಯವಾಗಿರುವ ಅರ್ಥ. ಹಲವಾರು ತಜ್ಞರು ಎರಡನೆಯ ಅರ್ಥವನ್ನು ಗ್ರಾಹಕನಿಗೆ ವಿರುದ್ದವಾಗಿರುವ ಅಂಶಗಳನ್ನು ವಿಶ್ಲೇಷಿಸಿ ಎರಡನೇ ವ್ಯಾಖ್ಯೆ ತಪ್ಪು ಅರ್ಥ ಗ್ರಹಿಕೆಯ, ತಪ್ಪಾಗಿ ಉಪಯೋಗಿಸುವ ಅಂಶಗಳನ್ನು ಹೊರಗೆಡವಿದ್ದಾರೆ.

ಈ ಸಂಶೋಧನೆಯ ಅಂಶವಾಗಿ ಗ್ರಾಹಕತ್ವ ಎಂದರೆ ಗ್ರಾಹಕನ ಹಿತರಕ್ಷಣೆ ಬಯಸುವ ಸರಕು ಅಥವಾ ಸೇವೆಯನ್ನು ಬೆಲೆ ಕೊಟ್ಟು ಖರೀದಿಸಿ ನಂತರ ಅದನ್ನು ಮರೆಯದೆ ಅದರ ಕುರಿತು ನಿರಂತರವಾಗಿ ಯೋಚಿಸಿ ಅನ್ಯಾಯದ ವಿರುದ್ಧ ಕಾರ್ಯೋನ್ಮುಖನಾಗುವುದಕ್ಕೆ ಗ್ರಾಹಕತ್ವ ಎನ್ನುವರು ಎಂದು ಪರಿಗಣಿಸಬೇಕು.[೮]

**೩.೬ ಗ್ರಾಹಕ ಸಂರಕ್ಷಣೆ**

ಗ್ರಾಹಕ ಸಂರಕ್ಷಣೆ ಎಂದರೆ" ಗ್ರಾಹಕನ ಹಿತರಕ್ಷಣೆ ಅಥವಾ ಗ್ರಾಹಕನ ಪೂರ್ಣ ರಕ್ಷಣೆ ಎಂದರ್ಥ".

ಗ್ರಾಹಕನಿಗೆ ಅಪಾಯ ಒದಗಿದರೆ ಅವನನ್ನು ರಕ್ಷಿಸುವುದು. ಈ ಅಪಾಯವು ಸ್ವಯಂಕೃತವಾಗಿರಲಿ ಅಥವಾ ಅನ್ಯರೂಪದಲ್ಲಿ ಆಗುವ ಘಟನೆಯಾಗಿರಬಹುದು. ಗ್ರಾಹಕನಿಗೆ ಎದುರಾಗುವ ಮೋಸ ವಂಚನೆ ಅಲ್ಲದೆ ಕೊರತೆ ಮುಂತಾದವುಗಳು ಈ ಎಲ್ಲ ಅನ್ಯಾಯಗಳ ವಿರುದ್ಧ ರಕ್ಷಣೆ ಕೊಡುವುದು, ಅವನ ನೆರವಿಗೆ ಬರುವುದು, ಅಲ್ಲದೆ ಗ್ರಾಹಕನ ಹಿತವನ್ನು ಕಾಯುವುದು ಮೇಲಿನ ಅರ್ಥದಲ್ಲಿದೆ. ಗ್ರಾಹಕ ಸಂರಕ್ಷಣೆಯನ್ನು ಇನ್ನೂ ವಿವರವಾಗಿ ಈ ಕೆಳಗಿನಂತೆ ವಿವರಿಸಬಹುದು.

- ಗ್ರಾಹಕನಿಗಾಗುವ ಅನ್ಯಾಯದ ವಿರುದ್ಧ ಮಾಹಿತಿ ನೀಡುವುದು.
- ಗ್ರಾಹಕನಿಗೆ ಅನ್ಯಾಯದ ಬಗ್ಗೆ ಶಿಕ್ಷಣ/ಜಾಗೃತಿ ನೀಡುವುದು.
- ಅಪಾಯಕಾರಿ ವಸ್ತುಗಳ ತಯಾರಿಕೆ, ವಿತರಣೆ ಮತ್ತು ಮಾರಾಟವನ್ನು ತಡೆಗಟ್ಟುವುದು.
- ಅನುಚಿತ ವ್ಯವಹಾರ ಪದ್ಧತಿಯನ್ನು ತಪ್ಪಿಸುವುದು.
- ನಿರ್ಬಂಧಿತ ವ್ಯವಹಾರ ಪದ್ದತಿಯ ವಿರುದ್ಧ ಕ್ರಮಕೈಗೊಳ್ಳುವುದು.
- ಅಗತ್ಯ ಆಹಾರ ಪದಾರ್ಥಗಳು ಮತ್ತು ವಸ್ತುಗಳು ಅಡಚಣೆಯಿಲ್ಲದೆ ಬಳಕೆದಾರರಿಗೆ ಸರಬರಾಜು ಆಗುವಂತೆ ನೋಡಿಕೊಳ್ಳುವುದು.
- ಪದಾರ್ಥಗಳ ವಸ್ತುಗಳ ಮತ್ತು ಸೇವೆಗಳ ಗುಣಮಟ್ಟವನ್ನು ನಿಯಂತ್ರಿಸುವುದು.

• ತಯಾರಕರ ನಡುವಿನ ಸ್ಪರ್ಧೆ ಬಳಕೆದಾರರಿಗೆ ಹಾನಿಯಾಗದಂತೆ ನೋಡಿಕೊಳ್ಳುವುದು.

• ಬಳಕೆದಾರರಿಗೆ ಶಿಕ್ಷಣ ಒದಗಿಸುವುದು ಅವರ ಹಕ್ಕುಗಳಿಗೆ ಚ್ಯುತಿ ಆಗದಂತೆ ನೋಡಿಕೊಳ್ಳುವುದು.

ಆಧುನಿಕ ಸಮಾಜದಲ್ಲಿ ಸರಕುಗಳನ್ನು ಉಪಯೋಗಿಸದೆ ಜೀವನ ಸಾಗಿಸುವುದು ಕಲ್ಪನೆ ಮಾಡಿಕೊಳ್ಳುವುದು ಕೂಡ ಅಸಾಧ್ಯ ಉಪಭೋಗ್ಯ ಮನುಷ್ಯನಷ್ಟೇ ಹಳೆಯದು.[೯]

### ೩.೬.೧ ಸ್ವಾತಂತ್ರ ನಂತರದ ಗ್ರಾಹಕ ಸಂರಕ್ಷಣೆ

ಭಾರತದೇಶ ಸ್ವಾತಂತ್ರವಾದ ನಂತರ ಅದರ ಮುಂದಿನ ಗುರಿ ಸಮಾಜವಾದಿ ಮಾದರಿಯ ಸಮಾಜ ನಿರ್ಮಾಣವಾಗಿತ್ತು. ದೇಶದ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಯೋಜನೆಗಳನ್ನು ಹಾಕಿಕೊಳ್ಳಬೇಕಾಗಿತ್ತು. ದೇಶದಲ್ಲಿ ಬಡತನ ನಿವಾರಣೆ, ಕೃಷಿಯಲ್ಲಿ ಆಧುನಿಕ ಪದ್ಧತಿ ಅಳವಡಿಕೆ, ನಿರುದ್ಯೋಗ ಸಮಸ್ಯೆ ನಿವಾರಣೆ, ಅಸಮಾನತೆಯನ್ನು ಹೊಡೆದೋಡಿಸುವುದು, ಮುಂತಾದವುಗಳ ಕುರಿತು ಲಕ್ಷಕೊಡಬೇಕಾಗಿತ್ತು. ಈ ನಿಟ್ಟಿನಲ್ಲಿ ದೇಶದ ಕೈಗಾರಿಕಾ ಬೆಳವಣಿಗೆಗೆ ಒತ್ತುಕೊಡಬೇಕಾಗಿತ್ತು. ಆಗ ಗ್ರಾಹಕ ಸಂರಕ್ಷಣೆಯಂಥ ವಿಷಯಗಳ ಕಡೆಗೆ ಗಮನ ಹರಿಸಲು ಸಾಧ್ಯವಾಗಲಿಲ್ಲ.

ಈ ಒಂದು ಹಂತದಲ್ಲಿ ಸರ್ಕಾರಗಳು ಮಹತ್ವದ ಪಾತ್ರ ವಹಿಸಿ ಜನರಿಗೆ ಸರಕುಗಳನ್ನೂ ಸೇವೆಯನ್ನೂ ಒದಗಿಸಲಾರಂಭಿಸಿದವು. ಆದ್ದರಿಂದ ವ್ಯಾಪಾರಿ ಪ್ರತಿಬಂಧಕದ ಚಟುವಟಿಕೆಗಳ ಮಾತೇ ಇರಲಿಲ್ಲ. ಆದರೆ ಖಾಸಗಿ ಒಡೆತನದ ವ್ಯಾಪಾರಿಗಳು ಗ್ರಾಹಕರ ಮೇಲೆ ಒತ್ತಡ ತರುವ ವಾತಾವರಣವನ್ನು ತರಲಾರಂಭಿಸಿದರು. ದೊಡ್ಡ ಕಂಪನಿಗಳು ಒಂದರಲ್ಲಿ ಇನ್ನೊಂದು ವಿಲೀನವಾಗಿ ವಿದೇಶಿ ಕಂಪನಿಗಳ ಅನುಪಸ್ಥಿತಿಯನ್ನು ಉಪಯೋಗ ಮಾಡಿಕೊಂಡು, ಸ್ವದೇಶದ ಸ್ಪರ್ಧೆಯನ್ನು ತಪ್ಪಿಸಿಕೊಂಡು, ಮಾರುಕಟ್ಟೆಯ ಉಪಯೋಗ ಪಡೆದು, ಗ್ರಾಹಕರನ್ನು ಶೋಷಿಸತೊಡಗಿದ್ದರು. ಹಲವಾರು ವ್ಯಾಪಾರಸ್ಥರು ಕೃತಕ ಅಭಾವವನ್ನು ಸೃಷ್ಟಿಸಿ ತಮ್ಮ ಸರಕಿಗೆ ಹೆಚ್ಚಿನ ಬೇಡಿಕೆಯನ್ನು ಸೃಷ್ಟಿಸತೊಡಗಿದರು. ವಿದೇಶಿ ಹೊಂದಾಣಿಕೆಯ ಒಡಂಬಡಿಕೆಗೆ ಸರ್ಕಾರದ ಕಾರ್ಯನೀತಿಯಲ್ಲಿ ಹಸ್ತಕ್ಷೇಪ ಮಾಡಿ ತಮ್ಮ ಒಳತಿಗಾಗಿ ತೆರಿಗೆ ದರಗಳನ್ನು ಇತರ ಸವಲತ್ತುಗಳನ್ನು ತಮ್ಮಂತೆ ಮಾಡಿಕೊಳ್ಳತೊಡಗಿದರು. ಹಣಕಾಸು ಸಂಸ್ಥೆಗಳ ಮೇಲೆ ಕೂಡ ಶೋಷಣೆ ಪ್ರಾರಂಭಿಸಿ, ಸ್ವಾಮ್ಯದ ಹಕ್ಕನ್ನು ಸಾಧಿಸುತ್ತ, ನಿರ್ಬಂಧಿತ ವ್ಯಾಪಾರಿ ಪದ್ಧತಿಯ ಮೇಲೆ ಹಿಡಿತ ಸಾಧಿಸತೊಡಗಿದರು.[೧೦]
ಸ್ವತಂತ್ರ ನಂತರ, ಗ್ರಾಹಕರನ್ನು ರಕ್ಷಿಸಲು ಹಲವಾರು ಶಾಸನಗಳನ್ನು ತರಲಾಯಿತು. ಅವುಗಳು:-

೧. ಆಹಾರ ಸಂರಕ್ಷಣೆ ಮತ್ತು ವರ್ಗೀಕರಣ ಕಾಯ್ದೆ – ೨೦೦೬.

೨. ಅಪಾಯದ ಯಂತ್ರದ ಬಳಕೆಯ ಕಾಯ್ದೆ.

೩. ಆಹಾರ ಕಲಬೆರಕೆ ಕಾಯದೆ – ೧೯೫೪.

೪. ಔಷಧಗಳು ಮತ್ತು ತಂತ್ರ ಪರಿಹಾರಿಕೆ ಕಾಯ್ದೆ –೧೯೫೪.

೫. ಅಗತ್ಯ ವಸ್ತುಗಳ ಕಾಯದೆ – ೧೯೫೫.

೬. ವ್ಯಾಪಾರ ಮತ್ತು ವಾಣಿಜ್ಯ ಸರಕು ಗುರುತಿಸುವಿಕೆ ಕಾಯ್ದೆ – ೧೯೫೮.

೭. ಏಕಸಾಮ್ಯ ಮತ್ತು ನಿರ್ಭಂದಿತ ವ್ಯವಹಾರ ಪದ್ಧತಿ ಕಾಯ್ದೆ – ೧೯೫೯.

೮. ಬಾಡಿಗೆ ಖರೀದಿಸುವ ಕಾಯ್ದೆ – ೧೯೭೨.

೯. ನೀರು ಕಾಯ್ದೆ ೧೯೭೪.

೧೦. ತೂಕ ಮತ್ತು ಅಳತೆ ಕಾಯ್ದೆ – ೧೯೭೬.

೧೧. ಅಗತ್ಯ ವಸ್ತುಗಳ ಸರಬರಾಜು ನಿರ್ವಹಣೆ ಮತ್ತು ಕಾಳಸಂತೆ ಪ್ರತಿಬಂಧಕ ಕಾಯ್ದೆ – ೧೯೮೩.

೧೨. ವಾಯು ಕಾಯ್ದೆ – ೧೯೮೧.

೧೩. ಪರಿಸರ ಸಂರಕ್ಷಣಾ ಕಾಯ್ದೆ – ೧೯೮೬.

೧೪. ಭಾರತೀಯ ಕಾನೂನು ಮಾಪನ ಕಾಯ್ದೆ ೧೯೮೬.

೧೫. ರೈಲ್ವೆ ಹಕ್ಕು ಸಾಧನೆ ನ್ಯಾಯಮಂಡಳಿ ಕಾಯ್ದೆ – ೧೯೮೪.

ಈ ಎಲ್ಲ ಕಾಯ್ದೆಗಳ ಜೊತೆಗೆ ದೇಶದ ಆರ್ಥಿಕ ಸಂಪತ್ತಿನ ಕೇಂದ್ರೀಕರಣದ ಕಡೆಗೆ ಗಮನ ಕೊಡಬೇಕಾಗಿತ್ತು. ಹಜಾರೆ ಕಮೀಟಿ ಮತ್ತು ದತ್ತ ಕಮೀಟಿಗಳನ್ನು ನೇಮಿಸಿ ಕೈಗಾರಿಕಾ ಯೋಜನೆ ಮತ್ತು ಅನುಮತಿ ಪದ್ಧತಿಗಳನ್ನು ಪರಿಶೀಲಿಸಲು ಸೂಚಿಸಿತು. ಈ ಎರಡು ಕಮೀಟಿಗಳ ವರದಿಯ ಪ್ರಕಾರ ಭಾರತದಲ್ಲಿ ಆರ್ಥಿಕ ಸಂಪತ್ತಿನ ಕೇಂದ್ರೀಕರಣ ದೊಡ್ಡದಾಗಿರುವುದಾಗಿ ತಿಳಿದು ಬಂತು. ತಜ್ಞರ ಸೂಚನೆಗಳ ಮೇರೆಗೆ ೧೯೬೯ ರಲ್ಲಿ ಏಕಸಾಮ್ಯ ಮತ್ತು ನಿರ್ಬಂಧಿತ ವ್ಯಾಪಾರಿ ಪದ್ಧತಿ ಕಾಯ್ದೆಯನ್ನು ಸುಧಾರಿಸಲಾಯಿತು. ೧೯೫೬ ರಲ್ಲಿ ಜೀವ ವಿಮಾ ನಿಗಮವನ್ನು ಮತ್ತು ೧೯೭೦ ರಲ್ಲಿ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಿದ್ದು ಗ್ರಾಹಕ ಸಂರಕ್ಷಣೆಗೆ ಒಂದು ಮೈಲುಗಲ್ಲು ಆಯಿತು.

**೩.೬.೨ ಅಂತರಾಷ್ಟ್ರೀಯ ಬೆಳವಣಿಗೆ**

ಎ) ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಗ್ರಾಹಕ ಹಿತರಕ್ಷಣೆಗೆ ಮಾರ್ಗಸೂಚಿಗಳನ್ನು ೯ ಎಪ್ರೀಲ್ ೧೯೮೫ ರಲ್ಲಿ ಹೊರಡಿಸಲಾಯಿತು. ಈ ಮಾರ್ಗಸೂಚಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಸರ್ಕಾರಗಳು ಗ್ರಾಹಕ ರಕ್ಷಣೆಗೆ ಪಾಲಿಸಿಗಳನ್ನು ಮತ್ತು ಶಾಸನಗಳನ್ನು ಯಾವ ರೀತಿ ರೂಪಿಸಬೇಕು ಎನ್ನುವುದನ್ನು ತಿಳಿಸಲಾಗಿದೆ. ಮಾರ್ಗಸೂಚಿಯ ಪ್ರಮುಖ ಉದ್ದೇಶಗಳು:

೧. ಗ್ರಾಹಕರ ಸಂರಕ್ಷಣೆಯನ್ನು ಕಾಪಾಡುವಲ್ಲಿ ದೇಶಗಳಿಗೆ ಸಹಾಯ ಮಾಡುವುದು

೨. ಗ್ರಾಹಕರ ಅವಶ್ಯಕತೆಗೆ ತಕ್ಕಂತೆ ಉತ್ಪಾದನೆ ಮತ್ತು ಹಂಚಿಕೆಯ ವ್ಯವಸ್ಥೆಗೆ ಸಹಾಯ ಒದಗಿಸುವುದು

೩. ಉತ್ಪಾದನೆ ಮತ್ತು ಹಂಚಿಕೆಗಳಲ್ಲಿರುವ ಜನರ ಪ್ರಮಾಣಿಕ ವರ್ತನೆಯನ್ನು ಹುರಿದುಂಬಿಸುವುದು

೪. ಗ್ರಾಹಕರ ಹಿತಕ್ಕೆ ಮಾರಕವಾಗುವಂತಹ ಅನುಚಿತ ವ್ಯಾಪಾರ ಪದ್ಧತಿಗಳನ್ನು ಹೊಡೆದು ಹಾಕಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ದೇಶಗಳಿಗೆ ಸಹಾಯ ಮಾಡುವುದು

೫. ಪ್ರತ್ಯೇಕ ಗ್ರಾಹಕ ಸಂಘಗಳಿಗೆ ಅಭಿವೃದ್ಧಿಗೆ ಸಹಾಯ ಮಾಡುವುದು

೬. ಪ್ರತ್ಯೇಕ ರಾಷ್ಟ್ರೀಯ ಸ್ಥರದಲ್ಲಿ ಗ್ರಾಹಕ ರಕ್ಷಣೆಗೆ ಸಹಾಯ ಮಾಡುವುದು

೭. ಗ್ರಾಹಕರ ಆಯ್ಕೆಗೆ ಆದ್ಯತೆ ನೀಡಿ ಕಡಿಮೆ ದರದಲ್ಲಿ ಸರಕನ್ನು ಖರೀದಿಸಲು ಅನುಕೂಲ ಆಗುವಂತೆ ಮಾರುಕಟ್ಟೆಯ ವ್ಯವಸ್ಥೆಯನ್ನು ಸುಧಾರಿಸುವುದು

ಬಿ) ೧೯೮೧ ರಲ್ಲಿ ಡಬ್ಲ್ಯೂ ಎಚ್.ಓ ಬಿಡುಗಡೆ ಮಾಡಿದ ಎದೆಹಾಲಿನ ಬದಲಾಗಿ ಮಾರಾಟ ಮಾಡುವ ಆಹಾರ ಪದಾರ್ಥಗಳ ಅಂತರಾಷ್ಟ್ರೀಯ ಚಿಹ್ನೆ ಒಂದು ಮೈಲುಗಲ್ಲಾಯಿತು.

ಸಿ) ಕೀಟನಾಶಕಗಳ ವಿತರಣೆ ಮತ್ತು ಉಪಯೋಗದ ಅಂತರರಾಷ್ಟ್ರೀಯ ಚಿಹ್ನೆಯನ್ನು ೧೯೮೫ ರಲ್ಲಿ ಬಿಡುಗಡೆಮಾಡಿತು.[೧೨]

**ಅಮೇರಿಕಾ ಸಂಯುಕ್ತ ಸಂಸ್ಥಾನ ಮತ್ತು ಗ್ರಾಹಕ ಸಂರಕ್ಷಣೆ**

೧೮೯೦ರಲ್ಲಿ ವಿಶ್ವಸ್ಥ ಸಮಿತಿ ಪ್ರತಿಕೂಲ ಕಾನೂನನ್ನು ಶೇರಮನ್ ಆಕ್ಟ್ ಎಂದು ಕರೆದು ಹೊರತಂದರು. ಈ ಕಲಂ ಪ್ರಕಾರ ಯಾವುದೇ ವಿಶ್ವಸ್ಥ ಸಮಿತಿ ರೂಪದಲ್ಲಿರುವ ಯಾವುದೇ ಕೆಲಸ ವಾಣಿಜ್ಯ ವ್ಯವಹಾರಕ್ಕೆ ಪ್ರತಿಕೂಲವಾಗಿದ್ದರೆ ಅದನ್ನು ಕಾಯ್ದೆ ಬಾಹೀರ ಎಂದು ಪರಿಗಣಿಸಲಾಗದು.

೧೯೧೪ ರಲ್ಲಿ ಫೆಡರಲ್ ಕಮಿಶನ್ ಆ್ಯಕ್ಟ್ ಮತ್ತು ಕ್ಲೇಟಾನ್ ಆ್ಯಕ್ಟನ್ನು ಜಾರಿಗೆ ತಂದರು. ಸ್ಪರ್ಧೆಗಳಲ್ಲಿ ಅನ್ಯಾಯ ಪದ್ಧತಿಯನ್ನು ತೆಗೆದುಹಾಕುವುದು ಇದರ ಉದ್ದೇಶ.

ಮೇಲಿನ ಶಾಸನಬದ್ಧ ಕಾಯದೆಗಳ ಜೊತೆಗೆ ಹಲವಾರು ಶಾಸನಗಳನ್ನು ಗ್ರಾಹಕರ ಹಿತರಕ್ಷಣೆಗೆ ಹೊರತಂದರು .

೧. ಕಂಜುಮರ್ಸ್ ಕ್ರೇಡಿಟ್ ಪ್ರೊಟೆಕ್ಷನ್ ಆ್ಯಕ್ಟ್ – ೧೯೭೪.

೨. ಫೆರ್ ಕ್ರೇಡಿಟ್ ಬಿಲ್ಲಿಂಗ ಆ್ಯಕ್ಟ್ –೧೯೬೨.

೩. ಫೇರ್ ಪ್ಯಾಕೇಜಿಂಗ ಆಂಡ ಲೆಬಲಿಂಗ ಆ್ಯಕ್ಟ್ –೧೯೩೯.

೪. ಕಂಜುಮರ್ಸ ಪ್ರೊಡಕ್ಟ್ ಸೇಫ್ಟಿ ಆ್ಯಕ್ಟ್ – ೧೯೭೮.

೫. ದ ಪೇಡರಲ್ ಹಜಾರ್ಡಸ್ ಸಬಸ್ಟನ್ಸಸ ಆ್ಯಕ್ಟ್ – ೧೯೩೦.

೬. ಪಾಯಸನ್ ಪ್ರಿವೆನ್ಸನ್ ಪ್ಯಾಕೇಜಿಂಗ ಆ್ಯಕ್ಟ್ –೧೯೭೨.

೭. ಕಂಜುಮರ್ಸ್ ಪೇಟೆಂಟ ರೇಡಿಯೇಶನ ಮತ್ತು ಸೇಫ್ಟಿ ಆ್ಯಕ್ಟ್ –೧೯೪೦.

೮. ಯುನಿಫಾರ್ಮ ಕಮರ್ಶಿಯಲ ಕೋಡ್.

೯. ಮಾಡೇಲ್ ಕಂಜುಮರ್ಸ್ ಪ್ರೊಟೆಕ್ಸನ್ ಸಬಸ್ಟಿಟ್ಯೂಟ್.

**೩.೬.೩ ಸಂಯುಕ್ತ ರಾಷ್ಟ್ರ ಮತ್ತು ಗ್ರಾಹಕ ಸಂರಕ್ಷಣೆ**

೧. ಫೇರ್ ಟ್ರೇಡಿಂಗ ಆ್ಯಕ್ಟ್ ೧೯೭೩.

೨. ದ ಕಾಂಪಿಟೇಶನ್ ಆ್ಯಕ್ಟ್ ೧೯೮೦.

೩. ಕಂಜುಮರ್ಸ್ ಪ್ರೋಟೆಕ್ಸನ್ ಆ್ಯಕ್ಟ್ ೧೯೮೭.

೪. ರಿಸ್ಟ್ರೀಕ್ಟಿವ್ ಟ್ರೆಡ್ ಪ್ರ್ಯಾಕ್ಟಿಸ್ ಆ್ಯಕ್ಟ್ ೧೯೭೬.

ಮುಂತಾದವುಗಳನ್ನು ಸಂಯುಕ್ತ ರಾಷ್ಟ್ರವು ಗ್ರಾಹಕರನ್ನು ರಕ್ಷಿಸಲು ತಂದಿತು.

**ಆಸ್ಟ್ರೇಲಿಯಾ ಮತ್ತು ಗ್ರಾಹಕ ಸಂರಕ್ಷಣೆ**

೧. ಆಸ್ಟ್ರೇಲಿಯನ್ ಇಂಡಸ್ಟ್ರಿಸ್ ಪ್ರಿಜರವೇಶನ್ ಆ್ಯಕ್ಟ್ ೧೯೦೬.

೨. ಟ್ರೆಡ್ ಪ್ರ್ಯಾಕ್ಟಿಸ್ ಆ್ಯಕ್ಟ್ ೧೯೬೫.

ಮೇಲಿನ ಕಾಯ್ದೆ ಕಾನೂನುಗಳಿಂದ ಗ್ರಾಹಕರನ್ನು ರಕ್ಷಿಸುವ ಹೊಣೆಯನ್ನು ಆಸ್ಟ್ರೇಲಿಯಾ ಹೊತ್ತಿತ್ತು.[೧೩]

**೩.೭ ಗ್ರಾಹಕ ಚಳುವಳಿ**

ಅತ್ಯಂತ ಪ್ರಾಚೀನ ಕಾಲದಿಂದಲೂ ಹಲವು ದೇಶಗಳ ಮತ್ತು ಸಂಸ್ಕೃತಿಗಳ, ಜನ ತಮ್ಮ ತೊಂದರೆಗಳಿಗೆ ತಾವೆ ಪರಿಹಾರ ಕಂಡುಕೊಳ್ಳುತ್ತಿದ್ದರು. ಆಧುನಿಕ ಸ್ವಸಹಾಯ ಹಾಗೂ

ಪಕ್ಷಸಮರ್ಥನೆಯ ಚಳುವಳಿ, ಮಾನಸಿಕ ಆರೋಗ್ಯ ಸೇವೆಯಲ್ಲಿ ಕಾಲಿರಿಸಿತು. ೧೯೭೦ ರಲ್ಲಿ ಇದು ಅಭಿವೃದ್ಧಿಯ ಅಂಚಿನಲ್ಲಿ ಬಂದು ನಿಂತಿತು. ಕಾನೂನು ಸೇವೆಗಳು ಮತ್ತು ಸಾರ್ವಜನಿಕ ಕಾರ್ಯನೀತಿಯಲ್ಲಿ ಬದಲಾವಣೆ ಬರುವ ಮುನ್ನ ಮಾನಸಿಕ ರೋಗಿಗಳ ಪ್ರತಿಭಟನೆಯ ಹಲವು ನಿದರ್ಶನಗಳು ಸಿಗುತ್ತವೆ.

ಇಂಗ್ಲೆಂಡಿನ ಬೆತ್ಲೆಮ್ ಆಸ್ಪತ್ರೆಯಲ್ಲಿ ಅತ್ಯಂತ ಕೀಳಾಗಿ ವರ್ತಿಸಿಕೊಂಡಂತಹ ರೋಗಿಗಳು ಗುಂಪಾಗಿ ಹೌಸ ಆಫ್ ಲಾರ್ಡಗೆ ನೋಟಿಸ ಕಳುಹಿಸಿದರು. ೧೮೪೭ ರಿಂದ "ದ ಅಲೇಜಡ ಲುನ್ಯಾಟಿಕ್ ಪ್ರೇಂಡ್ ಸೊಸೈಟಿ" ತಮ್ಮ ಚಳುವಳಿಯ ಪ್ರಸಾರವನ್ನು ಪ್ರಾರಂಭಿಸಿತು. "ಆ್ಯಂಟಿ-ಇನಸಾನ್ ಲಿಸ್ಲಮ್ ಸೊಸೈಟಿ" ಯ ವ್ಯವಸ್ಥಾಪಕ ಎಲಿಜಿಬೆತ್ ಪ್ಯಾಕರ್ಡ ಹಲವಾರು ಪುಸ್ತಕಗಳಲ್ಲಿ ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. ನಂತರ ಹಲವು ದಶಕಗಳಾದ ಮೇಲೆ "ಕ್ಲಿಫೋರ್ಡ ಬಿಯರ್ಸ್ ನ್ಯಾಶನಲ್ ಕಮೀಟಿ ಆನ್ ಮೆಂಟೆಲ್ ಹೈಜಿನ್"ನ್ನು ಸ್ಥಾಪಿಸಿದರು. ಅದು ಮುಂದೆ "ನ್ಯಾಶನಲ್ ಮೆಂಟಲ್ ಹೇಲ್ತ ಅಸೋಶಿಯೇಶನ್" ಎಂದು ಪ್ರಸಿದ್ಧವಾಯಿತು.

೧೯೪೦ರಲ್ಲಿ ನ್ಯೂಯಾರ್ಕನಲ್ಲಿಯ ರಾಕಲ್ಯಾಂಡ ಸ್ಟೇಟ್ ಆಸ್ಪತ್ರೆಯ ರೋಗಿಗಳ ಗುಂಪು ಸ್ಥಾಪನೆಯಾಯಿತು. ೧೯೫೦ರಲ್ಲಿ ಈ ಸಂಸ್ಥೆ ಮೂಲ ಥೇರೇಪಿಯ ವಿರುದ್ದ ಬಹಳ ವಿರೋಧ ವ್ಯಕ್ತಪಡಿಸತೊಡಗಿತು. ಇದರಿಂದ ಮಾನವತಾವಾದದ ಕುರಿತು ಪ್ರಚಾರಗಳು ವ್ಯಕ್ತವಾಗತೊಡಗಿದವು.

೧೯೬೦ರಲ್ಲಿ ಮಾನಸಿಕ ರೋಗದಲ್ಲಿ, ಯೋಗ ಉಪಚಾರ ರೂಪದಲ್ಲಿ ಬಂದಾಗ ಅದರ ತಪ್ಪು ಬಳಕೆ ಅದರ ಕೆಟ್ಟ ಪರಿಣಾಮಗಳ ವಿರುದ್ದ ಮಾನಸಿಕ ರೋಗದ ಸಂಸ್ಥೆಗಳು, ಸಮಾಜ ಮೂಲಕ, ಸೇವೆಗಳ ವಿರುದ್ದ ಆ್ಯಂಟಿ ಸೈಕ್ರಿಯಾಟಿಸ್ಟ್ ಚಳುವಳಿ ಪ್ರಾರಂಭ ಮಾಡಿದವು.

೧೯೭೦ರಲ್ಲಿ ಮಹಿಳೆಯರ ಚಳುವಳಿ ನಗುಮುಖದ ಉಲ್ಲಾಸದ ಹಕ್ಕುಗಳ ಚಳುವಳಿ,ಅಬಲೆಯರ ಹಕ್ಕುಗಳ ಚಳುವಳಿ ಪ್ರಾರಂಭವಾಯಿತು. ಹಳೆಯ ಮಾನಸಿಕ ರೋಗಿಗಳ ಗುಂಪು ಸಂಘಗಳಾಗಿ ಪರಿವರ್ತನೆಗೊಳ್ಳತೊಡಗಿದವು. ಆ ಗುಂಪುಗಳು ಮನೋರೋಗದಿಂದ ಮುಕ್ತರಾಗಿ ಬದಲಾವಣೆಗೊಂಡು "ಇನಸಾನ್ ಲಿಬರೇಶನ್ ಫ್ರಂಟ್" ಮತ್ತು "ನೆಟವರ್ಕ ಅಗೇನೆಸ್ಟ ಸೈಕಿಯಾಟ್ರಿಕ್ ಅಸಾಲ್ಟ್" ಮುಂತಾದ ಹೆಸರುಗಳಿಂದ ಗುರುತಿಸಲ್ಪಡತೊಡಗಿದವು.

ಮಾನಸಿಕ ರೋಗಿಗಳ ಆಸ್ಪತ್ರೆಯ ಜನರು ಶೀಘ್ರ ಬೆಳವಣಿಗೆಯ ಕಾರಣಗಳಿಗಾಗಿ ಬೇರೆ ಜನರ ಸಂಪರ್ಕವನ್ನು ಹೊಂದಲು ಪ್ರಾರಂಭಿಸಿದರು. ಡೋರ್ತಿ ವ್ಹೆನರ್ ಮತ್ತು ಟಾಮ್ ಬೇಟಿಕ್ ಹಾಗೂ ಇನ್ನು ಕೆಲವರು ೧೯೭೦ ರಲ್ಲಿ ಪೋರ್ಟಲ್ಯಾಂಡನಲ್ಲಿ ಸಂಘವನ್ನು ಸ್ಥಾಪಿಸಿದರು. ೧೯೭೧ರಲ್ಲಿ ಕೆನಡಾದಲ್ಲಿ "ಮೆಂಟೆಲ್ ಪೇಶೆಂಟ್ಸ್ ಲಿಬರೇಶನ್" ಮತ್ತು "ಮೆಂಟೆಲ್ ಪೇಶೆಂಟ್ಸ್

ಲಿಬರೇಶನ್ ಪ್ರೋಜೆಕ್ಟ್" ನ್ನು ಶುರು ಮಾಡಿದರು. ೧೯೭೨ ರಲ್ಲಿ "ಮೆಂಟಲ್ ಪೇಶೆಂಟ್ಸ್ ಅಸೋಶಿಯೇಶನ್" ಪ್ರಾರಂಭಿಸಿದರು. ಹಳೆಯ ರೋಗಿಗಳ ಕುರಿತು ಜೂಡಿ ಚೆಂಬರ್ಲಿನ್ ಪುಸ್ತಕ ಬಿಡುಗಡೆಯಾಯಿತು.

೧೯೮೦ರಲ್ಲಿ ಮಾನಸಿಕ ರೋಗದ ಸೇವೆಗೆ ಇರುವ ವ್ಯಕ್ತಿಗಳು ಗ್ರಾಹಕರಾಗಿ ಪರಿವರ್ತನೆಗೊಳ್ಳತೊಡಗಿದರು. ೧೯೮೫ ರಲ್ಲಿ "ನ್ಯಾಶನಲ್ ಮೆಂಟಲ್ ಹೆಲ್ತ ಕಂಜುಮರ್ಸ್ ಅಸೋಶಿಯೇಶನ್" ಸಂಯುಕ್ತ ಸಂಸ್ಥಾನಗಳಲ್ಲಿ ಪ್ರಾರಂಭವಾಯಿತು. ೧೯೮೮ ರಲ್ಲಿ ಮಾನಸಿಕ ಸೇವಕರು ಗ್ರಾಹಕ ಚಳುವಳಿ "ಸಪೋರ್ಟ ಕೋಯಿಲೇಶನ್ ಇಂಟರನ್ಯಾಶಲ್" ನ್ನು ಪ್ರಾರಂಭಿಸಿದರು.

೧೯೯೧ರಲ್ಲಿ "ದ ವರ್ಲ್ಡ್ ನೇಟವರ್ಕ ಯುಸರ ಆ್ಯಂಡ ಸರ್ವಾವರ್ ಆಫ್ ಸೈಕ್ರಿಯಾಟ್ರಿ" ಎನ್ನುವ ಅಂತರ ರಾಷ್ಟ್ರೀಯ ಸಂಸ್ಥೆ ಪ್ರಾರಂಭವಾಯಿತು.

ಮಾನಸಿಕ ಸ್ವಾಸ್ಥ್ಯದ ಸೇವೆಯನ್ನು ಅನುಭವಿಸುವ ಜನರ ಬೇಡಿಕೆ, ಅವರ ಮೇಲಿನ ಚಿಕಿತ್ಸೆಯನ್ನು ನಿಯಂತ್ರಿಸುವುದು ಪ್ರಾರಂಭವಾಗಿ, ಸಾರ್ವಜನಿಕ ಆರೋಗ್ಯದ ವ್ಯವಸ್ಥೆಯ ಮೇಲೆ ಪರಿಣಾಮ ಬೀರತೊಡಗಿತು. ತಮ್ಮನ್ನು ತಾವು ಗ್ರಾಹಕರೆಂದು ಪರಿಗಣಿಸಿದರೋ ಇಲ್ಲವೊ ಚಳುವಳಿಯ ಚಟುವಟಿಕೆದಾರರು ಧ್ವನಿಗಾಗಿ ಹಾಗೂ ಆಯ್ಕೆಗಾಗಿ ಬೇಡಿಕೆ ಮುಂದಿಡತೊಡಗಿದರು.[೧೮]

**೩.೮ ಭಾರತದಲ್ಲಿ ಗ್ರಾಹಕ ಚಳುವಳಿ**

ಬೇರೆ ದೇಶಗಳಲ್ಲಿಯಂತೆ ಭಾರತದಲ್ಲಿಯೂ ಕೂಡ ಗ್ರಾಹಕ ಚಳುವಳಿ ಪ್ರಾರಂಭವಾಗಿದ್ದು ಸಮಾಜದ ಒತ್ತಡದಿಂದ. ಯಾವಾಗ ಗ್ರಾಹಕರ ಸಂರಕ್ಷಣೆ ಮತ್ತು ಗ್ರಾಹಕರ ಹಿತವನ್ನು ಕಾಪಾಡುವ ಹೊಣೆ ಜನತೆಯ ಮೇಲೆ ಬಂದಿತೋ, ಗ್ರಾಹಕರ ಚಳುವಳಿಯ ಹುಟ್ಟು ಪ್ರಾರಂಭವಾಯಿತು. ಮೋಸದ ಅನುಚಿತ ವ್ಯವಹಾರ ಪದ್ಧತಿಗಳಿಂದ ಅನ್ಯಾಯ ಸಹಿಸುವ ಹಂತ ಮುಗಿಯಿತೊ ದಂಗೆಗೆ ಅವಕಾಶ ಮಾಡಿಕೊಟ್ಟ ಹಾಗಾಯಿತು. ಈ ಚಳುವಳಿಯ ಮೊದಲ ಹಂತದಲ್ಲಿ, ಲಾಭಗಳಿಕೆ, ಮೋಸದ ನಡುವಳಿಕೆ ಅರಿತು, ಗ್ರಾಹಕರು ಬೇರೆ ವ್ಯಾಪಾರಿಗಳ ಹತ್ತಿರ ಸರಕು ಅಥವಾ ಸೇವೆಯನ್ನು ಪಡೆಯುವ ಹಕ್ಕನ್ನು ಪಡೆದುಕೊಂಡರು. ಗ್ರಾಹಕರೆ ಎಚ್ಚತ್ತುಕೊಳ್ಳಿ ಎನ್ನುವ ಘೋಷಣೆ ಸರ್ಕಾರದ ಕಾಯ್ದೆ ಶಾಸನವಾಯಿತು.

೧೯೬೦ರ ದಶಕದಲ್ಲಿ ನಿಧಾನವಾಗಿ ಗ್ರಾಹಕ ಚಳುವಳಿಯ ಪ್ರಯತ್ನ ವಾಣಿಜ್ಯ ವ್ಯವಹಾರದ ಮೇಲೆ ಒತ್ತಡ ತರುವ ನಿಟ್ಟಿನಲ್ಲಿ ಸಾಗಿತು. ಅಲ್ಲದೆ ಅದರ ಉದ್ದೇಶ ಸರ್ಕಾರದ ಮೇಲೆ ಒತ್ತಡ ತಂದು ವ್ಯವಹಾರದಿಂದ ಗ್ರಾಹಕರಿಗೆ ಆಗುವ ಮೋಸವನ್ನು ತಡೆಯುವುದು ಆಗಿತ್ತು. ೧೯೬೫ರಲ್ಲಿ "ಪ್ರಯಾಣಿಕರು ಮತ್ತು ನಿರ್ಭಂದ ಸಡಲಿಕೆ ಸಂಸ್ಥೆ"ಯನ್ನು ಮುಂಬೈಯಲ್ಲಿ ಸ್ಥಾಪಿಸಿದರು. ಈ ಒಂದು ಪ್ರಯತ್ನ ಗ್ರಾಹಕರ ಚಳುವಳಿಗೆ ಸಂಘಟನೆಯ ಪ್ರಯತ್ನವಾಯಿತು.

೧೯೬೬ರಲ್ಲಿ ಸ್ಥಾಪನೆಯಾದ ಭಾರತದ "ಗ್ರಾಹಕ ಮಾರ್ಗದರ್ಶಿ ಸಂಸ್ಥೆ" ಬಹುದಿನಗಳವರೆಗೆ ಪ್ರಭಾವಿ ಸಂಸ್ಥೆಯಾಗಿ ಬೆಳೆಯಿತು.

೧೯೬೦ರ ವರೆಗೆ ಸಂಯುಕ್ತ ರಾಷ್ಟ್ರಕೂಟದಲ್ಲಿ ಪರಿಣಾಮಕಾರಿಯಾಗಿ ಮುಂದುವರೆಯದ ಗ್ರಾಹಕ ಚಳುವಳಿ, ಗ್ರಾಹಕ ಸಂಯೋಜನೆಯ ಅಂತರಾಷ್ಟ್ರೀಯ ಸಂಸ್ಥೆ ಸ್ಥಾಪನೆಯಾದ ಕೂಡಲೆ ವೇಗಗತಿಯನ್ನು ತೆಗೆದುಕೊಂಡಿತು.

ಕೇಲವೇ ವರ್ಷಗಳಲ್ಲಿ "ಗ್ರಾಹಕ ಮಾರ್ಗದರ್ಶಿ ಸಂಸ್ಥೆ" (CGO) ಹಲವು ಶಾಖೆಗಳನ್ನು ಹಲವಾರು ಸ್ಥಳಗಳಲ್ಲಿ ಸ್ಥಾಪನೆ ಮಾಡಿತು. ಈ ಎಲ್ಲ ಶಾಖೆಗಳು ಗ್ರಾಹಕರ ಶಿಕ್ಷಣ ಪ್ರಸಾರ ಮತ್ತು ಪ್ರದರ್ಶನಗಳಿಗೆ ಒತ್ತು ಕೊಟ್ಟು ಕೆಲಸ ಪ್ರಾರಂಭಿಸಿದವು. "ಗ್ರಾಹಕ ಮಾರ್ಗದರ್ಶಿ ಸಂಸ್ಥೆ" ಹಲವಾರು ಮಾಸಪತ್ರಿಕೆಗಳನ್ನು ಶುರು ಮಾಡಿತು. ಉದಾಹರಣೆಗೆ ಹಿಂದಿ ಮತ್ತು ಇಂಗ್ಲೀಷನಲ್ಲಿ "ಕಿಮತ್" ಪತ್ರಿಕೆಗಳನ್ನು ಬಿಡುಗಡೆ ಮಾಡಿ ಗ್ರಾಹಕರಿಗೆ ಮಾಹಿತಿ ಕೊಡುವ ನಿಟ್ಟಿನಲ್ಲಿ ಕೆಲಸ ಪ್ರಾರಂಭಿಸಿತು. ಅಲ್ಲದೆ ಗ್ರಾಹಕರ ದೂರುಗಳನ್ನು ಸ್ವೀಕರಿಸುವ ಹಾಗೂ ಆಹಾರ ಪದಾರ್ಥಗಳ ಗುಣಮಟ್ಟವನ್ನು ಪರೀಕ್ಷಿಸುವುದು ಮತ್ತು ವರದಿಯನ್ನು ಕೊಡುವ ಕೆಲಸವನ್ನು ಪ್ರಾರಂಭಿಸಿತು.

೧೯೭೦ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕದ ಗ್ರಾಹಕ ಸೇವಾ ಸಂಸ್ಥೆ (KCSS) ಸ್ಥಾಪಿಸಲ್ಪಟ್ಟಿತು. ಈ ಸಂಸ್ಥೆ ಗ್ರಾಹಕರ ವಿಷಯ ವಿವಾದಗಳ ಕುರಿತು ಜನರಲ್ಲಿ ಅರಿವು ಮೂಡಿಸುವ ಕೆಲಸ ಪ್ರಾರಂಭಿಸಿತು. ಗ್ರಾಹಕರ ಶಿಕ್ಷಣದ ಕುರಿತು ಶಾಲೆಗಳಲ್ಲಿ ವಿಚಾರ ಸಂಕಿರಣಗಳನ್ನು ಹಮ್ಮಿಕೊಳ್ಳುವ ಕೆಲಸ ಪ್ರಾರಂಭಿಸಿತು.

೧೯೭೦ರ ದಶಕದಲ್ಲಿ ಗ್ರಾಹಕರ ಚಳುವಳಿ ತೀವ್ರತೆ ಪಡೆಯಿತು. ೧೯೭೩ ರಲ್ಲಿ ವಿಶಾಖಪಟ್ನಂ ನಲ್ಲಿ (ಆಂದ್ರಪ್ರದೇಶ) ವಿಶಾಕಾ ಗ್ರಾಹಕ ಪರಿಷತ್ (VCC) ಪ್ರಾರಂಭವಾಯಿತು. ಇತರ ೧೫ ಸಂಸ್ಥೆಗಳ ಜೊತೆ ಇದು ಗ್ರಾಹಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಕಾರ್ಯ ಪ್ರಾರಂಭಮಾಡಿತು. ಬಡತನ ರೇಖೆಗಿಂತ ಕೆಳಗಿನ ಜನರ ಪಡಿತರ ಚೀಟಿಯ ಸಮಸ್ಯೆಗಳು, ಉಪಯೋಗಿಸುವ ಜನರ ಸಮಸ್ಯೆಗಳು, ಹಾಲು ವಿತರಣೆ ಸಮಸ್ಯೆ ಮುಂತಾದವುಗಳ ಕುರಿತು ವಿಶಾಕಾ ಗ್ರಾಹಕ ಪರಿಷತ್ ಎಲ್ಲ ರಾಜ್ಯಗಳಲ್ಲಿ ಕೆಲಸ ಪ್ರಾರಂಭಿಸಿತು.

ಇದೇ ದಶಕದಲ್ಲಿ ಹಲವಾರು ಸಂಘ ಸಂಸ್ಥೆಗಳು ಪ್ರಾರಂಭವಾದವು. ಅವುಗಳಲ್ಲಿ ಪುಣೆಯ ಅಖಿಲಭಾರತೀಯ ಗ್ರಾಹಕ ಪಂಚಾಯತ, ಮುಂಬೈಯ ಗ್ರಾಹಕ ಪಂಚಾಯತ್, ಜೇಮಶೇಡಪುರದ ಗ್ರಾಹಕ ಪಂಚಾಯತ, ಪ್ರಮುಖವಾದವುಗಳು. ಪ್ರತಿದಿನ ಉಪಯೋಗಿಸುವ ವಸ್ತುಗಳನ್ನು ಹೆಚ್ಚಿನ ಬೆಲೆಗೆ ಗ್ರಾಹಕರಿಗೆ ಮಾರಾಟ ಮಾಡುವ ವ್ಯಾಪಾರಿ ಜನರ ಕುರಿತು ಮಾಹಿತಿ ಸಂಗ್ರಹಿಸಿ ಆ

ವಸ್ತುಗಳನ್ನು ಹೊಲಸೇಲ್ ದರದಲ್ಲಿ ಕೊಂಡು ಅದೇ ಕಡಿಮೆ ದರಕ್ಕೆ ಗ್ರಾಹಕರಿಗೆ ಮಾರುವ ಕೆಲಸಗಳನ್ನು ಹಮ್ಮಿಕೊಳ್ಳತೊಡಗಿದವು. ಈ ಸಂಸ್ಥೆಗಳು ಗ್ರಾಹಕ ಶಿಕ್ಷಣ ಮತ್ತು ಗ್ರಾಹಕರ ಸಹಕಾರಿ ಕಾರ್ಯಕ್ರಮಗಳನ್ನು ಕೂಡ ಹಮ್ಮಿಕೊಳ್ಳತೊಡಗಿದವು.

೧೯೭೮ರಲ್ಲಿ ಗ್ರಾಹಕ ಶಿಕ್ಷಣ ಮತ್ತು ಸಂಶೋಧನೆ ಕೇಂದ್ರವು ಅಹಮದಾಬಾದಲ್ಲಿ ಸ್ಥಾಪನೆಯಾಯಿತು. ಈ ಸಂಸ್ಥೆ ಕಾನೂನಿನ ಪ್ರತಿನಿಧಿಯಾಗಿ ಗ್ರಾಹಕರ ಹಕ್ಕುಗಳನ್ನು ರಕ್ಷಿಸುವ ಕೆಲಸ ಪ್ರಾರಂಭಿಸಿ ಹಲವಾರು ಬದಲಾವಣೆಯನ್ನು ತಂದಿತು. ಈ ಸಂಸ್ಥೆ ಗ್ರಾಹಕರನ್ನು ತಯಾರು ಮಾಡಿ ಗ್ರಾಹಕರ ಅರಿವಿನ ಚಟುವಟಿಕೆಗಳನ್ನು ಹಮ್ಮಿಕೊಳ್ಳತೊಡಗಿತು. ಔಷಧ, ಸರಕು, ಆಹಾರ ಪದಾರ್ಥ, ಗೃಹ ಉಪಯೋಗಿ ವಸ್ತು ಮುಂತಾದವುಗಳ ಪರೀಕ್ಷೆಗೆ ಪ್ರಯೋಗಾಲಯಗಳನ್ನು ಈಗ ಇದು ಹೊಂದಿದೆ.

೧೯೮೦ರ ದಶಕದಲ್ಲಿ ಬಹಳಷ್ಟು ಗ್ರಾಹಕ ಸಂಘ ಸಂಸ್ಥೆಗಳು ಹುಟ್ಟುಹಾಕಿದವು. ಹಲವಾರು ಸಂಸ್ಥೆಗಳು ಗ್ರಾಹಕ ಸಂಬಂಧಿ ವಿಷಯಗಳಿಗೆ ಚಟುವಟಿಕೆಗಳನ್ನು ಪ್ರಾರಂಭಿಸಿದವು. ೧೯೮೦ ರಲ್ಲಿ ಬರೋಡಾದಲ್ಲಿ ಸ್ಥಾಪನೆಯಾದ ಸಂಸ್ಥೆ ಗ್ರಾಹಕ ಶಿಕ್ಷಣ, ವಿಚಾರ ಸಂಕಿರಣ ಮತ್ತು ಮಾಸಪತ್ರಿಕೆಗಳ ಪ್ರಕಟಣೆಗಳ ಕೆಲಸಗಳಲ್ಲದೆ ೪೫ ದೂರು ಕೇಂದ್ರಗಳನ್ನು ನಡೆಸುತ್ತಿದೆ.

೧೯೮೫ರಲ್ಲಿ ಜೈಪೂರನಲ್ಲಿ ಗ್ರಾಹಕರ ಸಂಘವನ್ನು , ಟ್ರಸ್ಟ್ ಸೊಸೈಯಟಿಯನ್ನು ಮತ್ತು ಸ್ವಯಂ ಗ್ರಾಹಕ ಗುಂಪನ್ನು ಪ್ರಾರಂಭಿಸಲಾಯಿತು. ಈಗ ಜೈಪುರ, ನವ 'ದೆಹಲಿ ಚಿಟ್ಟೊರಗಾರ ಮತ್ತು ಕಲ್ಕತ್ತಾದಲ್ಲಿ ಸೊಸಾಯಿಟಿಯ ನಾಲ್ಕು ಕೇಂದ್ರಗಳಿವೆ. ಜಾಂಬಿಯಾದ ಲೂಸ್ಕಾನಲ್ಲಿ ಒಂದು ಕೇಂದ್ರವನ್ನು ಹೊಂದಿದೆ.

೧೯೮೫ರಲ್ಲಿ VOIC (Voluntary Organisation in the Interest of Consumer Education) ದೆಹಲಿಯಲ್ಲಿ ಸ್ಥಾಪಿಸಲಾಯಿತು ನಂತರ ಇದು ಗ್ರಾಹಕ ರಕ್ಷಣೆಗೆ ದುಡಿಯುತ್ತಿದೆ. ಈ ಸಂಸ್ಥೆ ಇಂಗ್ಲೀಷನಲ್ಲಿ ಕಂಜುಮರ್ಸ್ ವಾಯಿಸ್, ಹಿಂದಿಯಲ್ಲಿ ಅಂಕಿತವಾಣಿಯನ್ನು ಪ್ರಕಟಮಾಡುತ್ತಿದೆ.

ಗ್ರಾಹಕ ಚಳುವಳಿ ೨೧ ನೇ ಶತಮಾನದ ಕೊನೆಯ ದಶಕದಲ್ಲಿ ಇನ್ನೊಂದು ಮಹತ್ವದ ಹೆಜ್ಜೆಯನ್ನು ಇರಿಸಿದೆ. ಮತ್ತೆ ಹಲವು ಗ್ರಾಹಕ ಸಂಘಗಳು ಸ್ಥಾಪನೆಗೊಂಡು ಗ್ರಾಹಕರ ಹಕ್ಕುಗಳಿಗೆ ಒಂದಾಗಿ ಹೋರಾಟಕ್ಕೆ ಒತ್ತು ನೀಡಿದವು. ಹಲವಾರು ರಾಜ್ಯಗಳು ಅಫೇಕ್ಸಗಳನ್ನು ಸ್ಥಾಪಿಸಿ ಎಲ್ಲ ಗ್ರಾಹಕರಿಗೂ ಅನ್ವಯಿಸುವ ಸಮಸ್ಯೆಗಳನ್ನು ಕೈಗೆತ್ತಿಕೊಂಡವು. ಆದರೆ ೮೦೦ ಗ್ರಾಹಕ ಸಂಘಗಳಲ್ಲಿ ಕೆಲವೇ ಕೆಲವು ಉತ್ತಮ ಸಂಘಟನೆಗಳೆಂದು ಗುರುತಿಸಲ್ಪಟ್ಟು ಗ್ರಾಹಕರ ಶಿಕ್ಷಣಕ್ಕೆ ಒತ್ತು ನೀಡಿ ಉಪಯುಕ್ತ ಕೆಲಸವನ್ನು ಮಾಡುತ್ತಿವೆ. ಗ್ರಾಹಕರ ಶಿಕ್ಷಣ ಸಮಸ್ಯೆಗೆ ಸ್ಪಂದಿಸಿ ಕೋರ್ಟಿನಲ್ಲಿ ಗ್ರಾಹಕರ

ದೂರಿಗೆ ಬಡಿದಾಡುವುದು ಗ್ರಾಹಕರ ದೂರುಗಳನ್ನು ಸ್ವೀಕರಿಸುವುದು ಮುಂತಾದ ಕೆಲಸಗಳನ್ನು ಹಮ್ಮಿಕೊಂಡಿವೆ.[೧೫]

**೩.೯ ಕರ್ನಾಟಕದಲ್ಲಿ ಗ್ರಾಹಕ ಚಳುವಳಿ**

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಜಾರಿಗೆ ಬರುವುದಕ್ಕೂ ಮೊದಲು ೧೯೮೦ ರಲ್ಲಿ ಡಾ. ಕೆ.ಪಿ.ಎಸ್. ಕಾಮತ್ ಅವರು ಉಡುಪಿಯಲ್ಲಿ ಬಳಕೆದಾರರ ವೇದಿಕೆಯನ್ನು ಆರಂಭಿಸಿದರು. ಅವರು ಗ್ರಾಹಕರ ಪರವಾಗಿ ಹೋರಾಟ ಆರಂಭಿಸಿದರು. ಅವರೊಂದಿಗೆ ಹೋರಾಟಕ್ಕೆ ಕೈ ಜೋಡಿಸಲು ಡಾ. ಪಿ. ನಾರಾಯಣರಾಯರು ಅವರ ಮಡದಿ ವಿನುತಾ ಹಾಗೂ ಡಾ. ಕೆ. ರವೀಂದ್ರನಾಥ ಶಾನಭಾಗರು, ಕೆ. ಜಯರಾಂ ಶೆಟ್ಟರು ಮಿಲಿಟರಿಯಿಂದ ನಿವೃತ್ತರಾಗಿ ಬಂದನಂತರ ಇವರೊಂದಿಗೆ ಸೇರಿಕೊಂಡರು.

ಡಾ. ಪಿ. ನಾರಾಯಣರಾಯರು ನಾಡಿನಾದ್ಯಂತ ದೇಶದಾದ್ಯಂತ ಚಳುವಳಿಯನ್ನು ಪ್ರಸಾರ ಮಾಡತೊಡಗಿದರು. ಅದೇ ರೀತಿ ರಾಜ್ಯದಲ್ಲಿ ಹಲವಾರು ಗ್ರಾಹಕ ಸ್ವಯಂ ಸಂಸ್ಥೆಗಳು ಹುಟ್ಟಿಕೊಳ್ಳತೊಡಗಿದವು. ಅವುಗಳಲ್ಲಿ, ಹಲವು ಸಂಸ್ಥೆಗಳು ಕಾರ್ಯ ಮಾಡಿ ಇತಿಹಾಸ ನಿರ್ಮಿಸಿದವು.

ಇಪ್ಪತ್ತು ವರ್ಷದ ಹಿಂದೆ ಈ ಚಳುವಳಿ ಉಚ್ಛ್ರಾಯ ಸ್ಥಿತಿಯಲ್ಲಿ ಇತ್ತು. ಸರಕಾರದ ಕಡೆಯಿಂದಲು ಅದಕ್ಕೆ ಬೆಂಬಲವಿತ್ತು. ಬಳಕೆದಾರರ ಚಳುವಳಿಯಿಂದಲೇ ರಾಜಕೀಯ ಕ್ಷೇತ್ರಕ್ಕೆ ಬಂದ, ಕೊಟ ಶ್ರೀನಿವಾಸ ಪೂಜಾರಿ ಹಾಗೂ ಆಚಾರ್ಯ ತಮ್ಮ ಉತ್ತಮ ಸೇವೆಯಿಂದ ಗುರುತಿಸಿಕೊಂಡು ಪ್ರಸಿದ್ಧರಾಗಿದ್ದಾರೆ.

ನಮ್ಮ ರಾಜ್ಯದಲ್ಲಿ ೧೩೫ ಗ್ರಾಹಕ ಸ್ವಯಂ ಸೇವಾ ಸಂಸ್ಥೆಗಳಿವೆ, ಸಾರ್ವಜನಿಕರ ಬೆಂಬಲದಿಂದ ಅವು ಬದುಕುಳಿದಿವೆ, ಆದರೆ ಸರ್ಕಾರದ ನಿರ್ಲಕ್ಷದಿಂದ ಕುಗ್ಗಿ ಹೋಗುತ್ತಿವೆ.[೧೬]

**೩.೧೦ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬**

ಸ್ವಾತಂತ್ರ್ಯ ಭಾರತದ ರೂವಾರಿ ರಾಷ್ಟ್ರ ಪಿತಾಮಹ ಮಹಾತ್ಮಾ ಗಾಂಧೀಜಿಯವರ ಪ್ರಕಾರ "ಗ್ರಾಹಕ ಎಂದರೆ ಅನಪೇಕ್ಷಿತ ವ್ಯಕ್ತಿ ಅಲ್ಲ, ಆತ ನಮ್ಮಲ್ಲಿ ಬರುವ ಗೌರವಾನ್ವಿತ ಆತ ನಮ್ಮಿಂದ ಉಪಕಾರ ಬಯಸುವುದಿಲ್ಲ. ಬದಲಾಗಿ ಆತನ ಭೇಟಿ ನಮಗೆ ಸೇವೆಯ ಅವಕಾಶ ಕೊಡುತ್ತದೆ". ಈ ಗ್ರಾಹಕರ ಕುರಿತು ವ್ಯಾಖ್ಯೆ ಗ್ರಾಹಕನಿಗೆ ಇರುವ ಮಹತ್ವವನ್ನು ಸಾರಿ ಹೇಳುತ್ತದೆ.

೧೯೮೬ ರ ಮೊದಲಿಗೆ ಗ್ರಾಹಕ ರಕ್ಷಣೆಗೆ ಹಲವಾರು ಕಾನೂನುಗಳು ಲಭ್ಯವಿದ್ದರೂ ಗ್ರಾಹಕನ ಶೋಷಣೆ ನಿರಂತರವಾಗಿ ನಡೆಯುತ್ತಲೇ ಇತ್ತು. ಕೇಂದ್ರ ಸರ್ಕಾರವು ೧೯೮೪ ರ ಎಂ.ಆರ್.ಟಿ.ಪಿ ಕಾಯ್ದೆಗೆ ತಿದ್ದುಪಡಿ ತಂದು ಅನುಚಿತ ವ್ಯಾಪಾರ ಪದ್ಧತಿ ಕಾಯ್ದೆಯನ್ನು ಅಳವಡಿಸಿತು. ಆದರೆ ಈ

ಕಾಯ್ದೆಯ ಪರಿಮಿತಿಯಿಂದ ಸರ್ಕಾರಿ ಅರೆಸರಕಾರಿ ಸ್ವಾಮ್ಯದ ಸಂಸ್ಥೆಗಳನ್ನು ಮತ್ತು ಸರ್ಕಾರಿ ಘಟಕಗಳನ್ನು ಹೊರತುಪಡಿಸಿದ್ದರಿಂದ ಗ್ರಾಹಕನಿಗೆ ಹೆಚ್ಚು ಪ್ರಯೋಜನಕಾರಿಯಾಗಲಿಲ್ಲ.

೧೯೮೬ರಲ್ಲಿ ಲೋಕಸಭೆ ಅನುಮೋದಿಸಿದ ಗ್ರಾಹಕ ರಕ್ಷಣಾ ಕಾಯ್ದೆ ಭಾರತ ದೇಶದ ಸಾಮಾಜಿಕ ವಿಧಾಯಕಗಳಲ್ಲಿ ಚರಿತ್ರಾರ್ಹವಾದ ಒಂದು ಪ್ರಗತಿಪರ ಕಾನೂನಾಗಿದೆ. ಈ ಕಾಯ್ದೆಯನ್ವಯ ಗ್ರಾಹಕ ದೂರುಗಳನ್ನು ಕಡಿಮೆ ಖರ್ಚಿನಲ್ಲಿ ಶೀಘ್ರಗತಿಯಲ್ಲಿ ನಿವಾರಿಸಿಕೊಂಡು ಪರಿಹಾರ ಪಡೆಯುವ ಸಾಧ್ಯತೆ ಇದೆ.

ಈ ಕಾನೂನಿನ ಬಗ್ಗೆ ಲೋಕಸಭೆಯಲ್ಲಿ ಮಾಡಿದ ಪ್ರಸ್ತಾವನೆ ಪ್ರಕಾರ ಗ್ರಾಹಕ ರಕ್ಷಣಾ ಪರಿಷತ್ತು ಮತ್ತು ಗ್ರಾಹಕ ವ್ಯಾಜ್ಯ ತೀರ್ಮಾನ ವೇದಿಕೆಗಳನ್ನು ರಚನೆ ಮಾಡುವ ಜವಾಬ್ದಾರಿ ಸರ್ಕಾರಕ್ಕೆ ಇರುತ್ತದೆ. ಗ್ರಾಹಕ ರಕ್ಷಣಾ ಪರಿಷತ್ತು ಮತ್ತು ಗ್ರಾಹಕ ವಾಜ್ಯ ತೀರ್ಮಾನ ವೇದಿಕೆಗಳ ಮೂಲಕ ಗ್ರಾಹಕರಿಗೆ ಅತ್ಯುತ್ತಮ ರಕ್ಷಣೆ ಒದಗಿಸುವುದು ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಮೂಲ ಉದ್ದೇಶವಾಗಿರುತ್ತದೆ.

ಗ್ರಾಹಕ ರಕ್ಷಣಾ ಪರಿಷತ್ತುಗಳು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿದ್ದು ಅದರ ಉದ್ದೇಶ ಹೀಗೆ ಇವೆ.

೧. ಗ್ರಾಹಕ ಹಕ್ಕುಗಳು ರಕ್ಷಣೆ.

೨. ಗ್ರಾಹಕ ಶಿಕ್ಷಣ.

೩. ಗ್ರಾಹಕ ಪ್ರಾಮುಖ್ಯವಾದ ವಿಷಯಗಳನ್ನು ಚರ್ಚಿಸಿ ಸರ್ಕಾರಕ್ಕೆ ಸಲಹೆ ನೀಡುವ ಕಾರ್ಯ ನಿರ್ವಹಿಸುವುದು.

ಗ್ರಾಹಕ ವ್ಯಾಜ್ಯ ಪರಿಹಾರ ವೇದಿಕೆ ಅರೆನ್ಯಾಯಾಂಗ ವ್ಯವಸ್ಥೆಯಾಗಿದೆ. ಇದು ಮೂರು ಹಂತಗಳಲ್ಲಿ ಕಾರ್ಯ ನಿರ್ವಹಿಸುತ್ತದೆ.

೧. ರಾಷ್ಟ್ರ ಮಟ್ಟದಲ್ಲಿ.

೨. ರಾಜ್ಯ ಮಟ್ಟದಲ್ಲಿ.

೩. ಜಿಲ್ಲಾ ಮಟ್ಟದಲ್ಲಿ.

ಗ್ರಾಹಕ ರಕ್ಷಣಾ ಕಾಯ್ದೆ ೧೯೮೬ರಲ್ಲಿನ ಕೆಲವು ನ್ಯೂನತೆಗಳನ್ನು ಸರಿಪಡಿಸುವಲ್ಲಿ ಕೆಲವು ಗ್ರಾಹಕ ಪೂರಕವಾದ ತಿದ್ದು ಪಡಿಗಳನ್ನು ೧೯೯೩ರಲ್ಲಿ ನಂತರ ೨೦೦೨ ರಲ್ಲಿ ತರಲಾಗಿದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಾಯಿದೆಯ ಮುಖ್ಯ ವೈಶಿಷ್ಟ್ಯಗಳು ಹೀಗಿವೆ.

ಅ) ಈ ಕಾಯ್ದೆಯು ದಂಡನಾತ್ಮಕವಾಗಿರದೆ ನೊಂದ ಗ್ರಾಹಕನಿಗೆ ಸೂಕ್ತ ಪರಿಹಾರ ತುಂಬಿ ಕೊಡುವಂತಹದ್ದಾಗಿದೆ.

ಬ) ಖಾಸಗಿ, ಸಾರ್ವಜನಿಕ ಮತ್ತು ಸಹಕಾರಿ ವಲಯಗಳಿಗೆ ಸಮಾನವಾಗಿ ಅನ್ವಯಿಸುತ್ತದೆ.

ಕ) ಗ್ರಾಹಕರ ಹಕ್ಕುಗಳನ್ನು ನಿರೂಪಿಸಿದೆ.

ಗ್ರಾಹಕ ಸಂರಕ್ಷಣೆ ಇಂದು ಸಾರ್ವಜನಿಕ ವಿತರಣಾ ವ್ಯವಸ್ಥೆಯ ಪ್ರಮುಖ ವಿಷಯವಾಗಿ ಬೆಳೆಯುತ್ತಿದೆ. ೧೯೮೬ ರ ಗ್ರಾಹಕ ಸಂರಕ್ಷಣಾ ಕಾಯ್ದೆಯ ನಂತರ, ಗ್ರಾಹಕ ವಿತರಣಾ ವ್ಯವಸ್ಥೆಯು ಗ್ರಾಹಕ ಕಲ್ಯಾಣವನ್ನು ಗಮನದಲ್ಲಿಟ್ಟುಕೊಂಡು ಮುನ್ನಡೆಯಬೇಕಾಗಿದೆ.ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿನ ದೋಷಗಳು ಸೇರಿದಂತೆ ತನಗಾಗುವ ಯಾವುದೇ ಅನ್ಯಾಯವನ್ನು ಪ್ರಶ್ನಿಸಲು ಪ್ರತಿಯೊಬ್ಬ ಗ್ರಾಹಕನಿಗೆ ಶಾಸನಬದ್ಧ ಅಧಿಕಾರವಿದೆ. ಗ್ರಾಹಕ ಸಂರಕ್ಷಣಾ ಕಾರ್ಯಕ್ರಮಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದು.

ಅ) ಗ್ರಾಹಕ ಹಕ್ಕುಗಳು ಮತ್ತು ಕರ್ತವ್ಯಗಳು.

ಬ ಗ್ರಾಹಕ ವ್ಯಾಜ್ಯ ಪರಿಹಾರ.

ಕ) ಗ್ರಾಹಕ ಕಲ್ಯಾಣ ಕಾರ್ಯಕ್ರಮಗಳು.

**ಅ) ಗ್ರಾಹಕ ಹಕ್ಕುಗಳು :**

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರಂತೆ ಪ್ರತಿಯೊಬ್ಬ ಗ್ರಾಹಕನಿಗೆ ಕೆಳಕಂಡ ಹಕ್ಕುಗಳಿರುತ್ತವೆ

**೧) ಸುರಕ್ಷತೆಯ ಹಕ್ಕು :**

ಗ್ರಾಹಕನ ಜೀವನಕ್ಕೆ, ಆಸ್ತಿಗೆ ಮತ್ತು ಆರೋಗ್ಯಕ್ಕೆ ಕುತ್ತು ತರುವ, ಅಪಾಯ ಉಂಟುಮಾಡುವ ಸರಕು ಅಥವಾ ಸೇವೆಗಳ ಮಾರಾಟದ ವಿರುದ್ದ ರಕ್ಷಣೆ ಪಡೆಯುವ ಹಕ್ಕು.

**೨) ಮಾಹಿತಿ ಪಡೆಯುವ ಹಕ್ಕು :**

ಗ್ರಾಹಕ ಕಾನೂನಿನ ಅಡಿಯಲ್ಲಿ ಮಾಹಿತಿ ಪಡೆಯುವ ಹಕ್ಕು ಹೊಂದಿದ್ದಾನೆ. ತಾನು ಕೊಂಡುಕೊಳ್ಳುವ ಸರಕು ಸೇವೆಯ ಕುರಿತು ಸಂಪೂರ್ಣ ಮಾಹಿತಿಯನ್ನು ಪಡೆಯಬಹುದು.

**೩) ಸರಕು ಅಥವಾ ಸೇವೆಗಳ ಹಕ್ಕು :**

ಗ್ರಾಹಕನಿಗೆ ತನಗೆ ಬೇಕಾದ ಅವಶ್ಯವೆನಿಸಿದ ಅತ್ಯವಶ್ಯಕ ಪದಾರ್ಥಗಳು ಸರಕು ಮತ್ತು ಸೇವೆಯನ್ನು ಪಡೆಯುವ ಹಕ್ಕಿದೆ. ಗ್ರಾಹಕನಿಗೆ ಸರಕಿನ ಕುರಿತು ಅದರ ಗುಣಮಟ್ಟದ ಶುದ್ಧತೆ ಬೆಲೆ ಮುಂತಾದವುಗಳ ಮಾಹಿತಿ ಗ್ರಾಹಕನಿಗೆ ಅವಶ್ಯವೆನಿಸಿದರೆ ಕೊಡಲೇ ಬೇಕು. ಅಲ್ಲದೆ ಸರಕನ್ನು ಉಪಯೋಗಿಸುವಾಗ ಏನೂ ತೊಂದರೆಯಾಗದಂತೆ ಸರಿಯಾಗಿ ಉಪಯೋಗಿಸುವ ಹಾಗೂ ಉಪಯೋಗಿಸಿದ ನಂತರ ಆಗುವ ಪರಿಣಾಮಗಳ ಮಾಹಿತಿ ಪಡೆಯುವ ಹಕ್ಕು ಗ್ರಾಹಕನಿಗೆ ಇದೆ.

**೪) ಆಯ್ಕೆಯ ಹಕ್ಕು :**

ಕಾಯ್ದೆ ಗ್ರಾಹಕನಿಗೆ ಸರಕು ಅಥವಾ ಸೇವೆಯನ್ನು ಆಯ್ಕೆಮಾಡುವ ಹಕ್ಕನ್ನು ಕೊಟ್ಟಿದೆ.

**೫) ಪ್ರಾತಿನಿಧ್ಯದ ಹಕ್ಕು :**

ಈ ಹಕ್ಕನ್ನು ಮೂರು ರೂಪದಲ್ಲಿ ವಿವರಿಸಬಹುದು.

೧. ಈ ಹಕ್ಕು ಎಂದರೇ ಗ್ರಾಹಕರ ಹಿತಾಸಕ್ತಿಗೆ ಪರಿಣಾಮಬೀರಲಾದ ನಿರ್ಣಯಗಳು ಮತ್ತು ಪಾಲಿಸಿಗಳನ್ನು ಮಾಡುವಾಗ ಸರ್ಕಾರಗಳು ಹಾಗೂ ಸಾರ್ವಜನಿಕ ಆಡಳಿತದವರು ಗ್ರಾಹಕರನ್ನು ವಿಚಾರಿಸುವ ಗ್ರಾಹಕ ಹಕ್ಕು.

೨. ಉತ್ಪಾದನಾ ನಿರ್ಣಯಗಳನ್ನು ಹಾಗೂ ಮಾರುಕಟ್ಟೆಯ ನಿರ್ಣಯಗಳನ್ನು ತೆಗೆದು ಕೊಳ್ಳುವಾಗ ಉತ್ಪಾದಕರು ಹಂಚಿಕೆದಾರರು ಮತ್ತು ಜಾಹಿರಾತುದಾರರು ಗ್ರಾಹಕರ ನಿರ್ಣಯಕ್ಕೆ ಬೆಲೆ ಕೊಡಬೇಕು.

೩. ಗ್ರಾಹಕರ ದೂರಿಗೆ ಕೋರ್ಟಿನಲ್ಲಿ ಕಾನೂನಿನ ಪ್ರೊಸಿಡಿಂಗ್ಸ್ ನಡೆಯುವಾಗ ಅದನ್ನು ಕೇಳುವ ಹಕ್ಕು

**೬) ಪರಿಹಾರ ಕೋರುವ ಹಕ್ಕು :**

ಈ ಹಕ್ಕಿನ ಮುಖಾಂತರ ಗ್ರಾಹಕರಿಗೆ ಅವರ ದೂರಿಗೆ ಬೆಲೆ ಕೊಡುವ ಭರವಸೆ ಸಿಕ್ಕಂತಾಗುತ್ತದೆ. ಈ ಹಕ್ಕಿನಿಂದ ಗ್ರಾಹಕನಿಗೆ,

೧. ಅನ್ಯಾಯದ ವ್ಯಾಪಾರಗಳಾದ ಬೆಲೆ ಹೆಚ್ಚಿಸುವಿಕೆ, ಕೆಳದರ್ಜೆಯ ಸರಕು ಮಾರಾಟ, ಅಪಾಯದ ಸರಕು ಮಾರಾಟ, ನಿತ್ಯ ಸೇವೆಯ ಕೊರತೆ ಮುಂತಾದವುಗಳ ವಿರುದ್ಧ ಪರಿಹಾರದ ಹಕ್ಕು.

೨. ದೋಷಪೂರಿತ ಸರಕುಗಳನ್ನು ಬದಲಾಯಿಸುವುದು ಅಥವಾ ದುಡ್ಡನ್ನು ವಾಪಸ ಪಡೆಯುವುದು.

೩. ಕಾನೂನಿನ ಪರಿಹಾರ.

೪. ದುಡ್ಡಿನ ಪರಿಹಾರ.

**೭) ಗ್ರಾಹಕ ಶಿಕ್ಷಣ ಹಕ್ಕು :**

ಮಾರುಕಟ್ಟೆಯ ವ್ಯವಹಾರಗಳನ್ನು ಅತ್ಯಂತ ಜಾಣ್ಮೆಯಿಂದ ನಿಭಾಯಿಸಲು ಬೇಕಾಗುವ ಶಿಕ್ಷಣದ ಹಕ್ಕು ಗ್ರಾಹಕರಿಗೆ ಇದೆ.

**೮) ಪರಿಸರ ಹಕ್ಕು :**

ಸರಕನ್ನು ಉತ್ಪಾದಿಸುವಾಗ ಪರಿಸರ ಮಾಲಿನ್ಯವಾಗುವುದನ್ನು ತಡೆಯುವ ಹಕ್ಕು ಗ್ರಾಹಕರಿಗೆ ಕಾನೂನು ಅನುವು ಮಾಡಿಕೊಟ್ಟಿದೆ.

ನಾಗರಿಕ ಅಥವಾ ಗ್ರಾಹಕ ಯಾರೇ ಆದರೂ ಕೇವಲ ಹಕ್ಕುಗಳನ್ನು ಪಡೆಯಲು ಸಾಧ್ಯವಿಲ್ಲ. ಹಕ್ಕುಗಳ ಜೊತೆಗೆ ಜವಾಬ್ದಾರಿಯಾಗಿ ಇರಬೇಕಾಗುತ್ತದೆ. ಗ್ರಾಹಕನಿಗೆ ಕಾನೂನಿನ ಅಡಿಯಲ್ಲಿ ಹಕ್ಕುಗಳನ್ನು ಕೊಟ್ಟು ರಕ್ಷಿಸಿದರೂ ಅವನಿಗೆ ತನ್ನದೇ ಕರ್ತವ್ಯಗಳು ಇರುತ್ತವೆ. ಅದರಿಂದ ಉತ್ತಮ ಗ್ರಾಹಕ ಉತ್ತಮ ಗ್ರಾಹಕತ್ವ ಹಾಗೂ ಉತ್ತಮ ನ್ಯಾಯಕ್ಕಾಗಿ ಗ್ರಾಹಕ ತನ್ನ ಕರ್ತವ್ಯಗಳನ್ನು ಅರಿತು ನಡೆಯಬೇಕು. ಅಂಥಹ ಕರ್ತವ್ಯಗಳ ಅರಿವು ಗ್ರಾಹಕರಲ್ಲಿ ಮೂಡಿಸುವ ಅವಶ್ಯಕತೆ ಇರುತ್ತದೆ. ಉತ್ತಮ ಗ್ರಾಹಕನ ಕರ್ತವ್ಯಗಳು ಈ ಕೆಳಗಿನಂತೆ ವಿವರಿಸಬಹುದು.

೧. ಖರೀದಿಯ ಪೂರ್ಣ ಯೋಜನೆಯನ್ನು ತಯಾರಿಸಿಕೊಳ್ಳಬೇಕು ಪ್ರತಿಯೊಬ್ಬ ಗ್ರಾಹಕ ಯಾವ ವಸ್ತು ಮತ್ತು ಸೇವೆ ಖರೀದಿಸಲು ಬಯಸುವರೋ ಅದರ ಪೂರ್ಣ ಯೋಜನೆ ರೂಪಿಸಿಕೊಂಡು ವಸ್ತು ಕೊಂಡುಕೊಳ್ಳಬೇಕು. ಆತುರ ಪಟ್ಟು ಖರೀದಿಸಬಾರದು.

೨. ಖರೀದಿಸುವ ವಸ್ತುವಿನ ಬಗ್ಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಬೇಕು. ಉತ್ತಮ ಗ್ರಾಹಕ ಸರಕು ಮತ್ತು ಸೇವೆ ಖರೀದಿಸುವವನು ಅದರ ಬಗ್ಗೆ ಎಲ್ಲಾ ವಿವರಗಳನ್ನು ಪಡೆದುಕೊಂಡು ಅವಲೋಕಿಸಿ ನಂತರವೇ ಖರೀದಿಸಬೇಕು.

೩. ಗ್ರಾಹಕನು ತಾನು ಇಷ್ಟಪಡುವ ವಸ್ತುವನ್ನು ಮಾತ್ರ ಅಯ್ಕೆ ಮಾಡಿಕೊಳ್ಳಬೇಕು. ಇದರ ಅರ್ಥ ಗ್ರಾಹಕನಿಗೆ ತನಗಿಷ್ಟವಾದ ವಸ್ತು ಸೇವೆಯನ್ನು ಆಯ್ಕೆ ಮಾಡುವ ಸ್ವಾತಂತ್ರ್ಯವಿದೆ. ನಮಗೆ ಇಷ್ಟವಾದುದ್ದನ್ನು ಕೊಂಡುಕೊಳ್ಳಬೇಕು, ಬೇರೆಯವರ ಒತ್ತಡಕ್ಕೆ ಒಳಗಾಗಿ ಖರೀದಿಸಬಾರದು.

೪. ಖರೀದಿಸುವ ನಿರ್ಧಾರ ಗ್ರಾಹಕನದಾಗಿರಬೇಕು. ಅನೇಕ ಸಂದರ್ಭದಲ್ಲಿ ಖರೀದಿ ಮಾರಾಟಗಾರರ ಒತ್ತಡಕ್ಕೆ ಮಣಿದು ಆಗುತ್ತದೆ, ಹೀಗಾಗಬಾರದು. ಖರೀದಿಯ ಬಗ್ಗೆ ಅಂತಿಮ ನಿರ್ಧಾರ ಗ್ರಾಹಕನದಾಗಿರಬೇಕು.

೫. ಗ್ರಾಹಕನಿಗೆ ಕೊಳ್ಳುಬಾಕತನ ಇರಬಾರದು. ವಸ್ತುಗಳನ್ನು ಕಂಡಕೂಡಲೇ ಖರೀದಿಸುವ ಹಂಬಲವನ್ನು ತೊರೆಯಬೇಕು. ಸರಕು/ಸೇವೆ ನೋಡಿದಾಕ್ಷಣ ಮೋಹಿತರಾಗಿ ಖರೀದಿಸುವುದು ಅಪೇಕ್ಷಣಿಯವಲ್ಲ, ಸರಿಯಾದುದಲ್ಲ. ಬದಲಿಗೆ ಅದರ ಕುರಿತು ಪೂರ್ಣ ಅವಲೋಕಿಸಿ ಕೊಂಡುಕೊಳ್ಳಬೇಕು.

೬. ಗ್ರಾಹಕನಿಗೆ ಗುಣಮಾಪಕ ಐ.ಎಸ್.ಐ. ಅಗ್ಮಾರ್ಕ ಗುರುತು ಇರುವ ವಸ್ತುಗಳ ಪರಿಚಯ ಇರಬೇಕು ಅಂಥಹ ಮಾರ್ಕಗಳು ಇರುವ ವಸ್ತುಗಳ ಉತ್ತಮ ಗುಣಮಟ್ಟದ ಕುರಿತು ದೃಢೀಕರಣ ಇರುತ್ತದೆ.

೭. ಕಾಳಸಂತೆಯಲ್ಲಿ ಖರೀದಿಸುವ ಚಟವನ್ನು ಗ್ರಾಹಕ ಬಿಟ್ಟು ಬಿಡಬೇಕು. ಗ್ರಾಹಕ ಮೋಸಹೋಗುವುದೇ ಕಾಳಸಂತೆ ಖರೀದಿಯಲ್ಲಿ. ಕಡಿಮೆ ಬೆಲೆ ಅಥವಾ ಸುಲಭವಾಗಿ

ಸಿಗುತ್ತದೆ ಎಂದು ಕಾಳಸಂತೆಯಲ್ಲಿ ಕೊಳ್ಳಬಾರದು. ಪರಿಚಿತ/ಅಂಗೀಕೃತ ಮಾರಾಟಗಾರರಿಂದ ಖರೀದಿಸಬೇಕು.

೮. ಜಾಹೀರಾತುಗಳಿಗೆ ಮರುಳಾಗಬಾರದು. ಜಾಹೀರಾತು ನೋಡಿ ಸರಕು ಸೇವೆಯನ್ನು ಖರೀದಿಸುವ ಗ್ರಾಹಕರು ತುಂಬಾ ಎಚ್ಚರವಾಗಿರಬೇಕು. ಜಾಹೀರಾತುಗಳು ಮರಳು ಮಾಡುವ ಮಾಧ್ಯಮಗಳು, ಇವುಗಳನ್ನು ನೋಡಿ ಖರೀದಿಸಬಾರದು.

೯. ಉತ್ತಮ ಗ್ರಾಹಕನ ಲಕ್ಷಣ ಬೇಕಾದದನ್ನೇ ಖರೀದಿಸಿ ಅನಗತ್ಯ ಖರೀದಿಗಳಿಂದ ದೂರ ಸರಿದು ಸಮಯ ಸಂಪನ್ಮೂಲವನ್ನು ಉಳಿಸಿ.

೧೦. ಪರಿಸರದ ಕುರಿತು ಕಾಳಜಿ ಗ್ರಾಹಕನ ಕರ್ತವ್ಯವಾಗಿದೆ.ಗ್ರಾಹಕ ನಮ್ಮ ಸುತ್ತಲಿನ ಭೌತಿಕ ಮತ್ತು ಪರಿಸರ ರಕ್ಷಣೆ ಮಾಡಬೇಕು.

೧೧. ಗ್ರಾಹಕರು ಖರೀದಿಸಿದ ವಸ್ತುವಿಗೆ ಸಂಬಂಧಿಸಿದ ಕಾಗದ ಪತ್ರಗಳನ್ನು ಭದ್ರವಾಗಿಡಬೇಕು. ಯಾವುದೇ ಸರಕು ಸೇವೆಗಳನ್ನು ಖರೀದಿಸುವಾಗ ಸೃಷ್ಟಿಯಾಗುವ ದಾಖಲೆಗಳನ್ನು ಜೋಪಾನವಾಗಿಡಬೇಕು.

೧೨. ಸರಕು ಸಾಮಾನು ಖರೀದಿ ಮಾಡುವಾಗ ಮಾರಾಟಗಾರರು ಅಧಿಕೃತರು ಎನ್ನುವುದನ್ನು ದೃಢಪಡಿಸಿಕೊಳ್ಳಬೇಕು. ವಸ್ತುಗಳನ್ನು ಬೀದಿಯಲ್ಲಿ ಅಥವಾ ಅನಧೀಕೃತ ಅಂಗಡಿ ವ್ಯಕ್ತಿಗಳಿಂದ ಖರೀದಿಸಬಾರದು.

೧೩. ಗ್ರಾಹಕರು ಗಮನಕ್ಕೆ ವಂಚನೆ ಕಂಡುಬಂದಾಗ ದೂರು ಕೊಡಲು ಹಿಂಜರಿಯಬಾರದು. ಸರಕು ಸೇವೆಗಳ ಖರೀದಿಯಲ್ಲಿ ಯಾವುದೇ ಅನ್ಯಾಯ/ವಂಚನೆ ಕಂಡುಬಂದರೆ ಮರೆಯದೇ ಗ್ರಾಹಕ ವೇದಿಕೆಗಳಿಗೆ ದೂರು ಸಲ್ಲಿಸಬೇಕು.

೧೪. ನಕಲಿ ವಸ್ತುವಿನ ಬಗ್ಗೆ ಉತ್ಪಾದಕರಿಗೆ ಮತ್ತು ಇಲಾಖಾ ಅಧಿಕಾರಿಗಳಿಗೆ ಮಾಹಿತಿ ನೀಡುವುದು ಗ್ರಾಹಕನ ಕರ್ತವ್ಯವಾಗಿರುತ್ತದೆ.[೧೭]

**ಬ) ಗ್ರಾಹಕ ವ್ಯಾಜ್ಯ ಪರಿಹಾರ**

ಗ್ರಾಹಕನಿಗೆ ಸರಕು ಮತ್ತು ಸೇವೆಯನ್ನು ಕೊಳ್ಳುವಾಗ ಕೊರತೆ, ನ್ಯೂನ್ಯತೆ, ಅನ್ಯಾಯ ಮುಂತಾದ ಯಾವುದೇ ವಿಷಯಗಳ ಕುರಿತು ಗಮನಕ್ಕೆ ಬಂದರೆ ಗ್ರಾಹಕ ಈ ಕೆಳಕಂಡ ಗ್ರಾಹಕ ನ್ಯಾಯಾಲಯಗಳಲ್ಲಿ ಪರಿಹಾರ ಕೋರಬಹುದು.

೧. ರಾಷ್ಟ್ರಮಟ್ಟದಲ್ಲಿ :

ರಾಷ್ಟ್ರೀಯ ಗ್ರಾಹಕ ವ್ಯಾಜ್ಯ ಪರಿಹಾರ ಆಯೋಗ

೨. ರಾಜ್ಯ ಮಟ್ಟದಲ್ಲಿ :

ಅ) ರಾಜ್ಯ ಗ್ರಾಹಕ ವ್ಯಾಜ್ಯ ಪರಿಹಾರ ಆಯೋಗ ಬ) ರಾಜ್ಯ ಗ್ರಾಹಕರ ರಕ್ಷಣಾ ಪರಿಷತ್ತು

೩. ಜಿಲ್ಲಾ ಮಟ್ಟದಲ್ಲಿ :

ಅ) ಜಿಲ್ಲಾ ಗ್ರಾಹಕ ಪರಿಹಾರ ವೇದಿಕೆ ಬ) ಗ್ರಾಹಕರ ರಕ್ಷಣಾ ಪರಿಷತ್ತು

**ಕ) ಗ್ರಾಹಕ ಕಲ್ಯಾಣ ಕಾರ್ಯಕ್ರಮಗಳು :**

ಗ್ರಾಹಕ ಕಲ್ಯಾಣಕ್ಕಾಗಿ ರಾಜ್ಯದಲ್ಲಿ ಅನೇಕ ಸಂಸ್ಥೆಗಳನ್ನು ಪ್ರಾರಂಭಿಸಲಾಗಿದೆ. ಹಾಗೇಯೆ ಅನೇಕ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಅವುಗಳ ಮೂಲಕ ಗ್ರಾಹಕ ಜಾಗೃತಿ ಕಲ್ಯಾಣ ಹಿತರಕ್ಷಣೆ ಹಾಗೂ ಪರಿಹಾರ ಕಾರ್ಯಕ್ರಮಗಳನ್ನು ರೂಪಿಸಲಾಗುತ್ತಿದೆ. ಅಂತಹ ಕಾಯಕ್ರಮಗಳೆಂದರೆ,

* ಗ್ರಾಹಕ ಮಾರ್ಗದರ್ಶಿ ಅಂಗ.
* ರಾಜ್ಯ ಗ್ರಾಹಕರ ಕಲ್ಯಾಣ ನಿಧಿ.
* ವಿಶ್ವ ಗ್ರಾಹಕರ ಹಕ್ಕುಗಳ ದಿನಾಚರಣೆ.
* ರಾಷ್ಟ್ರೀಯ ಗ್ರಾಹಕರ ದಿನಾಚರಣೆ.
* ಶಾಲಾ ಗ್ರಾಹಕರ ಕ್ಲಬ್.
* ಗ್ರಾಹಕರ ಅದಾಲತ್[೧೮].

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರನ್ನು ೧೯೯೩ ರಲ್ಲಿ ತಿದ್ದುಪಡೆ ತರಲಾಯಿತು. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೯೩ ಜೂನ್ ೧೮ ರಂದು ಜಾರಿಗೆ ಬಂದಿತು.

೧. ಹಿಂದಿನ ಕಾಯಿದೆಯನ್ನು ವಿಸ್ತರಿಸಿ ನಿರ್ಬಂಧಿತ ವ್ಯವಹಾರ ಪದ್ಧತಿಯಲ್ಲಿ ಗ್ರಾಹಕರಿಗೆ ತೊಂದರೆಯಾದರೆ ಅವನು ದೂರವನ್ನು ದಾಖಲಿಸಬಹುದು.

೨. ಸ್ವಯಂ ಉದ್ಯೋಗಿ ಗ್ರಾಹಕನಿಗೆ ತನ್ನ ಜೀವನ ನಡೆಸುವ ಗಳಿಕೆಗೆ ಖರೀದಿಸಿದ ಸರಕಿನಲ್ಲಿ ದೋಷ ಕಂಡು ಬಂದರೆ ಅಂಥಹ ಗ್ರಾಹಕ ಪರಿಹಾರ ವೇದಿಕೆಗೆ ದೂರನ್ನು ದಾಖಲಿಸಬಹುದು.

೩. ಗೃಹ ನಿರ್ಮಾಣಕ್ಕೆ ಸಂಬಂಧಿಸಿದ ಸೇವೆಗಳನ್ನು ಈ ಕಾಯದೆಯಲ್ಲಿ ಪರಿಗಣಿಸಲಾಗಿದೆ.

೪. ಒಂದೇ ತೆರೆನಾದ ಆಸಕ್ತ ಗ್ರಾಹಕರ ಗುಂಪು ವರ್ಗಿಕೃತ ದೂರನ್ನು ದಾಖಲಿಸಲು ಅನುವು ಮಾಡಿಕೊಡುವುದು.

೫. ಪರಿಹಾರ ಏಜೆನ್ಸಿಗಳ ನ್ಯಾಯಾಂಗೇತರ ಸದಸ್ಯರ ಆಯ್ಕೆಗಾಗಿ ಆಯ್ಕೆ ಕಮೀಟಿಯನ್ನು ಸಂಯೋಜನೆ ಅನುವು ಮಾಡಿಕೊಡುವುದು.

೬. ಹಣಕಾಸಿನ ನ್ಯಾಯ ಪರಿಮಿತಿಯನ್ನು ಹೆಚ್ಚಿಸುವುದು.

೭. ಪರಿಹಾರ ಏಜೆನ್ಸಿಗಳಿಗೆ ಹೆಚ್ಚಿನ ಅಧಿಕಾರ ಕೊಡುವುದು.

ಅ) ಪಾರ್ಟಿಯ ವೆಚ್ಚವನ್ನು ಕೊಡಿಸುವುದು.

ಆ) ಸಾರ್ವಜನಿಕರಿಗೆ ಅಪಾಯ ತರುವ ಸರಕನ್ನು ಹಿಂದಕ್ಕೆ ತರಿಸುವುದು.

೮. ಕ್ಷುದ್ರ, ರೇಗಿಸುವಂತಹ ದೂರುಗಳನ್ನು ಕೊಟ್ಟಂತಹ ವ್ಯಕ್ತಿಯನ್ನು ಶಿಕ್ಷೆಗೆ ಒಳಪಡಿಸುವ ಅಧಿಕಾರ.

೯. ದೂರಗಳನ್ನು ಧಾಖಲಿಸುವ ಅವಧಿಯನ್ನು ಒಂದು ವರ್ಷಕ್ಕೆ ವಿಸ್ತರಿಸುವುದು.

೨೦೦೨ ರಲ್ಲಿ ಮತ್ತೆ ಗ್ರಾಹಕ ಸಂರಕ್ಷಣಾ ಕಾಯ್ದೆಯನ್ನು ತಿದ್ದುಪಡಿ ತಂದು ಕೆಲವೊಂದು ವಿಷಯಗಳನ್ನು ಒಳಪಡಿಸಿ ಮತ್ತು ಕೆಲವೊಂದು ವಿಷಯಗಳನ್ನು ತಿದ್ದುಪಡಿ ತರಲಾಯಿತು. ಇದನ್ನು ೧೫-೩-೨೦೦೩ ರಿಂದ ಜಾರಿಗೆ ತರಲಾಯಿತು.

೧. ರಾಷ್ಟ್ರ ಆಯೋಗ, ರಾಜ್ಯ ಆಯೋಗದ ಪೀಠ ಮತ್ತು ಸಂಚಾರಿ ಪೀಠ ಸೃಷ್ಟಿಸಲು ಅನವು ಮಾಡಿಕೊಡುವುದು

೨. ದೂರುಗಳನ್ನು ದಾಖಲಿಸಲು ಸೂಚನೆಗಳನ್ನು ಕಕ್ಷಿದಾರರಿಗೆ ಕೊಡುವುದು. ದೂರುಗಳನ್ನು ಪರಿಶೀಲಿಸಿ ನಿರ್ಣಯಿಸುವ ಅವಧಿಯ ಮಿತಿಯನ್ನು ಹೊರಡಿಸುವುದು. ಮುಂದಿನ ಮೇಲ್ಮನವಿಗೆ ಪ್ರೊಪೊಸಲಗಳನ್ನು ತಯಾರಿಸುವ ಅಧಿಸೂಚನೆಗಳನ್ನು ಹೊರಡಿಸುವುದು.

೩. ಈ ತಿದ್ದುಪಡಿಯ ಕಾನೂನಿನ ಪ್ರಕಾರ ಸಾಧಾರಣವಾಗಿ ದೂರುಗಳ ನಿರ್ಣಯವನ್ನು ಮುಂದೂಡಲು ಬರುವುದಿಲ್ಲ, ಮುಂದೂಡಿದರೆ ಅದಕ್ಕೆ ಕಾರಣವನ್ನು ಕೊಡಬೇಕು.

೪. ೨೦೦೨ ರ ಕಾನೂನಿನ ಪ್ರಕಾರ ಸರಕು, ಸೇವೆಗಳ ಬೆಲೆ ಮತ್ತು ಪರಿಹಾರ ಹೀಗೆ ಆಗುವಂತೆ ಜಾರಿಗೆ ತರಲಾಗಿವೆ.

| | |
|---|---|
| ೧. ಗ್ರಾಹಕ ವೇದಿಕೆ | ರೂ. ೨೦ ಲಕ್ಷ |
| ೨. ರಾಜ್ಯ ಆಯೋಗ | ರೂ. ೨೦ ಲಕ್ಷದಿಂದ ೧ಕೋಟಿ |
| ೩. ರಾಷ್ಟ್ರ ಆಯೋಗ | ರೂ. ೧ ಕೋಟಿಗೆ ಮಿಕ್ಕ |

೧. ದೂರುಗಳನ್ನು ದಾಖಲಿಸಲು (ಗ್ರಾಹಕ ವಾಜ್ಯಗಳ ಪರಿಹಾರ ಏಜೆನ್ಸಿಗಳಲ್ಲಿ) ಶುಲ್ಕವನ್ನು ನಿರ್ಧರಿಸುವುದು.

೨. ಮೇಲ್ಮನವಿಗೆ ಹೋಗುವ ಮೊದಲು ನಿರ್ಣಾಯಕ ಪರಿಹಾರದ ೫೦% ಡಿಪಾಜಿಟ್ ಅಥವಾ

*ಅ) ರೂ ೨೫೦೦೦ ರಾಜ್ಯ ಆಯೋಗಕ್ಕೆ ಮೊರೆ ಹೋಗಲು*

*ಬ) ರೂ ೩೫೦೦೦ ರಾಷ್ಟ್ರ ಆಯೋಗಕ್ಕೆ ಮೊರೆ ಹೋಗಲು*

*ಕ) ರೂ ೫೦೦೦೦ ಉಚ್ಚ ನ್ಯಾಯಾಲಯಕ್ಕೆ ಮೊರೆ ಹೋಗಲು*

೩. ಗ್ರಾಹಕ ವ್ಯಾಜ್ಯ ಪರಿಹಾರ ಎಜೆನ್ಸಿಗಳಿಂದ ವಾಣಿಜ್ಯ ಉದ್ದೇಶದ ಸೇವೆಗಳನ್ನು ಹೊರಗೆ ಇಡುವುದು.

೪. ಗ್ರಾಹಕ ವ್ಯಾಜ್ಯ ಪರಿಹಾರ ಎಜೆನ್ಸಿಯ ಸದಸ್ಯರಾಗಲು ಕನಿಷ್ಟ ಅರ್ಹತೆ ಮತ್ತು ಅನರ್ಹತೆಗಳನ್ನು ಹೊಂದುವುದು.

೫. ಜಿಲ್ಲಾ ವೇದಿಕೆ ರಾಜ್ಯ ಆಯೋಗ ಮತ್ತು ರಾಷ್ಟ್ರ ಆಯೋಗದ ಅಧ್ಯಕ್ಷ ಮತ್ತು ಸದಸ್ಯರ ಮರು ನೇಮಕದ ಕುರಿತು ಪ್ರಸ್ತಾವನೆ.

೬. ನಿರ್ಭಂದಿತ ವ್ಯಾಪಾರ ಪದ್ದತಿಯಿಂದ ಅಪಾಯವಾಗುವ ಸೇವೆಗಳನ್ನು ಒದಗಿಸುವವರ ವಿರುದ್ಧ ಕ್ರಮ ಜರುಗಿಸುವ ಅವಕಾಶವನ್ನು ಮುಂದುವರಿಸುವುದು.

೭. ಅನುಚಿತ ವ್ಯಾಪಾರ ಪದ್ದತಿಯಲ್ಲಿ ಉತ್ತೇಜಕ ಸರಕು ಮತ್ತು ಸೇವೆಯನ್ನು ಸೇರಿಸುವುದು.

೮. ಕ್ಲಾಸ್ ಒನ್ ಜುಡಿಶಿಯಲ್ ಮೆಜಿಸ್ಟ್ರೇಟ್ ಅಧಿಕಾರದ ಸಮನಾಗಿ ಗ್ರಾಹಕ ವಾಜ್ಯ ಪರಿಹಾರ ಎಜೆನ್ಸಿಗಳಿಗೆ ಅಧಿಕಾರ ನೀಡುವುದು.

೯. ರಾಜ್ಯ ಆಯೋಗ ಮತ್ತು ರಾಷ್ಟ್ರ ಆಯೋಗಗಳು ತಮ್ಮ ಪ್ರಧಾನ ನಗರದಲ್ಲಿ ಅಲ್ಲದೆ ಬೇರೆ ನಗರಗಳ ಆಯೋಗಗಳಲ್ಲಿ ಮೊಕದ್ದಮೆ ವಿಚಾರಣೆ ಇಟ್ಟುಕೊಳ್ಳಬಹುದು.ಕರೆ ಅಜ್ಞಾಪನೆಯನ್ನು ರಿಜಿಸ್ಟರ್ಡ್ ಎ.ಡಿ., ಕೊರಿಯರ್, ಫ್ಯಾಕ್ಸ್ ಅಥವಾ ಆಧುನಿಕ ವಿಧಾನಗಳನ್ನು ಉಪಯೋಗಿಸಬಹುದು.

೧೦. ಈ ತಿದ್ದುಪಡೆಯ ನಂತರ ಗ್ರಾಹಕ ಅದಾಲತ್ ಜಿಲ್ಲಾಧಿಕಾರಿಗೆ ಆದೇಶಿಸಿ ಸರಕು ಹಾಗೂ ಸೇವೆಯನ್ನು ಕೊಡುವವನ ಆಸ್ತಿಯನ್ನು ಮುಟ್ಟುಗೋಲ ಹಾಕಿಸಬಹುದು.[೧೯]

ಅಧ್ಯಾಯದಲ್ಲಿ ಗ್ರಾಹಕ ಪದದ ಅರ್ಥವನ್ನು ವಿಶ್ಲೇಷಿಸಲಾಗಿದೆ. ಈ ಪದದ ವ್ಯಾಖ್ಯೆಗೆ ಸಂಬಂಧಿಸಿದ ಗುಣಲಕ್ಷಣಗಳನ್ನು ಹೊಂದಿದ ಗ್ರಾಹಕ ಮಾತ್ರ ಗ್ರಾಹಕ ವೇದಿಕೆಯ ವ್ಯಾಪ್ತಿಯಲ್ಲಿ ಬರುತ್ತಾನೆ. ಗ್ರಾಹಕ ವೇದಿಕೆಯ ಸೌಲಭ್ಯ ಪಡೆಯಲು, ಗ್ರಾಹಕ ಖರೀದಿಯ ವಸ್ತು ಅಥವಾ ಸೇವೆಗೆ ಬೆಲೆಯನ್ನು ಕೊಡಬೇಕು. ಉಡುಪಿ ಜಿಲ್ಲಾ ವಲಯದಲ್ಲಿ ಬರುವ ಬಸ್ರೂರ ಸ್ವಯಂ ಗ್ರಾಹಕ ಸಂಸ್ಥೆಯು ಗ್ರಾಹಕ ಪದವನ್ನು ವಿಶ್ಲೇಷಿಸುತ್ತಾ. ಗ್ರಾಹಕ ಏನಿಸಿಕೊಳ್ಳಲು ಕೇವಲ ಬೆಲೆ ಮಾತ್ರ

ಮಾನದಂಡವಾಗಬಾರದು. ನೈಸರ್ಗಿಕವಾಗಿ ದೊರೆಯುವ ವಸ್ತುಗಳಿಗೆ, ಸೇವೆಗೆ ನಾವು ಯಾವುದೇ ಬೆಲೆಯನ್ನು ಕೊಡುವುದಿಲ್ಲ. ಆದರೇ ಪ್ರತಿ ನಾಗರೀಕನಿಗೆ ನೈಸರ್ಗಿಕವಾಗಿ ದೊರೆಯುವ ಸಂಪನ್ಮೂಲಗಳ ಮೇಲೆ ಹಕ್ಕಿರುತ್ತದೆ.

ಸಾಮಾನ್ಯವಾಗಿ ಗ್ರಾಹಕತ್ವದ ಅರ್ಥವನ್ನು ಗ್ರಾಹಕ ಸಂರಕ್ಷಣೆ ಮತ್ತು ಅತಿರೇಕದ ವಾಸ್ತವವಾದ ಎಂದು ವಿಶ್ಲೇಷಿಸಿದೆ. ಗ್ರಾಹಕತ್ವ ಎಂದರೆ ಗ್ರಾಹಕನಿಗೆ ತನ್ನ ಹಕ್ಕು ಮತ್ತು ಕರ್ತವ್ಯಗಳ ಅರಿವು ಇದ್ದು ಅನ್ಯಾಯಗಳ ವಿರುದ್ದ ಕಾರ್ಯೋನ್ಮುಖನಾಗುವುದು. ಗ್ರಾಹಕತ್ವದ ಅರ್ಥ ಬದಲಾದ ಸಮಾಜದ ಜೊತೆ ಬದಲಾಗುತ್ತ ಹೋಗುತ್ತದೆ. ಜಾಗತೀಕರಣದ ದಾರಿಯಲ್ಲಿರುವ ವಿಶ್ವ ಕೂಡ ಅದಕ್ಕೆ ಹೊಂದುವಂತಹ ಗ್ರಾಹಕತ್ವದ ಅರ್ಥವನ್ನು ಪರಿಗಣಿಸಬೇಕಾಗಿದೆ. ಬೇರೆ ದೇಶಗಳಿಗೆ ಅನ್ವಯಿಸುವ ಗ್ರಾಹಕತ್ವವನ್ನು ಈಗ ಭಾರತ ಒಪ್ಪಿಕೊಳ್ಳಬೇಕಾಗಿದೆ. ಈಗಿನ ಗ್ರಾಹಕತ್ವ ಬಳಕೆಗಿಂತ ಹೆಚ್ಚಾಗಿ ಕಾಪಾಡುವಿಕೆಗೆ ಸಂಬಂದಿಸಿದ್ದಾಗಿದೆ. ಮಾರುಕಟ್ಟೆ ಈಗ ಗ್ರಾಹಕನಿಗೆ ಸಂಬಂಧಿಸಿರದೆ ಜನತೆಗೆ ಅನ್ವಯಿಸಿರುವುದರಿಂದ ಗ್ರಾಹಕ ಚಳುವಳಿ ಜನಸಾಮಾನ್ಯರಿಗೆ ಅನ್ವಯ ಆಗತೊಡಗಿದೆ. ಹಿಂದಿನ ಗ್ರಾಹಕತ್ವದ ಅರ್ಥದ ಬದಲಾಗಿ ನಾವೆಲ್ಲ ಹೊಸ ಗ್ರಾಹಕತ್ವದ ಅರ್ಥವನ್ನು ಒಪ್ಪಿಕೊಳ್ಳಬೇಕಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾದ ಗ್ರಾಹಕ ಸಂರಕ್ಷಣೆಗೆ ಸಂಬಂಧಿಸಿದ ಹಲವು ಶಾಸನಗಳು, ಗ್ರಾಹಕನ ಹಕ್ಕುಗಳಿಗೆ ರಕ್ಷಣೆ ಒದಗಿಸಲು ವಿಫಲವಾಗಿವೆ. ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆಯಾಗಿ, ಎಲ್ಲ ದೇಶಗಳ ವ್ಯಾಪಾರಿ ಮಾರುಕಟ್ಟೆಗಳು ಮುಕ್ತವಾದಾಗ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಸ್ಥಾಪನೆಯಾಗತೊಡಗಿವೆ. ಅವುಗಳ ದುರಾಡಳಿತದಲ್ಲಿ ಗ್ರಾಹಕ ನಲುಗುತ್ತಿದ್ದಾನೆ. ಮಾರುಕಟ್ಟೆಯ ಮೇಲೆ ಪ್ರಭಾವಿ ನಿರ್ಬಂಧಗಳನ್ನು ಹಾಕಲಾರದೆ ಗ್ರಾಹಕನ ಕಲ್ಯಾಣ ಅಸಾಧ್ಯ. ನಮ್ಮ ದೇಶದಲ್ಲಿ ಗ್ರಾಹಕ ಸಂರಕ್ಷಣೆಗೆ ಇಬ್ಬಗೆಯ ಚಿತ್ರದಿಂದ ಕೂಡಿದೆ. ಒಂದು ಬದಿಯಲ್ಲಿ ಸಮಾಜದ ಒಂದು ವರ್ಗದ ಜನರಿಗೆ ಜೀವನದ ಅವಶ್ಯಕತೆ ಒದಗಿಸುವುದು. ಅದೇ ಸಮಯಕ್ಕೆ ಇನ್ನೊಂದು ವರ್ಗದ ಜನರ ಮಾರುಕಟ್ಟೆಯ ಹಕ್ಕುಗಳನ್ನು ರಕ್ಷಿಸುವುದು. ಗ್ರಾಹಕತ್ವದ ತಿಳುವಳಿಕೆ ನಮ್ಮ ದೇಶದ ಹಳ್ಳಿಗಳಲ್ಲಿ ಇಲ್ಲವೇ ಇಲ್ಲ.

ಗ್ರಾಹಕ ಸಂರಕ್ಷಣಾ ಕಾಯ್ದೆ ಅನ್ವಯಿಸುವುದು, ಗ್ರಾಹಕ ವಸ್ತುವನ್ನು ಬೆಲೆ ಕೊಟ್ಟುಕೊಂಡಾಗ, ಸಾಮಾನ್ಯ ಜನರು ಬೆಲೆ ಕೊಡದೆ ಉಪಯೋಗಿಸಿದ ವಸ್ತು ಅಥವಾ ಸೇವೆಯ ನ್ಯೂನ್ಯತೆಗೆ ಕಾಯ್ದೆಯಲ್ಲಿ ಸ್ಥಾನವಿಲ್ಲ. ಅದರ ಉದ್ದೇಶವಾದ, ಕಡಿಮೆ ಖರ್ಚಿನ, ಸರಳವಾದ ಹಾಗೂ ಅಸಂಪ್ರದಾಯಕ ನ್ಯಾಯ ಒದಗಿಸುವುದು ಆದರೆ ಕಾಯ್ದೆಯ ವ್ಯಾಪ್ತಿ ಈ ಪ್ರಮುಖ ಉದ್ದೇಶದಲ್ಲಿ ವಿಫಲತೆ ಅನುಭವಿಸುತ್ತಿದೆ.

ಟಿಪ್ಪಣಿಗಳು :


೧. ಪಾಟೀಲ ಜೆ.ಎಸ್ (೨೦೦೭) ಮನುಸ್ಮೃತಿ (೮೦೦ ಕ್ರಿ.ಪೂ ೩೦೦ ಕ್ರಿ. ಪೂ) – "ಕಂಜುಮರ್ಸ ಪೋರಮ್ ಆಟ್ ಇಂಟರನ್ಯಾಶನಲ್" ಲೆವಲ್ ಜಿ.ಕೆ. ಲಾ ಕಾಲೇಜು, ಹುಬ್ಬಳ್ಳಿ.

೨. ಚಾಂದೆ ಎಂ. ಬಿ. (೨೦೦೪) ಕೌಟಿಲ್ಯನ ಅರ್ಥಶಾಸ್ತ್ರ –ಅಟ್ಲಾಂಟಿಕ ಪಬ್ಲಿಷರ್ಸ ಆಂಡ್ ಡಿಸ್ಟ್ರಿಬ್ಯುಟರ್ಸ ನವದೆಹಲಿ.

೩. ನಂದೀಮಠ ಓಂಪ್ರಕಾಶ (೨೦೦೭) – "ಕಂಜುಮರ್ಸ ಆಂಡ್ ಕಂಜಮರ್ಸ ಪ್ರೊಟೆಕ್ಷನ್ ಲಾ ಇನ್ ಇಂಡಿಯಾ". ಜಿ.ಕೆ. ಲಾ ಕಾಲೇಜು, ಹುಬ್ಬಳ್ಳಿ.

೪. "ಕಂಜುಮರ್ಸ ಸರ್ವಾವೈರ ಎಕ್ಸ–ಪೇಷೆಂಟ್ಸ ಮುವಮೆಂಟ" (೩೧.೦೭.೨೦೦೮)– ವಿಕಿಪಿಡಿಯಾ ಅಂತರ್ಜಾಲದಲ್ಲಿ ಮಾಹಿತಿ.

೫. "ಆಹಾರ ಜಾಗೃತಿ ಕೈಪಿಡಿ (೨೦೦೭)– ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಚಾಮರಾಜನಗರ ಜಿಲ್ಲೆ.

೬. ವೆಂಕಟೇಶ್ವರ ಎಚ್. ಆರ್. (೨೦೦೩) ಪಿಎಚ್.ಡಿ. ಮಹಾಪ್ರಬಂಧ "ಕಂಜುಮರ್ಸ ಪ್ರೊಟೆಕ್ಷನ್ ಇನ್ ಕರ್ನಾಟಕ – ಡೈಗ್ನೊಸ್ಟಿಕ ಸ್ಟಡಿ".

೭. ಅಖಿಲ ಭಾರತೀಯ ಗ್ರಾಹಕ ಪಂಚಾಯತ್ ಮೈಸುರು (೨೦೦೭) – "ಗ್ರಾಹಕ ಹಿತರಕ್ಷಣಾ ಕಾಯ್ದೆ ೧೯೮೬" ರ ಕೈಪಿಡಿ.

೮. ವೆಂಕಟೇಶ್ವರ ಎಚ್.ಆರ್. (೨೦೦೩) ಪಿಎಚ್.ಡಿ ಮಹಾಪ್ರಬಂಧ – "ಕಂಜುಮರ್ಸ ಪ್ರೊಟೆಕ್ಷನ್ ಇನ್ ಕರ್ನಾಟಕ – ಎ ದೈಗ್ನೊಸ್ಟಿಕ ಸ್ಟಡಿ".

೯. ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಚಾಮರಾಜನಗರ ಜಿಲ್ಲೆ –(೨೦೦೭) "ಶಾಲಾ ಗ್ರಾಹಕರ ಕ್ಲಬ್ ಯೋಜನೆ, ಪು.ನಂ ೨೪, ೨೫.

೧೦. ರುದ್ರದತ್ತ ಆಂಡ್ ಕೆ.ಪಿ. ಸುಂದರಮ್ (೧೯೮೯) – "ಇಂಡಿಯನ್ ಎಕನಾಮಿ" ಎಸ್. ಚಾಂದ ಆಂಡ್ ಕಂಪನಿ ರಾಮನಗರ ನವದೆಹಲಿ.

೧೧. ನಂದೀಮಠ ಓಂಪ್ರಕಾಶ (೨೦೦೭)– " ಇಂಟರ್‌ನ್ಯಾಶನಲ್ ಕಂಜುಮರಿಸಂ".

೧೨. ಯು. ಎನ್. ಓ. ಗೈಡಲೈನ್ಸ – "ಕಂಜುಮರ್ಸ ಪ್ರೊಟೆಕ್ಷನ್ ಡೈರೈಕ್ಷನ್ಸ".– ವಿಕಿಪಿಡಿಯಾ

೧೩. ಅಗರವಾಲ ವ್ಹಿ.ಕೆ. (೨೦೦೩) "ಕಂಜುಮರ್ಸ ಪ್ರೊಟೆಕ್ಷನ್ಸ ಆ್ಯಕ್ಟ್ ೧೯೮೬", ಪು.ನಂ. ೫ ರಿಂದ ೯.

೧೪. ಕಂಜುಮರ್ಸ/ಸರ್ವಾವರ್/ಎಕ್ಸಪೇಷಂಟ್ಸ ಮುವ್ಹಮೆಂಟ – ವಿಕಿಪಿಡಿಯಾ ಅಂತರ್ಜಾಲ.

೧೫. ರಾಷ್ಟ್ರೀಯ ಆಯೋಗದ ಮಾಹಿತಿ ಅಂತರ್ಜಾಲದಿಂದ ಪಡೆದುದು.

೧೬. ಐತಳಾ ದಾಮೋಧರ (೨೦ ಡಿಸೆಂಬರ) ೨೦೧೧ – "ಕರ್ನಾಟಕದಲ್ಲಿ ಗ್ರಾಹಕ ಚಳುವಳಿ ಘೋರ ನಿದ್ರೆ" ವಿಜಯಕರ್ನಾಟಕ, ಪು.ನಂ ೭.

೧೭. ಆಹಾರ ನಾಗರೀಕ ಸರಬರಾಜು ಇಲಾಖೆ ಬೆಂಗಳೂರು (೨೦೦೭) – "ಶಾಲಾ ಗ್ರಾಹಕರ ಕ್ಲಬ್ ಕೈಪಿಡಿ" ಪು.ನಂ ೧೯ ರಿಂದ ೨೧.

೧೮. ಆಹಾರ ನಾಗರೀಕ ಸರಬರಾಜು ಗ್ರಾಹಕರ ವ್ಯವಹಾರದ ಇಲಾಖೆ ಬೆಂಗಳೂರು – (೨೦೦೭)"ಆಹಾರ ಖಾತರಿ ಸಮೀತಿ ಕೈಪಿಡಿ" ಪು.ನಂ. ೮ ರಿಂದ ೧೦, ೨೧ ರಿಂದ ೨೪.

೧೯. ಬುಲಚಂದಾನಿ ಕೆ. ಎ. (೨೦೦೮) ಗ್ರಂಥ – "ಬಿಜಿನೇಸ್ ಲಾ ಫಾರ್ ಮ್ಯಾನೇಜಮೆಂಟ" – ಹಿಮಾಲಯ ಪಬ್ಲಿಕೇಷನ್ ಹೌಸ ನವದೆಹಲಿ.

#########

# ಅಧ್ಯಾಯ –೪

## ಗ್ರಾಹಕ ವ್ಯಾಜ್ಯ ಪರಿಹಾರ ಅಭಿಕರಣಗಳು ಹಾಗೂ ಕಾರ್ಯ ನಿರ್ವಹಣೆಯ ವಿಶ್ಲೇಷಣೆ

೪.೧ ಪ್ರಸ್ತಾವನೆ

೪.೨ ಗ್ರಾಹಕ ವ್ಯಾಜ್ಯ

೪.೩ ದೂರು

೪.೪ ದೂರುದಾರ

೪.೫ ಅನುಚಿತ ವ್ಯಾಪಾರ ಪದ್ಧತಿ

೪.೬ ಗ್ರಾಹಕ ವ್ಯಾಜ್ಯ ಪರಿಹಾರ ಏಜೆನ್ಸಿಗಳು

[೪.೬.೧ ರಿಂದ ೪.೬.೩ರ ವರೆಗೆ]

೪.೭ ಬೆಳಗಾವಿ ಜಿಲ್ಲಾ ಗ್ರಾಹಕರ ವೇದಿಕೆಯ ಕಾರ್ಯ

ನಿರ್ವಹಣೆಯ ವಿಶ್ಲೇಷಣೆ

[ಕೋಷ್ಟಕ ೪.೧ ರಿಂದ ೪.೧೭ರ ವರೆಗೆ]

ಅಧ್ಯಾಯ – ೪

# ಗ್ರಾಹಕ ವ್ಯಾಜ್ಯ ಪರಿಹಾರ ಅಭೀಕರಣಗಳು (ಏಜೆನ್ಸಿಗಳು) ಹಾಗೂ ಕಾರ್ಯ ನಿರ್ವಹಣೆಯ ವಿಶ್ಲೇಷಣೆ

## ೪.೧ ಪ್ರಸ್ತಾವನೆ

"ಎಚ್ಚೆತ್ತ ಗ್ರಾಹಕ ದೇಶದ ಆಸ್ತಿ". ಪ್ರತಿ ಗ್ರಾಹಕನಿಗೆ ಹಕ್ಕು ಕರ್ತವ್ಯಗಳ ಕುರಿತು ಗೊತ್ತಾಗಬೇಕು. ಇವುಗಳ ಬಳಕೆ ನಮ್ಮ ನಿತ್ಯ ಜೀವನದಲ್ಲಿ ಆಗಬೇಕು. ಈ ಗ್ರಾಹಕ ಹಕ್ಕುಗಳಿಗೆ ತೊಂದರೆ ಬಂದಾಗ, ಅಡೆತಡೆ ಉಂಟಾದಾಗ, ಆ ತೊಂದರೆಗಳ, ಅಡೆತಡೆಗಳ ವಿರುದ್ಧ ಹೋರಾಡುವ ಮನೋಭಾವವಿರುವ ಗ್ರಾಹಕನಿಗೆ "ಎಚ್ಚೆತ್ತ ಗ್ರಾಹಕ" ಎನ್ನುತ್ತಾರೆ. ನಮ್ಮ ದೇಶದಲ್ಲಿ ಎಲ್ಲ ಗ್ರಾಹಕರಿಗೆ ಈ ಹಕ್ಕುಗಳ, ಕರ್ತವ್ಯಗಳ ತಿಳುವಳಿಕೆ ಇರುವುದು ಬಹಳ ಕಡಿಮೆ. ಏಕೆಂದರೇ ದೇಶದ ಪ್ರತಿಶತ ಎಪ್ಪತ್ತರಷ್ಟು ಜನರು ಗ್ರಾಮೀಣವಾಸಿಗಳು. ಹಳ್ಳಿಗಳಿಗೆ ಗ್ರಾಹಕ ಸಂರಕ್ಷಣೆಯ ಕುರಿತು ಮಾಹಿತಿ ತಲುಪುವುದು ಕಷ್ಟಸಾಧ್ಯ.

ಗ್ರಾಹಕ ಶೋಷಣೆಯ ವಿರುದ್ಧ ಪರಿಹಾರ ಪಡೆಯಲು ಅನುಕೂಲವಾಗುವಂತೆ ಗ್ರಾಹಕರ ಹಿತರಕ್ಷಣೆ ಕಾಯ್ದೆಯನ್ನು ರಚಿಸಿಲಾಗಿದೆ. ಇದರಡಿ ಪರಿಹಾರ ನೀಡುವ ಉದ್ದೇಶದಿಂದ ವೇದಿಕೆಗಳನ್ನು ರಚಿಸಿದ್ದು. ಎಲ್ಲ ಗ್ರಾಹಕರು, ವೇದಿಕೆಗಳಲ್ಲಿ ನಡೆಯುವ ಕಾರ್ಯಗಳು ಹಾಗೂ ಪರಿಹಾರ ಪಡೆಯಲು ಅನುಸರಿಸಬೇಕಾದ ಕ್ರಮಗಳನ್ನು ತಿಳಿದುಕೊಳ್ಳುವುದು ಅತಿ ಅವಶ್ಯಕ.[೧]

ಜಾಗತೀಕರಣದ ಈ ಕಾಲದಲ್ಲಿ ಗ್ರಾಹಕರ ಚಳುವಳಿ ಅಂತರರಾಷ್ಟ್ರೀಯ ಮಹತ್ವದ ವಿಷಯವಾಗಿ ಬೆಳೆದು ನಿಂತಿದೆ. ೧೯೬೦ ರ ಅವಧಿಯಲ್ಲಿ, ಅಮೇರಿಕಾದಲ್ಲಿ, ಶ್ರೀ ನಾದರರ ನಾಯಕತ್ವದಲ್ಲಿ ಬೆಳವಣಿಗೆಯ ಹಂತವನ್ನು ಈ ಗ್ರಾಹಕ ಚಳುವಳಿ ಪಡೆಯಿತು. ಈ ಚಳುವಳಿ ತನ್ನದೆ ಆಕಾರವನ್ನು ಅಭಿವೃದ್ಧಿಶೀಲ ದೇಶಗಳಲ್ಲಿ ಪಡೆಯತೊಡಗಿತು. ಇತ್ತೀಚಿನ ಅವಧಿಯಲ್ಲಿ ಮಾತ್ರ ಈ

ಗ್ರಾಹಕರ ಚಳುವಳಿ ಎನ್ನುವ ಅಸಾಧಾರಣ ವಿಷಯ, ಭಾರತದಂತಹ ಅಭಿವೃದ್ದಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಕಾಣಿಸಿಕೊಂಡು, ತನ್ನ ಪರಿಣಾಮವನ್ನು ಸಮಾಜದ ಅಭಿವೃದ್ದಿಯಲ್ಲಿ ತೋರಿಸುತ್ತಿದೆ. ರಾಷ್ಟ್ರೀಯ ಚಳುವಳಿ ಮತ್ತು ಸತ್ಯಾಗ್ರಹದ ಅನುಭವವಿರುವ ಭಾರತದಲ್ಲಿ ಗ್ರಾಹಕ ಚಳುವಳಿ ಬೇರೂರಲು ತಡವಾಗಲಿಲ್ಲ. ಭಾರತದ ತುಂಬೆಲ್ಲ ಗ್ರಾಹಕ ಸಂಘ ಸಂಸ್ಥೆಗಳು ಹುಟ್ಟಿಕೊಳ್ಳಲಾರಂಭಿಸಿದವು. ಈ ಪರಿಣಾಮಕಾರಿ ವಾತಾವರಣಕ್ಕೆ ಕಾರಣರಾದವರಲ್ಲಿ, ಪ್ರೊ. ಮನುಬಾಯಿ ಶಹಾ ಅತ್ಯಂತ ಪ್ರಮುಖರು. ಗ್ರಾಹಕರ ಚಳುವಳಿಯ ಅತ್ಯಂತ ಪ್ರಭಾವಶಾಲಿ ನಾಯಕಿ ಮೃಣಾಲ ಗೊರೆ, ಮುಂಬಯಿಯ ನೀರಿನ ಅಭಾವದ ಸಮಸ್ಯೆಯನ್ನು ಪರಿಹರಿಸಿದ ನಾಯಕಿ, ಹಾಗೆಯೆ ಗ್ರಹಿಣಿಯರ ಸಂಘ, ಆಹಾರ ಅಭಾವ ಹಾಗೂ ಬೆಲೆಗಳ ಏರಿಕೆಯ ಸಮಸ್ಯೆಗಳನ್ನು ಎದುರಿಸುವ ರುವಾರಿಯಾಯಿತು.[೨]

ಗ್ರಾಹಕ ರಕ್ಷಣಾ ಕಾಯಿದೆ, ರಾಷ್ಟ್ರ ಆಯೋಗ ಹಾಗೂ ರಾಜ್ಯ ಆಯೋಗಗಳನ್ನು ಸ್ಥಾಪಿಸುವ ಅವಕಾಶವನ್ನು ಕಲ್ಪಿಸಿ ಕೊಟ್ಟಿದೆ. ಜಮ್ಮು ಮತ್ತು ಕಾಶ್ಮೀರ ರಾಜ್ಯಗಳನ್ನು ಹೊರತು ಪಡಿಸಿ ಎಲ್ಲ ರಾಜ್ಯಗಳಲ್ಲಿ, ರಾಜ್ಯ ಆಯೋಗಗಳಿವೆ. ಪ್ರತಿ ಜಿಲ್ಲೆಗಳಲ್ಲಿ, ಜಿಲ್ಲಾ ವೇದಿಕೆಗಳಿವೆ. ಈ ಜಿಲ್ಲಾ ವೇದಿಕೆಗಳನ್ನು ರಾಜ್ಯ ಆಯೋಗಗಳು ನಿಯಂತ್ರಿಸುತ್ತವೆ. ಅವುಗಳ ಆಡಳಿತ ಮಂಡಳಿಯನ್ನು ಹಾಗೂ ಕಾರ್ಯಕ್ರಮವನ್ನು ರಾಜ್ಯ ಸರ್ಕಾರಗಳು ನೋಡಿಕೊಳ್ಳುತ್ತಿವೆ. ರಾಷ್ಟ್ರ ಆಯೋಗದ ಸಂಪೂರ್ಣ ಜವಾಬ್ದಾರಿಯನ್ನು ಕೇಂದ್ರ ಸರ್ಕಾರವು ನೋಡಿಕೊಳ್ಳುತ್ತದೆ.

ಪ್ರಸ್ತುತ ಅಧ್ಯಾಯದಲ್ಲಿ ಗ್ರಾಹಕ ವ್ಯಾಜ್ಯ ಪರಿಹಾರ ಏಜೆನ್ಸಿಗಳ "ಕಾರ್ಯನಿರ್ವಹಣೆಯ ವಿಶ್ಲೇಷಣೆ ಮತ್ತು ಕಾರ್ಯಗುಣಮಟ್ಟದ ನಿಷ್ಕರ್ಷ"ದ ಕುರಿತು ವಿಷದವಾಗಿ ಚರ್ಚಿಸುವ ಮೊದಲು ಕೆಳಗಿನ ಕೆಲವು ವಿಷಯಗಳನ್ನು ಅರ್ಥಮಾಡಿಕೊಳ್ಳಬೇಕು.

**೪.೨ ಗ್ರಾಹಕ ವ್ಯಾಜ್ಯ :**

ಗ್ರಾಹಕ ಪರಿಹಾರ ವೇದಿಕೆಯ ಮುಂದೆ ಇರುವ ದೂರನ್ನು ಒಪ್ಪಿಕೊಳ್ಳದೆ ಇರುವಾಗ, ದೂರಿನಲ್ಲಿ ಇರುವ ಆಪಾದನೆಯನ್ನು ಒಪ್ಪದೆ ಇರುವಾಗ ಗ್ರಾಹಕ ವ್ಯಾಜ್ಯ ಉದ್ಭವಿಸುತ್ತದೆ. ಪ್ರತಿ ವ್ಯಾಜ್ಯಕ್ಕೆ ಬೇರೆಯಾಗಿ ಅಪಾದನೆಯನ್ನು ಮಾಡಿ ಬೇರೆ ಬೇರೆಯಾದ ಪರಿಹಾರ ಕಂಡುಕೊಳ್ಳಬಹುದಾದ ದಾರಿ ಕಾಯ್ದೆಯಲ್ಲಿ ಇದೆ.[೩]

**೪.೩ ದೂರು:**

ಈ ಕೆಳಕಂಡ ಆಪಾದನೆಗಳ ಬಗ್ಗೆ ದೂರುದಾರನು ಲಿಖಿತ ರೂಪದಲ್ಲಿ ದೂರು ಸಲ್ಲಿಸಬಹುದಾಗಿದೆ.

೧. ವರ್ತಕರು ಹಾಗೂ ಸೇವೆಯನ್ನು ಒದಗಿಸುವವರು ಅನುಸರಿಸುವ ಅನ್ಯಾಯ ಅಥವಾ ನಿರ್ಬಂಧಿತ ವ್ಯಾಪಾರಿ ಪದ್ಧತಿಗಳ ಬಗ್ಗೆ.

೨. ಸರಕುಗಳು ಮತ್ತು ಸೇವೆಗಳು ದೋಷಯುಕ್ತವಾಗಿದ್ದಾಗ ಮತ್ತು ನ್ಯೂನತೆಯಿಂದ ಕೂಡಿದಾಗ.

೩. ನಿಗದಿತ ಬೆಲೆಗಿಂತ ಅಧಿಕ ಬೆಲೆಯನ್ನು ವ್ಯಾಪಾರಸ್ಥರು ತೆಗೆದುಕೊಂಡಾಗ.

೪. ಜನರ ಜೀವನಕ್ಕೆ ಅಥವಾ ಸುರಕ್ಷತೆಗೆ ಹಾನಿಕಾರಕ ವಸ್ತುಗಳನ್ನು ಕಾನೂನು ಬಾಹಿರವಾಗಿ ಮಾರಾಟ ಮಾಡಿದಾಗ ಅಥವಾ ಮಾರಾಟ ಮಾಡಲು ಯತ್ನಿಸಿದಾಗ.[೪]

**೪.೪) ದೂರುದಾರ:**

೧. ಗ್ರಾಹಕ.

೨. ಕಂಪನಿ ಕಾಯ್ದೆ ೧೯೫೬ ಅಥವಾ ಬೇರಾವುದೇ ಕಾಯ್ದೆ ಪ್ರಕಾರ ನೋಂದಾಯಿಸಿ ನೋಂದಣಿ ಚಾಲ್ತಿಯಲ್ಲಿರುವ ಸ್ವಯಂ ಸೇವಾ ಗ್ರಾಹಕ ಸಂಸ್ಥೆಗಳು.

೩. ರಾಜ್ಯ ಅಥವಾ ಕೇಂದ್ರ ಸರ್ಕಾರಗಳು.

೪. ಅರೆ ಸರ್ಕಾರಿ ಇಲಾಖೆಗಳು.

೫. ಒಂದೇ ಬಗೆಯ ದೂರನ್ನು ಹೊಂದಿದ ಒಬ್ಬ ಅಥವಾ ಹೆಚ್ಚಿನ ಗ್ರಾಹಕರು

೬. ಮರಣ ಹೊಂದಿದ ಗ್ರಾಹಕನ ವಾರಸುದಾರ ಅಥವಾ ಅವನ ಪ್ರತಿನಿಧಿ.[೫]

**೪.೫ ಅನುಚಿತ ವ್ಯಾಪಾರ ಪದ್ಧತಿ:**

ಯಾವುದೇ ವ್ಯಾಪಾರಿ ತನ್ನ ವ್ಯಾಪಾರದ/ತಾನು ಕೊಡುವ ಸೇವೆಯ ಬೆಳವಣಿಗೆಗಾಗಿ, ವೃದ್ಧಿಗಾಗಿ ಕೆಳಕಂಡ ನ್ಯಾಯಬಾಹಿರವಾದ ಮಾರ್ಗಗಳನ್ನು ಬಳಸಿ, ಗ್ರಾಹಕನಿಗೆ ನಷ್ಟ ಅಥವಾ ಹಾನಿ ಉಂಟು ಮಾಡಿದರೆ, ಅದು ಅನುಚಿತ ವ್ಯಾಪಾರ ಪದ್ಧತಿ ಎಂದು ಪರಿಗಣಿಸಿ, ಆ ವ್ಯಾಪಾರಿಯ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳುವ ಅವಕಾಶವನ್ನು "ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲ್ಪಿಸಿಕೊಟ್ಟಿದೆ. ಈ ಕಾಯ್ದೆಯ ಅಡಿಯಲ್ಲಿ ಕೆಳಗಿನ ಎಲ್ಲ ಪದ್ಧತಿಗಳು ಅನುಚಿತ ವ್ಯಾಪಾರ ಪದ್ಧತಿ ಎನಿಸಿಕೊಳ್ಳುತ್ತವೆ.

೧. ಬರಹದ ಮೂಲಕವಾಗಲಿ, ಬಾಯಿಯ ಮೂಲಕವಾಗಲಿ ಹೇಳಿಕೆಗಳನ್ನು ಕೊಡುವುದು. ತಾನು ಮಾರಾಟ ಮಾಡುವ ವಸ್ತುಗಳು ಅಥವಾ ತಾನು ಸಲ್ಲಿಸುವ ಸೇವೆ ಒಂದು ನಿರ್ದಿಷ್ಟ ಗುಣಮಟ್ಟದ್ದೆಂದು ಸುಳ್ಳು ಹೇಳಿಕೆಯನ್ನು ಲಿಖಿತ, ಮಾತಿನ ಅಥವಾ ಚಿನ್ಹೆಯ ಮೂಲಕ ನಿರೂಪಿಸುವುದು.

೨. ಉಪಯೋಗಿಸಿದ ಅಥವಾ ರಿಪೇರಿ ಮಾಡಿದ ವಸ್ತುವನ್ನು ಹೊಸದೆಂದು ಮಾರುವುದು.

೩. ತನ್ನಲ್ಲಿರುವ ವಸ್ತುವಿನ ತಯಾರಿಕೆಯ ಚಿನ್ನೆಯ ಗುಣಮಟ್ಟದ ಕುರಿತು ಸುಳ್ಳು ಹೇಳಿಕೆ ಕೊಡುವುದು.

೪. ಗ್ರಾಹಕರಿಗೆ ಮಾರುವ ವಸ್ತುವಿನ ಉಪಯೋಗದ ಕುರಿತು ತಪ್ಪು ಮಾಹಿತಿಯನ್ನು ನೀಡುವುದು.

೫. ಗ್ರಾಹಕರಿಗೆ ತಾನು ಮಾರಾಟ ಮಾಡುವ ಪದಾರ್ಥದ ಬೆಲೆಯ ಬಗ್ಗೆ ಸುಳ್ಳು ಹೇಳಿಕೆ ನೀಡುವುದು.

೬. ಬೇರೆಯವರಿಂದ ತಯಾರಿಸಲ್ಪಟ್ಟ ವಸ್ತುವಿನ ಕುರಿತು ಅವಹೇಳನ ಮಾಡುವುದು.

೭. ತಾನು ತಯಾರಿಸಿರುವ ವಸ್ತುವಿಗೆ ಅಥವಾ ಒದಗಿಸುವ ಸೇವೆಗೆ ಗ್ಯಾರಂಟಿಯನ್ನು ಕೊಡುವುದು.

೮. ತಪ್ಪು ಮಾಹಿತಿ ನೀಡುವ ಜಾಹಿರಾತು.

೯. ಇಳುವರಿ ಮಾರಾಟಗಳ ಪ್ರಕಟಣೆ.

೧೦. ಲಾಟರಿ ಬಹುಮಾನಗಳ ಆಸೆ ತೋರಿಸುವ ಮಾರಾಟ.

೧೧. ವಸ್ತುವಿನ ಬೆಲೆಗಿಂತ ಜಾಸ್ತಿ ಬೆಲೆಗೆ ಮಾರುವುದು.

೧೨. ಜೀವಕ್ಕೆ ಅಪಾಯಕಾರಕ ವಸ್ತುವನ್ನು ಮಾರುವುದು.

೧೩. ವಸ್ತುವಿನ ಬೆಲೆ ಹೆಚ್ಚಿಸಲು ಕಾಳಸಂತೆ ವ್ಯಾಪಾರ ಮಾಡುವುದು.[೬]

**೪.೬ ಗ್ರಾಹಕ ವ್ಯಾಜ್ಯ ಪರಿಹಾರ ಏಜೆನ್ಸಿಗಳು (ಅಭಿಕರಣಗಳು):**

ಗ್ರಾಹಕ ಸಂರಕ್ಷಣಾ ಕಾಯಿದೆ ೧೯೮೬ ರ ಉದ್ದೇಶಗಳನ್ನು ಪೂರೈಸಲು ಈ ಏಜೆನ್ಸಿಗಳನ್ನು ಸ್ಥಾಪಿಸಲಾಗಿದೆ. ಮೂರು ಒಂದಕ್ಕೊಂದು ಹೊಂದಿಕೊಂಡ ಈ ಪದ್ಧತಿಗಳನ್ನು ಕಾಯದೆಯ ಕಲಂ ೯ ರ ಅನ್ವಯ ರಾಷ್ಟ್ರ ಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಹಾಗು ಜಿಲ್ಲಾ ಮಟ್ಟದಲ್ಲಿ ಸ್ಥಾಪಿಸಲಾಗಿದೆ.

ಅ) ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ, ರಾಜ್ಯ ಸರ್ಕಾರವು ಗ್ರಾಹಕರ ದೂರುಗಳ ಪರಿಹಾರಕ್ಕಾಗಿ ಹಾಗೂ ನಿವಾರಣೆಗಾಗಿ ಪ್ರತಿ ಜಿಲ್ಲೆಗೆ ಅಧಿಸೂಚನೆಯ ಮೂಲಕ, ಗ್ರಾಹಕರ ವಿಚಾರಗಳ, ಪರಿಹಾರ ವೇದಿಕೆಯನ್ನು ಸ್ಥಾಪಿಸಲಾಗಿದೆ. ಅದನ್ನು "ಜಿಲ್ಲಾ ವೇದಿಕೆ" ಎಂದು ಕರೆಯುತ್ತಾರೆ.

ಬ) ಗ್ರಾಹಕರ ವಿವಾದ ನಿವಾರಣೆಗೆ, ರಾಜ್ಯಸರ್ಕಾರವು, ಕೇಂದ್ರ ಸರ್ಕಾರದ ಅನುಮತಿಯನ್ನು ಪಡೆದು, ಅಧಿಸೂಚನೆಯನ್ನು ಹೊರಡಿಸಿ, ಪ್ರತಿರಾಜ್ಯಕ್ಕೆ ಒಂದು "ರಾಜ್ಯ ಆಯೋಗವನ್ನು" ಸ್ಥಾಪಿಸಿದೆ.

ಕ) ಕೇಂದ್ರ ಸರ್ಕಾರವು ಅಧಿಸೂಚನೆಯನ್ನು ಹೊರಡಿಸಿ ಗ್ರಾಹಕರ ಪರಿಹಾರಕ್ಕೆ "ರಾಷ್ಟ್ರೀಯ ಆಯೋಗ"ವನ್ನು ಸ್ಥಾಪಿಸಿದೆ.

**೪.೬.೧ ರಾಷ್ಟ್ರೀಯ ಆಯೋಗ :**

ರಾಷ್ಟ್ರೀಯ ಆಯೋಗದ ರಚನೆ : (ಕಲಂ ೨೦)

ರಾಷ್ಟ್ರೀಯ ಆಯೋಗದಲ್ಲಿ ಈ ಕೆಳಗಿನಂತೆ ಸದಸ್ಯರು ಇರುತ್ತಾರೆ.

ಅ) ಸರ್ವೋಚ್ಚ ನ್ಯಾಯಾಲಯದ ಹಾಲಿ ಇಲ್ಲವೆ ನಿವೃತ್ತ ನ್ಯಾಯಾದೀಶರನ್ನು ರಾಷ್ಟ್ರೀಯ ಆಯೋಗದ ಅಧ್ಯಕ್ಷರೆಂದು ನೇಮಕ ಮಾಡಲು ಬರುತ್ತದೆ. ನೇಮಕ ಮಾಡಲು ಮುಖ್ಯನ್ಯಾಯಾಧೀಶರನ್ನು ಸಮಾಲೋಚಿಸಿ ನಿರ್ಣಯ ತೆಗೆದುಕೊಳ್ಳುವುದು ಕಡ್ಡಾಯ.

ಬ) ಒಬ್ಬ ಮಹಿಳಾ ಸದಸ್ಯೆಯನ್ನು ಒಳಗೊಂಡು ನಾಲ್ವರು ಸಮರ್ಥ, ಪ್ರಾಮಾಣಿಕ, ಜ್ಞಾನಸಂಪನ್ನ, ಅನುಭವಿಯಾದ, ಆರ್ಥಿಕ ಕಾನೂನು, ಲೆಕ್ಕಪತ್ರ, ವಾಣಿಜ್ಯ ಉದ್ಯಮ, ಸಾರ್ವಜನಿಕ ಆಡಳಿತ ವ್ಯವಹಾರ ಮುಂತಾದವುಗಳಲ್ಲಿ ಸಾಕಷ್ಟು ಅನುಭವ ಹೊಂದಿದವರಾಗಿರುತ್ತಾರೆ.

ಪ್ರತಿಯೊಂದು ನೇಮಕಾತಿಯನ್ನು ಆಯ್ಕೆ ಸಮಿತಿಯ ಶಿಫಾರಸಿನ ಮೇಲೆ ಕೇಂದ್ರ ಸರಕಾರವು ಮಾಡುತ್ತದೆ. ಈ ಆಯ್ಕೆ ಸಮೀತಿಯಲ್ಲಿ ಈ ಕೆಳಗಿನ ಸಮರ್ಥರು ಇರುತ್ತಾರೆ.

೧. ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಂದ ನೇಮಕಗೊಂಡ ಸರ್ವೋಚ್ಚ ನ್ಯಾಯಾಧೀಶರು ಅಧ್ಯಕ್ಷರು ಆಗಬೇಕು.

೨. ಗ್ರಾಹಕ ವ್ಯವಹಾರವನ್ನು ನೋಡಿಕೊಳ್ಳುವ ಕೇಂದ್ರ ಸರಕಾರದ ಕಾರ್ಯದರ್ಶಿ ಸದಸ್ಯರಾಗಬೇಕು.

೩. ಭಾರತ ಸರ್ಕಾರದ ಕಾರ್ಯದರ್ಶಿ ಇನ್ನೊಬ್ಬ ಸದಸ್ಯರಾಗಿರಬೇಕು.

ರಾಷ್ಟ್ರೀಯ ಆಯೋಗದ ಸದಸ್ಯರಿಗೆ ಕೊಡುವ ಸಂಬಳ, ಗೌರವಧನ ಹಾಗೂ ಇತರ ಭತ್ಯೆ ಮತ್ತು ಸೇವಾ ಶರತ್ತು ಹಾಗೂ ಕರಾರುಗಳು, ಕೇಂದ್ರ ಸರ್ಕಾರ ಗೊತ್ತು ಪಡಿಸಿದಂತೆ ಇರಬೇಕು.

ರಾಷ್ಟ್ರೀಯ ಆಯೋಗದ ಪ್ರತಿಯೊಬ್ಬ ಸದಸ್ಯರು ೫ ವರ್ಷದವರೆಗೆ ಅಥವಾ ವಯಸ್ಸಿನ ೭೫ ವರ್ಷದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಧಿಕಾರದಲ್ಲಿ ಇರತಕ್ಕದ್ದು. ಮರುನೇಮಕಾತಿಗೆ ಅರ್ಹರಾಗಿರುವುದಿಲ್ಲ.

**ವ್ಯಾಪ್ತಿ:**

ಅಧಿನಿಯಮ: ೨೧ ಹಾಗೂ ಇತರ ಉಪಬಂಧಗಳಿಗೆ ಒಳಪಟ್ಟು ರಾಷ್ಟ್ರೀಯ ಆಯೋಗದ ಅಧಿಕಾರ ವ್ಯಾಪ್ತಿಯಲ್ಲಿ

ಅ) ಸ್ವೀಕರಿಸಲು ಅರ್ಹವಾದ

೧. ದೂರಿನಲ್ಲಿ ಕಾಣಿಸಿದ ಅಥವಾ ಪ್ರಶ್ನಿಸಿದ ಸರಕು ಹಾಗೂ ಸೇವೆ ಹಾಗೂ ಪರಿಹಾರ ಧನದ ಮೌಲ್ಯ ಒಂದು ಕೋಟಿಗೂ ಮೇಲ್ಪಟ್ಟಿರಬೇಕು.

೨. ಯಾವುದೇ ರಾಜ್ಯ ಆಯೋಗದ ನಿರ್ಣಯದ ಮೇಲೆ ಸಲ್ಲಿಸಲಾದ ಮೇಲ್ಮನವಿ.

ಬ) ಯಾವುದೇ ರಾಜ್ಯ ಆಯೋಗವು ತನಗಿಲ್ಲದ ಕಾನೂನುಬದ್ಧ ಅಧಿಕಾರ ವ್ಯಾಪ್ತಿಯನ್ನು ಮೀರಿ ಆದೇಶ ಮಾಡಿದರೆ, ಅದು ರಾಷ್ಟ್ರ ಆಯೋಗಕ್ಕೆ ಗೊತ್ತಾದರೆ, ರಾಜ್ಯ ಆಯೋಗವು ತನಗಿದ್ದ ಕಾನೂನು ಬದ್ಧ ಅಧಿಕಾರವನ್ನು ಚಲಾಯಿಸಲು ಬಲ್ಲ ರಾಜ್ಯ ಆಯೋಗವು ವಿಫಲವಾಗಿದೆ ಎನ್ನಬಹುದು. ತನ್ನ ಅಧಿಕಾರದ ವ್ಯಾಪ್ತಿಯಲ್ಲಿ ಬಾರದ ವಿಷಯವನ್ನು ವಿಚಾರಣೆ ಮಾಡುತ್ತಿರುವ ಮುಖ್ಯ ದೋಷವೆಂದು ಪರಿಗಣಿಸಿ, ಪ್ರಕರಣವನ್ನು ತರಿಸಿಕೊಂಡು, ಯೋಗ್ಯ ಆದೇಶವನ್ನು ಮಾಡಬಹುದು.

**ಅಧಿಕಾರ:**

ರಾಷ್ಟ್ರೀಯ ಆಯೋಗವು ಯಾವುದೇ ವ್ಯಾಜ್ಯ ಅಥವಾ ವ್ಯವಹಾರವನ್ನು ನಿರ್ಣಯಿಸುವಾಗ

ಅ) ಕಲಂ ೧೩(೪), (೫) ಮತ್ತು (೬) ರಲ್ಲಿ ನಿರ್ದಿಷ್ಟಪಡಿಸಿದಂತೆ ನಾಗರಿಕ ನ್ಯಾಯಾಲಯದ ಅಧಿಕಾರ (ದಿವಾಣಿ ನ್ಯಾಯಾಲಯದ ಅಧಿಕಾರ) ಹೊಂದಿರುತ್ತದೆ.

ಈ ಅಧಿಕಾರವನ್ನು ಚಲಾಯಿಸುವಾಗ ಕೇಂದ್ರ ಸರ್ಕಾರವು ನಿರ್ದಿಷ್ಟ ಪಡಿಸಿದ ವಿಧಾನವನ್ನು ಅನುಸರಿಸಬೇಕು.

ಬ) ಕಲಂ ೧೪(೧) ಎ ದಿಂದ ಸಿ ವರೆಗೆ ಉಲ್ಲೇಖಿಸಿದ ಯಾವುದೇ ಒಂದು ಅಥವಾ ಅದಕ್ಕಿಂತ ಹೆಚ್ಚು ವಿಷಯಗಳನ್ನು ಒಳಗೊಂಡ ಎದುರುಗಾರನಿಗೆ ನಿರ್ದೇಶನ ನೀಡಿ ಆದೇಶ ಹೊರಡಿಸುವ ಅಧಿಕಾರ ಹೊಂದಿದೆ. ಆದೇಶವನ್ನು ಹೊರಡಿಸುವಾಗ ಕೇಂದ್ರ ಸರಕಾರ ಗೊತ್ತುಪಡಿಸಿದ ಪ್ರಕ್ರಿಯೆಯನ್ನು ಅನುಸರಿಸಬೇಕು.

**ಮೇಲ್ಮನವಿ:** ರಾಷ್ಟ್ರೀಯ ಆಯೋಗದಲ್ಲಿರುವ ಪ್ರಕರಣವನ್ನು ಕಲಂ ೨೧(ಎ) (೧) ರ ಪ್ರಕಾರ ಅನ್ವಯ ಹೊಂದಿದ ಅಧಿಕಾರವನ್ನು ಚಲಾಯಿಸಿ ಮಾಡಿದ ಆದೇಶದಿಂದ ನೊಂದ ವ್ಯಕ್ತಿಯು, ಅದರ ಆದೇಶದ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಆದೇಶದ ೩೦ ದಿವಸದ ಒಳಗೆ ಮೇಲ್ಮನವಿಯನ್ನು ಸಲ್ಲಿಸಬೇಕು.

ಆದರೆ ಕಾಲಮಿತಿ ಮೀರಿದ ಮೇಲ್ಮನವಿಯನ್ನು ಸಲ್ಲಿಸಲು ಸಕಾರಣ ಇದೆ ಎಂದು ಗೊತ್ತಾದಲ್ಲಿ ಮನವಿ ಸ್ವೀಕಾರ ಆಗಬಹುದು.

**ಆಡಳಿತಾತ್ಮಕ ನಿಯಂತ್ರಣ (ಕಲಂ ೨೪ ಬಿ):**

ರಾಷ್ಟ್ರೀಯ ಆಯೋಗವು ಈ ಕೆಳಗೆ ಕಾಣಿಸಿದ ವಿಷಯಗಳ ಕುರಿತು ನಿಯಂತ್ರಣ ಹೊಂದಬಹುದು.

೧. ಇತ್ಯರ್ಥಗೊಂಡ, ಇತ್ಯರ್ಥವಾಗದ ವಾಜ್ಯಗಳ ವಿವರ ಪಡೆಯುವುದು.

೨. ವ್ಯಾಜ್ಯಗಳ ವಿಚಾರಣೆ, ಒಂದು ಪಕ್ಷದಿಂದ ಸಲ್ಲಿಸಲಾದ ಕಾಗದ ಪತ್ರಗಳ ನಕಲುಗಳನ್ನು ಎದುರು ಪಕ್ಷದವರಿಗೆ ಕಳುಹಿಸಿಕೊಡುವ ಕುರಿತು, ಯಾವುದೇ ಪ್ರಾದೇಶಿಕ ಭಾಷೆಯಲ್ಲಿ ನೀಡಿದ ಆದೇಶಗಳ ಇಂಗ್ಲೀಷ ಅನುವಾದ ಕಳುಹಿಸಿಕೊಡುವ ಬಗೆಗೆ ಮತ್ತು ದಾಖಲೆಗಳ ನಕಲುಗಳನ್ನು ತ್ವರಿತವಾಗಿ ನೀಡುವ ಕುರಿತು ಸೂಚನೆಗಳನ್ನು ಕೊಡುವುದು.

೩. ಜಿಲ್ಲಾವೇದಿಕೆಗಳು ಮತ್ತು ರಾಜ್ಯ ಆಯೋಗಗಳ ಅರೆ ನ್ಯಾಯಾಂಗ ಸ್ವಾತಂತ್ರ್ಯದಲ್ಲಿ ಅಥವಾ ಅಧಿಕಾರ ನಿರ್ವಹಣೆಯಲ್ಲಿ ಹಸ್ತಕ್ಷೇಪ ಮಾಡದೆ ಅವು ಆ ಅಧಿನಿಯಮದ ಹಾಗೂ ಕಾನೂನಿನ ಧ್ಯೇಯೋದ್ಧೇಶಗಳನ್ನು ಅತ್ಯುತ್ತಮ ರೀತಿಯಲ್ಲಿ ಈಡೇರಿಸುವಂತೆ ಅವುಗಳ ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡುವುದು.

**ರಾಜ್ಯ ಆಯೋಗ:**

ಜಿಲ್ಲಾ ವೇದಿಕೆಗಳ ನಿರ್ಣಯದ ವಿರುದ್ಧ ಸಲ್ಲಿಸುವ ಮೇಲ್ಮನವಿಯನ್ನು ಪರಿಶೀಲಿಸಲು ರಾಜ್ಯ ಆಯೋಗ ಅಸ್ತಿತ್ವಕ್ಕೆ ಬಂದಿದೆ. ಅದು ತನ್ನ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ವೇದಿಕೆಗಳ ನಿರ್ಣಯವನ್ನು ಪರಿಶೀಲಿಸಿ ನಿರ್ಣಯ ಕೊಡುವುದು.

**ರಾಜ್ಯ ಆಯೋಗದ ರಚನೆ:**

ಪ್ರತಿಯೊಂದು ರಾಜ್ಯ ಆಯೋಗದಲ್ಲಿ ಇರುವ ಸದಸ್ಯರು ಈ ಕೆಳಗಿನಂತೆ ಇರುತ್ತಾರೆ.

೧. ರಾಜ್ಯ ಸರಕಾರದಿಂದ ನೇಮಿಸಲ್ಪಡುವ ಶ್ರೇಷ್ಠ ನ್ಯಾಯಾಲಯದ ಹಾಲಿ ಅಥವಾ ವಿಶ್ರಾಂತ ನ್ಯಾಯಮೂರ್ತಿ- ಅವರು ರಾಜ್ಯ ವೇದಿಕೆಯ ಅಧ್ಯಕ್ಷರಾಗುತ್ತಾರೆ. ಆದರೆ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳೊಂದಿಗೆ ಸಮಾಲೋಚನೆ ಮಾಡದೆ ಇಂತಹ ನೇಮಕವನ್ನು ಮಾಡಲಾಗದು.

೨. ಇಬ್ಬರು ಇತರ ಸದಸ್ಯರು, ಅವರು ಯೋಗ್ಯ, ಪ್ರಮಾಣಿಕ ಮತ್ತು ಅರ್ಥಶಾಸ್ತ್ರ, ಕಾನೂನು, ವಾಣಿಜ್ಯಶಾಸ್ತ್ರ, ಲೆಕ್ಕಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರ ಅಥವಾ ಆಡಳಿತ ಇವುಗಳ ಸಮಸ್ಯೆಗಳ ಅರಿವು ಅಥವಾ ಅನುಭವ, ಅವುಗಳೊಂದಿಗೆ ವ್ಯವಹರಿಸುವ ಸಾಮರ್ಥ್ಯ ಹೊಂದಿರಬೇಕು. ಅವರಿಬ್ಬರಲ್ಲಿ ಒಬ್ಬರು ಮಹಿಳೆಯಾಗಿರಬೇಕು.

ಆದರೆ ರಾಜ್ಯ ಸರಕಾರವು ಈ ಕಲಮಿನ ಪ್ರಕಾರ ಮಾಡಬೇಕಾದ ಪ್ರತಿಯೊಂದು ನೇಮಕವನ್ನು ಈ ಕೆಳಗಿನ ಸದಸ್ಯರುಳ್ಳ ಆಯ್ಕೆ ಸಮಿತಿಯ ಶಿಫಾರಸಿನ ಪ್ರಕಾರ ಮಾಡಬೇಕು.

ಅ) ರಾಜ್ಯ ಆಯೋಗದ ಅಧ್ಯಕ್ಷರು – ಅವರು ಕಾರ್ಯಾಧ್ಯಕ್ಷರಾಗಿರುತ್ತಾರೆ.

ಬ) ರಾಜ್ಯ ಸರಕಾರದ ಕಾನೂನು ಇಲಾಖೆಯ ಕಾರ್ಯದರ್ಶಿ ಅವರು ಸದಸ್ಯರಾಗಿರುತ್ತಾರೆ.

ಕ) ರಾಜ್ಯದಲ್ಲಿ ಗ್ರಾಹಕರ ವ್ಯವಹಾರಗಳನ್ನು ನೋಡಿಕೊಳ್ಳುತ್ತಿರುವ ಇಲಾಖೆಯ ಕಾರ್ಯದರ್ಶಿ ಅವರು ಸದಸ್ಯರಾಗಿರುತ್ತಾರೆ.

೩. ರಾಜ್ಯ ಆಯೋಗದ ಸದಸ್ಯರಿಗೆ ಕೊಡಬೇಕಾದ ಸಂಬಳ ಅಥವಾ ಗೌರವಧನ ಮತ್ತು ಇತರೆ ಭತ್ತೆಗಳು ಮತ್ತು ಅವರ ಸೇವಾ ನಿಯಮಗಳು ಮತ್ತು ನಿರ್ಬಂಧಗಳು ರಾಜ್ಯ ಸರಕಾರವು ಗೊತ್ತು ಪಡಿಸಿದಂತೆ ಇರುತ್ತದೆ.

೪. ರಾಜ್ಯ ಆಯೋಗದ ಪ್ರತಿಯೊಬ್ಬ ಸದಸ್ಯರು ೫ ವರ್ಷಗಳವರೆಗೆ ಇಲ್ಲವೆ ಅವರು ವಯಸ್ಸಿನ ೬೫ ವರ್ಷ ವಯಸ್ಸಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲು ಬರುತ್ತದೆಯೋ ಆ ಪ್ರಕಾರ ಅಧಿಕಾರದಲ್ಲಿರಬೇಕು. ಅವರನ್ನು ಮರು ನೇಮಕ ಮಾಡಲು ಬರುವುದಿಲ್ಲ.

**ವ್ಯಾಪ್ತಿ:**

ರಾಜ್ಯ ಆಯೋಗದ ಅಧಿಕಾರ ವ್ಯಾಪ್ತಿಯು ಈ ಕೆಳಗಿನಂತೆ ಇರುತ್ತದೆ.

೧. ಸ್ವೀಕರಿಸುವ ಅಧಿಕಾರ: ಸರಕುಗಳ ಅಥವಾ ಸೇವೆಯ ಮೌಲ್ಯವು ೫ ಲಕ್ಷಕ್ಕಿಂತ ಹೆಚ್ಚು ಹಾಗು ೨೦ ಲಕ್ಷಕ್ಕಿಂತ ಕಡಿಮೆ ಇರುವ ಸರಕುಗಳ ಅಥವಾ ಸೇವೆಯ ಬಗೆಗಿನ ದೂರು.

೨. ರಾಜ್ಯದಲ್ಲಿನ ಯಾವುದೇ ಜಿಲ್ಲಾವೇದಿಕೆಯ ಆದೇಶಗಳ ವಿರುದ್ಧ ಬಂದಿರುವ ಮೇಲ್ಮನವಿಗಳು.

೩. ರಾಜ್ಯದಲ್ಲಿನ ಯಾವುದೇ ಜಿಲ್ಲಾ ವೇದಿಕೆಯು ತೀರ್ಮಾನಿಸಿದ ಅಥವಾ ಇನ್ನೂ ತೀರ್ಮಾನವಾಗದಿರುವ ಗ್ರಾಹಕರ ವ್ಯಾಜ್ಯ ಕುರಿತು ತನಗಿದ್ದ ಅಧಿಕಾರ ವ್ಯಾಪ್ತಿಯನ್ನು ಮೀರಿದ ಅಥವಾ ತನಗಿದ್ದ ಶಾಸನಬದ್ದ ಅಧಿಕಾರವನ್ನು ಚಲಾಯಿಸುವಲ್ಲಿ ವಿಫಲವಾದ ಅಥವಾ ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರದ ವಿಷಯವನ್ನು ಕಾನೂನಿಗೆ ವಿರುದ್ಧವಾಗಿ ವಿಚಾರಿಸಿದ ಅಥವಾ ಅದರಲ್ಲಿ ಭೌತಿಕ ಅಕ್ರಮಗಳನ್ನು ಎಸಗಿದೆ ಎಂಬುದು ರಾಜ್ಯ ಆಯೋಗಕ್ಕೆ ಕಂಡುಬಂದರೆ ರಾಜ್ಯ ಆಯೋಗ ಪ್ರಕರಣ ದಾಖಲೆಗಳನ್ನು ತರಿಸಿಕೊಂಡು ಪರಿಶೀಲಿಸಿ ಸೂಕ್ತ ಆದೇಶಗಳನ್ನು ನೀಡಬಹುದಾಗಿದೆ.

**ವಿಧಾನ :**

ಜಿಲ್ಲಾ ಆಯೋಗವು ದೂರುಗಳನ್ನು ಇತ್ಯರ್ಥಗೊಳಿಸಲು ೧೨, ಬಿ ಹಾಗೂ ೧೪ ನೇ ಕಲಂ ಉಪಬಂಧಗಳು ಮತ್ತು ನಿಯಮಗಳು, ಅವಶ್ಯಕವಾದ ಮಾರ್ಪಾಡುಗಳೊಂದಿಗೆ ರಾಜ್ಯ ಆಯೋಗವು ಇತ್ಯರ್ಥಗೊಳಿಸುವ ವ್ಯಾಜ್ಯಗಳಿಗೂ ಅನ್ವಯವಾಗುತ್ತವೆ.

**ಮೇಲ್ಮನವಿಗಳು:**

೧೭ ನೇ ಪರಿಚ್ಛೇಧದ ಕಲಮಿನ ಉಪಕಲಮಿನ ಪ್ರಕಾರ ತನಗಿರುವ ಅಧಿಕಾರವನ್ನು ಚಲಾಯಿಸಿ, ರಾಜ್ಯ ಆಯೋಗವು ನೀಡಿದ ಯಾವುದೇ ಆದೇಶದಿಂದ ನೊಂದ ವ್ಯಕ್ತಿಯ, ರಾಜ್ಯ ಆಯೋಗದ ಆದೇಶದ ವಿರುದ್ಧ, ಅದೇಶ ನೀಡಿದ ೩೦ ದಿನಗಳೊಳಗೆ, ಗೊತ್ತು ಪಡಿಸಿದ ನಮೂನೆ ಮತ್ತು ವಿಧಾನದ ಪ್ರಕಾರ ರಾಷ್ಟ್ರೀಯ ಆಯೋಗಕ್ಕೆ ಮೆಲ್ಮನವಿ ಸಲ್ಲಿಸಬಹುದಾಗಿದೆ. ಆದರೆ ೩೦ ದಿನಗಳೊಳಗಾಗಿ ಮೇಲ್ಮನವಿಯನ್ನು ಸಲ್ಲಿಸಲು ಸಾಧ್ಯವಾಗದಿದ್ದಾಗ, ವಿಳಂಬಕ್ಕೆ ಯೋಗ್ಯಕಾರಣಗಳನ್ನು ವರಿಷ್ಠ ನ್ಯಾಯಾಲಯಕ್ಕೆ ಮನವರಿಕೆಯಾದರೆ, ಅದರ ೩೦ ದಿನಗಳ ನಂತರವೂ ಮೇಲ್ಮನವಿಯನ್ನು ಸ್ವೀಕರಿಸಬಹುದು.

**೪.೬.೩ ಜಿಲ್ಲಾ ವೇದಿಕೆ :**

ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆಯನ್ನು ರಾಜ್ಯ ಸರಕಾರವು ಅಧಿಸೂಚನೆಯ ಮೂಲಕ ಪ್ರತಿ ಜಿಲ್ಲೆಗೊಂದರಂತೆ ಜಿಲ್ಲಾ ವೇದಿಕೆ ಎಂದು ಕರೆಯಲ್ಪಡುವ ವೇದಿಕೆಯನ್ನು ಸ್ಥಾಪಿಸುತ್ತದೆ. ಅವಶ್ಯವೆನಿಸಿದರೆ ರಾಜ್ಯ ಸರ್ಕಾರವು ಒಂದು ಜಿಲ್ಲೆಯಲ್ಲಿ ಒಂದಕ್ಕಿಂತ ಹೆಚ್ಚು ಜಿಲ್ಲಾ ವೇದಿಕೆಗಳನ್ನು ಸ್ಥಾಪಿಸಬಹುದು.

**ರಚನೆ:**

೧) ಜಿಲ್ಲಾ ವೇದಿಕೆಯಲ್ಲಿ ಇರುವ ಸದಸ್ಯರು :

ಅ) ಸದ್ಯ ಸೇವೆಯಲ್ಲಿದ್ದ ಅಥವಾ ಹಿಂದೆ ಸೇವೆ ಸಲ್ಲಿಸಿದ ಅಥವಾ ಮುಂದೆ ಸೇವೆ ಸಲ್ಲಿಸಲು ಅರ್ಹರಾದ ಜಿಲ್ಲಾ ನ್ಯಾಯಾಧೀಶರು ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿರುತ್ತಾರೆ.

ಬ) ಇಬ್ಬರು ಸದಸ್ಯರು: ಅವರು ಸಮರ್ಥರೂ ಪ್ರಮಾಣಿಕರೂ ಮತ್ತು ದರ್ಜೆವುಳ್ಳವರೂ ಆಗಿರಬೇಕು. ಅರ್ಥಶಾಸ್ತ್ರ, ವಾಣಿಜ್ಯ ಲೆಕ್ಕ ಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರ ಅಥವಾ ಆಡಳಿತದ ಸಮಸ್ಯೆಗಳ ಬಗೆಗೆ ಸಾಕಷ್ಟು ಜ್ಞಾನ ಅಥವಾ ಅನುಭವವಿರುವವರು ಆಗಿರಬೇಕು. ವ್ಯವಹಾರ ಸಾಮರ್ಥ್ಯವುಳ್ಳವರು ಆಗಿರಬೇಕು.

ಕ) ಅವರಿಬ್ಬರಲ್ಲಿ ಒಬ್ಬರು ಮಹಿಳೆಯಾಗಿರಬೇಕು.

೨) ಮೇಲಿನ ಸದಸ್ಯರನ್ನು ನೇಮಿಸುವಾಗ, ರಾಜ್ಯ ಸರ್ಕಾರವು ಆಯ್ಕೆ ಸಮಿತಿಯ ಶಿಫಾರಸ್ಸನ್ನು ಪರಿಗಣಿಸಬೇಕು. ಈ ಆಯ್ಕೆ ಸಮಿತಿಯ ಸದಸ್ಯರು ಈ ಕೆಳಗಿನಂತೆ ಇರಬೇಕು.

ಅ) ರಾಜ್ಯ ಆಯೋಗದ ಅಧ್ಯಕ್ಷ– ಕಾರ್ಯಾಧ್ಯಕ್ಷರಾಗಿರಬೇಕು.

ಬ) ರಾಜ್ಯ ಸರಕಾರದ ಕಾನೂನು ಇಲಾಖೆಯ ಕಾರ್ಯದರ್ಶಿ.

ಕ) ರಾಜ್ಯದಲ್ಲಿ ಗ್ರಾಹಕರ ವ್ಯವಹಾರಗಳನ್ನು ನೋಡಿಕೊಳ್ಳುತ್ತಿರುವ ಇಲಾಖೆಯ ಕಾರ್ಯದರ್ಶಿ.

೩) ಜಿಲ್ಲಾ ವೇದಿಕೆಯ ಪ್ರತಿಯೊಬ್ಬ ಸದಸ್ಯರು ೫ ವರ್ಷಗಳ ಅವಧಿಯವರೆಗೆ ಅಥವಾ ವಯಸ್ಸಿನ ೬೫ ವರ್ಷಗಳ ವಯಸ್ಸಿನವರೆಗೆ ಅವರೆಡರಲ್ಲಿ ಯಾವುದು ಮೊದಲೋ ಅದರ ಪ್ರಕಾರ ಅಧಿಕಾರದಲ್ಲಿರಬೇಕು. ಅವರು ಪುನಃ ನೇಮಕಗೊಳ್ಳಲು ಅರ್ಹರಾಗಿರುವುದಿಲ್ಲ.

೪) ಯಾವುದೇ ಸದಸ್ಯನು ತನ್ನ ಸದಸ್ಯತ್ವಕ್ಕೆ ರಾಜಿನಾಮೆಯನ್ನು ತನ್ನ ಸ್ವಂತ ಕೈಬರಹದಲ್ಲಿ ಬರೆದು ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡಬೇಕು. ಸರ್ಕಾರವು ಅವನ ರಾಜಿನಾಮೆಯನ್ನು ಸ್ವೀಕರಿಸಿದ ನಂತರ ಅವನ ಸ್ಥಳದಲ್ಲಿ ಸಂಬಂಧಿಸಿದ ವರ್ಗದ ಅರ್ಹತೆಯ ಪ್ರಕಾರ ಮತ್ತೊಬ್ಬ ವ್ಯಕ್ತಿಯನ್ನು ನೇಮಿಸಲಾಗುವುದು.

೫) ಜಿಲ್ಲಾ ವೇದಿಕೆಯ ಸದಸ್ಯರ ಸೇವಾ ನಿಯಮಗಳು ಮತ್ತು ಇತರೆ ಷರತ್ತುಗಳು ಹಾಗೂ ಗೌರವಧನ ಮತ್ತು ಇತರ ಭತ್ತೆಗಳು ರಾಜ್ಯಸರ್ಕಾರ ಸೂಚಿಸಿದ ಪ್ರಕಾರ ಇರುತ್ತದೆ. ಜಿಲ್ಲಾ ವೇದಿಕೆಯ ಅಧ್ಯಕ್ಷರು, ಜಿಲ್ಲಾ ನ್ಯಾಯಾದೀಶರು ತೆಗೆದುಕೊಳ್ಳುವ ವೇತನವನ್ನು ಪಡೆಯುತ್ತಾರೆ. ಪೂರ್ಣಾವಧಿ ಸದಸ್ಯರು ರೂ ೧೫೦೦೦ ಪ್ರತಿತಿಂಗಳು ಗೌರವಧನದೊಂದಿಗೆ ಪ್ರತಿ ತಿಂಗಳು ರೂ ೩೦೦೦ ಭತ್ತೆಯನ್ನು ಹೊಂದಿರುತ್ತಾರೆ.

ಅಲ್ಪಾವಧಿ ಸದಸ್ಯರು ಪ್ರತಿದಿನ ರೂ ೬೦೦ ಗೌರವಧನ ಮತ್ತು ರೂ ೧೫೦ ಇತರೆ ಭತ್ತೆಯನ್ನು ಹೊಂದಿರುತ್ತಾರೆ.

೬) ಜಿಲ್ಲಾ ವೇದಿಕೆಯ ಅಧಿಕಾರಿಗಳನ್ನು ಹಾಗೂ ಸಿಬ್ಬಂಧಿಯವರನ್ನು ನೇಮಿಸುವ ಅಧಿಕಾರವು, ರಾಜ್ಯ ಆಯೋಗದ ಅಧ್ಯಕ್ಷರಿಗೆ ಇರುತ್ತದೆ.

೭) ಸಿಬ್ಬಂಧಿಯ ಹುದ್ಧೆಯ ಅರ್ಹತೆ, ಸಂಖ್ಯೆ, ವೇತನ ಮತ್ತು ಇತರೇ ಭತ್ತೆಯನ್ನು ರಾಜ್ಯ ಆಯೋಗದ ಅಧ್ಯಕ್ಷರನ್ನು ಗಣನೆಗೆ ತೆಗೆದುಕೊಂಡು, ರಾಜ್ಯ ಸರ್ಕಾರವು ನೇಮಿಸಬೇಕಾಗುತ್ತದೆ.

೮) ಸಿಬ್ಬಂದಿಯ ವೇತನ ಮುಂತಾದವುಗಳನ್ನು ರಾಜ್ಯದ ಬೊಕ್ಕಸದಿಂದ ಕೊಡಬೇಕಾಗುತ್ತದೆ.

**ವ್ಯಾಪ್ತಿ:**

೧ ಕಾನೂನಿನ ಪ್ರಕಾರ ದೂರಿನಲ್ಲಿ ಕಾಣಿಸಿದ ಸರಕುಗಳು ಅಥವಾ ಸೇವೆಯ ಮೌಲ್ಯವು, ಪರಿಹಾರಧನವನ್ನು ಒಳಗೊಂಡು ೨೦ ಲಕ್ಷ ರೂಪಾಯಿಗಳಿಗೆ ಮಿಕ್ಕದಿದ್ದರೆ, ಅಂಥಹ ದೂರುಗಳನ್ನು ಸ್ವೀಕರಿಸುವ ಅಧಿಕಾರ ಜಿಲ್ಲಾ ವೇದಿಕೆಗೆ ಇರುತ್ತದೆ.

೨ ಜಿಲ್ಲಾ ವೇದಿಕೆಯ ಅಧಿಕಾರ ವ್ಯಾಪ್ತಿಯ ಪರಿಮಿತಿಯಲ್ಲಿರುವವರು ತಮ್ಮ ಜಿಲ್ಲಾ ವೇದಿಕೆಗೆ ದೂರನ್ನು ಸಲ್ಲಿಸಬಹುದು.

೩ ವ್ಯಾಜ್ಯವನ್ನು ಸಲ್ಲಿಸುವ ಸಮಯದಲ್ಲಿ, ಎದುರು ಪಕ್ಷದವರು ಅಥವಾ ಒಬ್ಬರಿಗಿಂತ ಹೆಚ್ಚು ಜನರು ಎದುರು ಪಕ್ಷದಲ್ಲಿದ್ದರೆ, ಅವರಲ್ಲಿ ಪ್ರತಿಯೊಬ್ಬನು ಪ್ರತ್ಯಕ್ಷವಾಗಿ ಮತ್ತು ಸ್ವ-ಸಂತೋಷದಿಂದ ಜಿಲ್ಲಾ ವೇದಿಕೆಯ ವ್ಯಾಪ್ತಿಯಲ್ಲಿರುವ ಸ್ಥಳದಲ್ಲಿ ವಾಸಿಸುತ್ತಿರಬೇಕು ಅಥವಾ ವ್ಯವಹಾರವನ್ನು ನಡೆಸುತ್ತಿರಬೇಕು ಅಥವಾ ವ್ಯವಹಾರದ ಶಾಖೆಯನ್ನು ಹೊಂದಿರಬೇಕು ಅಥವಾ ಪ್ರತಿಫಲಕ್ಕಾಗಿ ಸ್ವತಃ ಕೆಲಸ ಮಾಡುತ್ತಿರಬೇಕು.

೪ ಜಿಲ್ಲಾ ವೇದಿಕೆಯ ವ್ಯಾಪ್ತಿಯ ಪರಿಮಿತಿಯ ಹೊರಗೆ ವಾಸಿಸುವ ಅಥವಾ ಪರಿಮಿತಿಯ ಸ್ಥಳದಲ್ಲಿ ವಾಸಿಸದಿರುವ ಅಥವಾ ವ್ಯವಹಾರವನ್ನು ನಡೆಸದಿರುವ ಅಥವಾ ಶಾಖೆಯನ್ನು ಹೊಂದದಿರುವ ಅಥವಾ ಪ್ರತಿಫಲಕ್ಕಾಗಿ ಸ್ವತಃ ಕೆಲಸ ಮಾಡದಿರುವ ಎದುರು ಪಕ್ಷದವರ ದೂರಿಗೆ ಒಪ್ಪಿಗೆ ನೀಡಬೇಕು.

**ದೂರನ್ನು ಸಲ್ಲಿಸುವ ವಿಧಾನ:**

ಮಾರಾಟವಾದ, ಅಥವಾ ವಿಲೇವಾರಿ ಆದ ಅಥವಾ ಮಾರಾಟ ಮಾಡಲು ಒಪ್ಪಿದ ಯಾವುದೇ ವಸ್ತುಗಳಿಗೆ ಸಂಬಂಧಿಸಿದ ಇಲ್ಲವೆ ಒದಗಿಸುವ ಅಥವಾ ಒದಗಿಸಲು ಒಪ್ಪಿದ ಯಾವುದೇ ಸೇವೆಗೆ ಸಂಬಂದಿಸಿದ ದೂರನ್ನು ಈ ಕೆಳಗಿನವರು ಸಲ್ಲಿಸಬಹುದು.

ಎ) ಯಾರಿಗೆ ಸರಕುಗಳನ್ನು ಮಾರಲಾಗಿದೆಯೋ ಅಥವಾ ವಿಲೇವಾರಿ ಒಪ್ಪಿಕೊಳ್ಳಲಾಗಿದೆಯೋ ಅಥವಾ ಮಾರಲು ಅಥವಾ ವಿಲೇವಾರಿ ಕೊಡಲು ಒಪ್ಪಿಕೊಳ್ಳಲಾಗಿದೆಯೋ ಅಥವಾ ಸೇವೆಯನ್ನು ಒದಗಿಸಲಾಗಿದೆಯೊ ಅಥವಾ ಒದಗಿಸಲು ಒಪ್ಪಿಕೊಳ್ಳಲಾಗಿದೆಯೋ ಅವರು.

ಬಿ) ಯಾವುದೇ ಮಾನ್ಯತೆ ಪಡೆದ ಗ್ರಾಹಕ ಸಂಘ ಯಾರಿಗೆ ಸರಕುಗಳನ್ನು ಮಾರಲಾಗಿದೆಯೋ ಅಥವಾ ವಿಲೇವಾರಿ ಮಾಡಲಾಗಿದೆಯೋ ಅಥವಾ ಮಾರಲು ಇಲ್ಲವೆ ವಿಲೇವಾರಿ ಕೊಡಲು ಒಪ್ಪಿಕೊಳ್ಳಲಾಗಿದೆಯೋ ಅಥವಾ ಸೇವೆಯನ್ನು ಒದಗಿಸಲಾಗಿದೆಯೋ ಅಥವಾ ಒದಗಿಸಲು ಒಪ್ಪಿಕೊಳ್ಳಲಾಗಿದೆಯೋ ಅಂಥಹ ಗ್ರಾಹಕರು ಇಂತಹ ಸಂಘದ ಸದಸ್ಯನಾಗಿರಬಹುದು ಅಥವಾ ಸದಸ್ಯನಾಗಿರಲಿಕ್ಕಿಲ್ಲ.

ಸಿ) ಗ್ರಾಹಕ ದೊಡ್ಡ ಸಂಖ್ಯೆಯಲ್ಲಿದ್ದಾಗ ಮತ್ತು ಅವರೆಲ್ಲರ ಆಸಕ್ತಿ, ಒಂದೇ ಇದ್ದಾಗ ಹೀಗೆ ಆಸಕ್ತಿ ಹೊಂದಿದ ಎಲ್ಲ ಗ್ರಾಹಕರ, ಪರವಾಗಿ ಅಥವಾ ಅವರ ಪ್ರಯೋಜನಕ್ಕಾಗಿ ಅಥವಾ ಒಬ್ಬರಿಗಿಂತ ಹೆಚ್ಚು ಗ್ರಾಹಕರು ಜಿಲ್ಲಾ ವೇದಿಕೆಯ ಅನುಮತಿ ಪಡೆದು ದೂರನ್ನು ಸಲ್ಲಿಸಬಹುದು.

ಡಿ) ಕೇಂದ್ರ ಸರ್ಕಾರ.

ಇ) ರಾಜ್ಯ ಸರ್ಕಾರ.

**ವಿಧಾನ :**

೧ ದೂರಿನಲ್ಲಿ ಕಾಣಿಸಿದ ಎದುರ ಪಕ್ಷದವನಿಗೆ ದೂರಿನ ಒಂದು ಪ್ರತಿಯನ್ನು ಕಳಿಸಿ ಆ ದೂರನ್ನು ಕುರಿತು ತನ್ನ ಹೇಳಿಕೆಯನ್ನು ೩೦ ದಿನಗಳ ಅವಧಿಯೊಳಗಾಗಿ ಕಳಿಸಿ ಕೊಡಬೇಕೆಂದು ನಿರ್ದೇಶನ ನೀಡುತ್ತದೆ. ಸಂದರ್ಭಕ್ಕನುಸಾರವಾಗಿ ಜಿಲ್ಲಾವೇದಿಕೆಯು ಈ ಅವಧಿಯನ್ನು ೧೫ ದಿನಗಳಿಗೆ ಮಿಕ್ಕದಂತೆ ವಿಸ್ತರಿಸಬಹುದು.

೨ ಎದುರು ಪಕ್ಷದವನು ದೂರಿನ ಪ್ರತಿಯನ್ನು ಪಡೆದ ನಂತರ, ಆಪಾದನೆಯನ್ನು ನಿರಾಕರಿಸಿದರೆ ಅಥವಾ ಪ್ರತಿಭಟಿಸಿದರೆ ಅಥವಾ ಗೊತ್ತು ಪಡಿಸಿದ ಅವಧಿಯೊಳಗಾಗಿ ಜಿಲ್ಲಾ ವೇದಿಕೆಗೆ ತನ್ನ ಪ್ರಕರಣಕ್ಕೆ ಸಂಬಂಧಿಸಿದಂತೆ ಯಾವುದೇ ಕ್ರಮ ತೆಗೆದುಕೊಳ್ಳಲು ತಪ್ಪಿದರೆ ಅಥವಾ ವಿಫಲವಾದರೆ, ಆಗ ಜಿಲ್ಲಾ ವೇದಿಕೆಯು ಗ್ರಾಹಕನ ವ್ಯಾಜ್ಯವನ್ನು ಇತ್ಯರ್ಥಗೊಳಿಸಲು ಕ್ರಮ ಕೈಕೊಳ್ಳುತ್ತದೆ.

೩ ವಸ್ತುವಿನಲ್ಲಿ ದೋಷವಿದೆಯೆಂಬ ಕಾರಣದಿಂದ ದೂರನ್ನು ಸಲ್ಲಿಸಿದಾಗ ಆ ದೋಷವನ್ನು ಪರೀಕ್ಷೆ ಅಥವಾ ವಿಶ್ಲೇಷಣೆಯಿಲ್ಲದೆ ಕಂಡು ಹಿಡಿಯಲು ಸಾಧ್ಯವಿಲ್ಲದಿದ್ದಾಗ ಜಿಲ್ಲಾವೇದಿಕೆಯು ಆ ದೂರನ್ನು ಸಲ್ಲಿಸಿದವನಿಂದ ಆ ಸರಕುಗಳನ್ನು ಸೀಲು ಮಾಡಿ ಸೂಚಿಸಿದ ವಿಧಾನದ ಪ್ರಕಾರ ಅದನ್ನು ಧೃಡಿಕರಿಸಿ ಅದರ ಪರೀಕ್ಷೆಗಾಗಿ ಯುಕ್ತವಾದ ಪ್ರಯೋಗಶಾಲೆಗೆ ಕಳಿಸಿಕೊಡುತ್ತದೆ. ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿ ಅದು ತನ್ನ ವರದಿಯನ್ನು ಜಿಲ್ಲಾವೇದಿಕೆಗೆ ೪೫ ದಿನಗಳೊಳಗಾಗಿ ಕಳುಹಿಸಿಕೊಡುತ್ತದೆ.

೪ ಜಿಲ್ಲಾ ವೇದಿಕೆಯು ದೂರು ಕೊಟ್ಟವನಿಗೆ ಕೆಲವೊಂದು ಹಣವನ್ನು ಶುಲ್ಕವೆಂದು ಜಮಾ ಮಾಡಲು ಹೇಳುತ್ತದೆ. ಜಿಲ್ಲಾವೇದಿಕೆ ಈ ಹಣವನ್ನು ಪ್ರಯೋಗಶಾಲೆಯ ಪರೀಕ್ಷೆ ಶುಲ್ಕಕ್ಕೆ ಕೊಡುತ್ತದೆ.

೫ ಪ್ರಯೋಗಶಾಲೆಯ ವರದಿಯನ್ನು ಪಡೆದುಕೊಂಡನಂತರ, ಜಿಲ್ಲಾವೇದಿಕೆಯು ಅದರ ಪ್ರತಿಯನ್ನು ತನ್ನ ಶರಾದೊಂದಿಗೆ ಸಂಬಂಧಿಸಿದ ಎದುರು ಪಕ್ಷದವರೊಂದಿಗೆ ಕೊಟ್ಟು ಕಳುಹಿಸುತ್ತದೆ.

೬ ಯುಕ್ತ ಪ್ರಯೋಗಶಾಲೆಯು ಮಾಡಿದ ವರದಿಯ ಔಚಿತ್ಯದ ಬಗೆಗೆ, ಅಥವಾ ಅದು ನಮೂನೆಯ ಪರೀಕ್ಷೆಗಾಗಿ ಅಥವಾ ವಿಶ್ಲೇಷಣೆಗಾಗಿ ಅನುಸರಿಸಿದ ವಿಧಾನದ ಔಚಿತ್ಯದ ಬಗೆಗೆ ತಕರಾರು ಮಾಡಿದರೆ ಆ ಪ್ರಯೋಗ ಶಾಲೆಯು ಮಾಡಿದ ವರದಿಯ ಬಗೆಗೆ ತನ್ನ ತಕರಾರನ್ನು ಅಥವಾ ಆಕ್ಷೇಪಣೆಗಳನ್ನು ಬರಹದಲ್ಲಿ ಕೊಡಬೇಕೆಂದು ದೂರು ಕೊಟ್ಟವವನಿಗಾಗಲಿ ಅಥವಾ ಎದುರು ಪಕ್ಷದವರಿಗಾಗಲಿ ನಿರ್ದೇಶಿಸುತ್ತದೆ.

೭ ನಂತರ ಜಿಲ್ಲಾವೇದಿಕೆ ಎರಡು ಕಡೆಯವರಿಗೆ ವರದಿಯ ಕುರಿತು ವಾದ ಮಾಡಲು ಅವಕಾಶ ಮಾಡಿಕೊಡುತ್ತದೆ.

೮ ವಾದ– ಪ್ರತಿವಾದಗಳನ್ನು ಆಲಿಸಿದ ನಂತರ ಜಿಲ್ಲಾ ವೇದಿಕೆಯು ಪ್ರಕರಣದ ಪ್ರಕಾರ ತನ್ನ ಯುಕ್ತ ತೀರ್ಪನ್ನು ನೀಡುತ್ತದೆ.

೯ ಜಿಲ್ಲಾವೇದಿಕೆಗೆ ವಸ್ತುವಿನ ನಮೂನೆಯನ್ನು ಪರೀಕ್ಷೆಗಾಗಿ ಅಥವಾ ವಿಶ್ಲೇಷಣೆಗಾಗಿ ಪ್ರಯೋಗ ಶಾಲೆಗೆ ಕಳುಹಿಸಿ ಕೊಡುವ ಅವಶ್ಯಕತೆ ಇಲ್ಲವೆಂದು ಕಂಡು ಬಂದರೆ, ಆಗ ಜಿಲ್ಲಾ ವೇದಿಕೆಯು:–

ಅ) ದೂರಿನ ಒಂದು ಪ್ರತಿಯನ್ನು ಎದುರು ಪಕ್ಷದವನಿಗೆ ಕಳುಹಿಸುತ್ತಾರೆ. ಅವನು ಆರೋಪದ ಬಗೆಗೆ ತನ್ನ ಹೇಳಿಕೆಯನ್ನು ೩೦ ದಿನಗಳಲ್ಲಿ ಕಳುಹಿಸಿ ಕೊಡಬೇಕೆಂದು ಜಿಲ್ಲಾ ವೇದಿಕೆ ನಿರ್ದೇಶಿಸುತ್ತದೆ. ಈ ಅವಧಿಯನ್ನು ೧೫ ದಿನಗಳ ವರೆಗೆ ಮುಂದೂಡಬಹುದು.

ಬ) ಎದುರು ಪಕ್ಷದವನು ತನ್ನ ಮೇಲೆ, ದೂರಿನ ಪ್ರತಿಯನ್ನು ಪಡೆದ ನಂತರ ದೂರಿನಲ್ಲಿ ಕಾಣಿಸಲಾದ ಅಪಾದನೆಗಳನ್ನು ನಿರಾಕರಿಸಿದರೆ ಇಲ್ಲವೆ ಪ್ರತಿಭಟಿಸಿದರೆ ಅಥವಾ ಗೊತ್ತು ಪಡಿಸಿದ ಅವಧಿಯೊಳಗಾಗಿ ಜಿಲ್ಲಾವೇದಿಕೆಗೆ ತನ್ನ ಪ್ರಕರಣಕ್ಕೆ ಸಂಬಂಧಿಸಿದಂತೆ ಯಾವುದೇ ಕ್ರಮ ತೆಗೆದುಕೊಳ್ಳಲು ತಪ್ಪಿದರೆ ಅಥವಾ ವಿಫಲನಾದರೆ, ಆಗ ಜಿಲ್ಲಾ ವೇದಿಕೆಯು ಗ್ರಾಹಕನ ದೂರನ್ನು ಈ ಕೆಳಗೆ ಕಾಣಿಸಿದಂತೆ ಇತ್ಯರ್ಥಗೊಳಿಸಲು ಕ್ರಮ ಕೈಗೊಳ್ಳುತ್ತದೆ.

ಕ) ದೂರು ಕೊಟ್ಟವನು ಅಥವಾ ಫಿರ್ಯಾದಿದಾರನು ಮತ್ತು ಎದುರು ಪಕ್ಷದವನು ಜಿಲ್ಲಾ ವೇದಿಕೆಯ ಗಮನಕ್ಕೆ ತಂದ ಪುರಾವೆಯ ಆಧಾರದ ಮೇಲೆ ಎದುರು ಪಕ್ಷದವನು ದೂರಿನಲ್ಲಿ ಇರುವ ಅಪಾದನೆಯನ್ನು ನಿರಾಕರಿಸಿದರೆ ಇಲ್ಲವೆ ಪ್ರತಿಭಟಿಸಿದರೆ ಜಿಲ್ಲಾ ವೇದಿಕೆಯು ಕೊಟ್ಟ ಅವಧಿಯೊಳಗಾಗಿ ಎದುರು ಪಕ್ಷದವನು ತನ್ನ ತಕರಾರನ್ನು ಅಥವಾ ಹೇಳಿಕೆಯನ್ನು ನಿರೂಪಿಸಲು ತಪ್ಪಿದರೆ ಅಥವಾ ವಿಫಲನಾದರೆ, ಫಿರ್ಯಾದಿದಾರನು ಹಾಜರುಪಡಿಸಿದ ಪುರಾವೆಯ ಆಧಾರದ ಮೇಲೆ ದೂರನ್ನು ಇತ್ಯರ್ಥಗೊಳಿಸುತ್ತಾರೆ.

ಮೇಲಿನ ವಿಧಾನದ ಪ್ರಕಾರ ಇತ್ಯರ್ಥವಾದ ದೂರನ್ನು ವಾಸ್ತವಿಕ ನ್ಯಾಯ ತತ್ವಗಳನ್ನು ಅನುಸರಿಸಿಲ್ಲವೆಂದು ಅದನ್ನು ಯಾವುದೆ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗದು.

ಈ ಕೆಳಗೆ ಕೊಟ್ಟ ವಿಷಯಗಳನ್ನು ನಿರ್ಣಯಿಸುವಾಗ ಸಿವ್ಹಿಲ್ ನ್ಯಾಯಾಲಯಕ್ಕೆ ಇರುವ ಅಧಿಕಾರ ಜಿಲ್ಲಾವೇದಿಕೆಗೂ ಇರುತ್ತದೆ.

೧ ಯಾವುದೇ ಪ್ರತಿವಾದಿಗೆ ಸಮನ್ಸ ಕಳುಹಿಸಿ ಹಾಜರಾಗಬೇಕೆಂದು ಒತ್ತಾಯಿಸಲು ಮತ್ತು ಅವರಿಂದ ಪ್ರಮಾಣ ಮಾಡಿಸಿ ಅವರ ಸಾಕ್ಷಿಯನ್ನು ಪಡೆಯಲು ಅಧಿಕಾರವಿದೆ.

೨ ಪುರಾವೆ ಎಂದು ಹಾಜರುಪಡಿಸಬಹುದಾದ ಯಾವುದೇ ಕಾಗದ ಪತ್ರ, ದಾಖಲೆಪತ್ರ ಅಥವಾ ಇತರ ವಸ್ತುಗಳನ್ನು ಹಾಜರಪಡಿಸಲು ಮತ್ತು ಅವುಗಳನ್ನು ಪರೀಶೋಧಿಸಲು ಅಧಿಕಾರವಿದೆ.

೩ ಪ್ರಮಾಣಪತ್ರದ ಆಧಾರದ ಮೇಲೆ ಪುರಾವೆಗಳನ್ನು ಸ್ವೀಕರಿಸುವುದು.

೪ ಸಂಬಂಧಿಸಿದ ಯುಕ್ತ ಪ್ರಯೋಗಶಾಲೆ ಅಥವಾ ಮತ್ತಿತರ ಮೂಲದಿಂದ ಸಂಬಂಧಿಸಿದ ವಿಶ್ಲೇಷಣೆ ಅಥವಾ ಪರೀಕ್ಷೆ ವರದಿಯನ್ನು ಕಡ್ಡಾಯವಾಗಿ ಪಡೆಯಬೇಕು.

೫ ಸಾಕ್ಷಿದಾರನಿಗೆ ಸಾಕ್ಷಿ ನೀಡಲು ಆದೇಶ ಕೊಡುವ ಅಧಿಕಾರ.

೬ ನಿರ್ಣಯಿಸಿಕೊಂಡ ಇತರ ಯಾವದೇ ವಿಷಯ.

ಜಿಲ್ಲಾ ವೇದಿಕೆಯ ಎದುರು ಇರುವ ಪ್ರತಿಯೊಂದು ನಡವಳಿಕೆಯು, ಭಾರತದ ದಂಡ ಸಂಹಿತೆಯ ಪ್ರಕಾರ ನ್ಯಾಯಯುತವಾಗಿವೆ. ದಂಡ ಪ್ರಕ್ರಿಯೆ ಸಂಹಿತೆಯ ಪ್ರಕಾರ ಜಿಲ್ಲಾ ವೇದಿಕೆಯನ್ನು ಸಿವಿಲ್ ನ್ಯಾಯಾಲಯವೆಂದು ಪರಿಗಣಿಸಲಾಗುತ್ತದೆ.

**ತೀರ್ಮಾನ:**

ಕಾನೂನಿನ ಕ್ರಮಗಳನ್ನು ಕೈಗೊಂಡ ನಂತರ, ದೂರಿನಲ್ಲಿ ಕಾಣಿಸಲಾದ ಸರಕುಗಳು ದೋಷಯುಕ್ತವಾಗಿವೆಂಬ ಬಗೆಗೆ ಅಥವಾ ದೂರಿನಲ್ಲಿ ಕಾಣಿಸಿದಂತೆ ಸೇವೆಯು ಆರೋಪಗಳಿಂದ ಕೂಡಿದೆ ಎಂಬುದು ಸಾಬೀತಾದರೆ, ಜಿಲ್ಲಾ ವೇದಿಕೆ, ಎದುರು ಪಕ್ಷದವನಿಗೆ ಈ ಕೆಳಗಿನ ಆದೇಶವನ್ನು ನೀಡಿ, ಕ್ರಮ ಜರುಗಿಸಲು ಹೇಳಬಹುದು.

೧. ಯುಕ್ತ ಪ್ರಯೋಗಶಾಲೆಯು ತೋರಿಸಿಕೊಟ್ಟ ವಸ್ತುಗಳಲ್ಲಿ ದೋಷವನ್ನು ತೆಗೆದು ಹಾಕಬೇಕು.

೨. ದೋಷಪೂರಿತ ವಸ್ತುಗಳ ಬದಲಾಗಿ ಅದೇ ಬಗೆಯ ದೋಷರಹಿತ ವಸ್ತುವನ್ನು ಪೂರೈಸಬೇಕು.

೩. ದೂರು ನೀಡಿದವನಿಗೆ ಮೌಲ್ಯದ ಜೊತೆಗೆ ವೆಚ್ಚ ಮಾಡಿದ್ದರೆ ಅದನ್ನು ಕೊಡಬೇಕು.

೪. ಎದುರು ಪಕ್ಷದವನ ನಿರ್ಲಕ್ಷದಿಂದ ಗ್ರಾಹಕನಿಗೆ ನಷ್ಟವೇನಾದರೂ ಆಗಿದ್ದರೆ, ಅಥವಾ ಭಾದೆಯೇನಾದರೂ ಆಗಿದ್ದರೆ, ನಷ್ಟಪರಿಹಾರವೆಂದು ವೇದಿಕೆ ನಿರ್ಧರಿಸಿದ ಮೊತ್ತ ಕೊಡಬೇಕು.

೫. ಸೇವೆಯ ಬಗೆಗೆ ದೂರು ಸಲ್ಲಿಸಿದಾಗ ಆ ಸೇವೆಯಲ್ಲಿರುವ ದೋಷಗಳನ್ನು ಅಥವಾ ನ್ಯೂನತೆಗಳನ್ನು ತೆಗೆದು ಹಾಕಬೇಕು.

೬. ಅನುಚಿತ ವ್ಯಾಪಾರ ಪ್ರವೃತ್ತಿ ಅಥವಾ ಪ್ರತಿ ಬಂಧಿತ ವ್ಯಾಪಾರಿ ಪ್ರವೃತ್ತಿಯನ್ನು ಬಿಟ್ಟುಕೊಡಬೇಕು ಅಥವಾ ಪುನಃ ಕೈಕೊಳ್ಳಬಾರದು.

೭. ಅಪಾಯಕಾರಕ ಸರಕುಗಳನ್ನು ಮಾರಾಟ ಮಾಡಲು ಇಡಬಾರದು.

೮. ಮಾರಾಟ ಮಾಡಲು ಇಟ್ಟ ಅಪಾಯಕಾರಕ ವಸ್ತುಗಳನ್ನು ಹಿಂದಕ್ಕೆ ಪಡೆಯಬೇಕು.

೯. ಸಂಬಂಧಿಸಿದ ಪಕ್ಷಗಳಿಗೆ ಆದ ನಷ್ಟವನ್ನು ತುಂಬಿಕೊಡಬೇಕು.

ಪ್ರತಿಯೊಂದು ನಡವಳಿಕೆಯನ್ನು ಕೈಗೊಳ್ಳಲು, ಜಿಲ್ಲಾವೇದಿಕೆ ವಿಚಾರಣೆ ನಡೆಸಿರಬೇಕು. ಯಾವುದೇ ಕಾರಣಕ್ಕಾಗಿ ಸದಸ್ಯನೊಬ್ಬನಿಗೆ ವಿಚಾರಣೆಯು ಪೂರ್ಣವಾಗುವವರೆಗೆ ಪೀಠದಲ್ಲಿ ಕುಳಿತುಕೊಳ್ಳಲು ಸಾಧ್ಯವಾಗದಿದ್ದಾಗ, ಅಧ್ಯಕ್ಷ ಮತ್ತು ಇನ್ನೊಬ್ಬ ಸದಸ್ಯರು ಜೊತೆಗೂಡಿ ಅದನ್ನು ಹೊಸದಾಗಿ ನಡೆಸಬೇಕು.

ಜಿಲ್ಲಾ ವೇದಿಕೆಯು ಮಾಡಿದ ಪ್ರತಿಯೊಂದು ಆದೇಶವನ್ನು ಅದರ ಅಧ್ಯಕ್ಷ ಮತ್ತು ವಿಚಾರಣೆಯಲ್ಲಿ ಭಾಗವಹಿಸಿದ ಸದಸ್ಯ ಸಹಿ ಮಾಡಬೇಕು.

ವಿಚಾರಣೆಯನ್ನು ಮಾಡುವಾಗ ಅಧ್ಯಕ್ಷರು ಮತ್ತು ಸದಸ್ಯರ ನಡುವೆ ಭಿನ್ನಾಭಿಪ್ರಾಯ ವ್ಯಕ್ತವಾದಾಗ, ಅವರು ಯಾವ ಅಂಶಗಳಲ್ಲಿ ಭಿನ್ನಾಭಿಪ್ರಾಯ ಉಂಟಾಗಿದೆ ಎನ್ನುವುದನ್ನು ತಿಳಿಸಬೇಕು ಮತ್ತು ಅದರ ಕುರಿತು ವಿಚಾರಣೆ ನಡೆಸಲು ಇನ್ನೊಬ್ಬ ಸದಸ್ಯನಿಗೆ ಕೇಳಿಕೊಳ್ಳಬೇಕು ಮತ್ತು ಅದರ ಬಗೆಗೆ ಬಹುಮತದಿಂದ ನಿರ್ಣಯ ತೆಗೆದುಕೊಳ್ಳಬೇಕು.

ದೂರುಗಳ ವಿಚಾರ ಮಾಡಿ ವಿಧಾನ ಮತ್ತು ಅದಕ್ಕೆ ಸಂಬಂಧಿಸಿದ ಇತರೆ ವಿಷಯಗಳ ಕುರಿತು ರಾಜ್ಯ ಸರ್ಕಾರವು ಗೊತ್ತುಪಡಿಸುತ್ತದೆ.

**ಮೇಲ್ಮನವಿ:**

ಜಿಲ್ಲಾ ವೇದಿಕೆಯು ನೀಡಿದ ಆದೇಶದಿಂದ ಪರಿಹಾರ ತೃಪ್ತಿಯಾಗದ, ಗ್ರಾಹಕ ಆ ಆದೇಶ ನೀಡಿದ ೩೦ ದಿನಗಳೊಳಗೆ ಆದೇಶದ ವಿರುದ್ಧ ರಾಜ್ಯ ಆಯೋಗಕ್ಕೆ ನಿರ್ದಿಷ್ಟ ಪಡಿಸಿದ ವಿಧಾನ ಮತ್ತು ನಮೂನೆಯಲ್ಲಿ ಮೇಲ್ಮನವಿ ಸಲ್ಲಿಸಬಹುದು. ವಿಳಂಬವಾದ ಮೇಲ್ಮನವಿಗೆ ಯೋಗ್ಯ ಕಾರಣಗಳಿದ್ದಾಗ ಅವು ರಾಜ್ಯ ಆಯೋಗಕ್ಕೆ ಮನವರಿಕೆಯಾದರೆ ಮೇಲ್ಮನವಿಯನ್ನು ಅದು ೩೦ ದಿನಗಳ ನಂತರವೂ ಸ್ವೀಕರಿಸಬಹುದು.

**ಆದೇಶಗಳ ಅಂತಿಮತೆ:**

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ಅಧಿನಿಯಮದ ಪ್ರಕಾರ ಜಿಲ್ಲಾವೇದಿಕೆ ರಾಜ್ಯ ಆಯೋಗ ಅಥವಾ ರಾಷ್ಟ್ರೀಯ ಆಯೋಗದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿದ್ದರೆ ಮೊದಲೆ ಕೊಟ್ಟ ಆದೇಶವು ಅಂತಿಮವಾಗಿದೆ.

**ಕಾಲಾವಧಿಯ ಮಿತಿ:**

೧. ವ್ಯಾಜ್ಯದ ಕಾರಣವು ಉದ್ಭವಿಸಿದ ಎರಡು ವರ್ಷದ ಅವಧಿಯೊಳಗಾಗಿ ದೂರನ್ನು ಸಲ್ಲಿಸದಿದ್ದರೆ, ಅಂಥಹ ದೂರನ್ನು ಜಿಲ್ಲಾ ವೇದಿಕೆಯಾಗಲಿ, ರಾಜ್ಯ ಆಯೋಗವಾಗಲಿ ಅಥವಾ ರಾಷ್ಟ್ರೀಯ ಆಯೋಗವು ಸ್ವೀಕರಿಸಲಾರದು.

೨. ದೂರು ನೀಡುವವನು ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ತನ್ನ ದೂರನ್ನು ಸಲ್ಲಿಸಲು ಸಾಧ್ಯವಾಗದ ಬಗೆಗೆ ಕಾರಣಗಳನ್ನು ವಿವರಿಸಿ ಜಿಲ್ಲಾವೇದಿಕೆ ರಾಜ್ಯ ಆಯೋಗ ರಾಷ್ಟ್ರೀಯ ಆಯೋಗಕ್ಕೆ ಮನವರಿಕೆ ಮಾಡಿಕೊಟ್ಟರೆ ಆ ದೂರನ್ನು ಅವಧಿ ಮೀರಿದ ನಂತರವೂ ಸ್ವೀಕರಿಸಬಹುದು.

ಆದರೆ ಜಿಲ್ಲಾವೇದಿಕೆ, ರಾಜ್ಯ ಆಯೋಗ ಅಥವಾ ರಾಷ್ಟ್ರೀಯ ಆಯೋಗವು ಇಂಥ ವಿಳಂಬವನ್ನು ತನ್ನ ಕಾರಣ ದಾಖಲಿಸದೆ ಯಾವುದೇ ದೂರನ್ನು ಸ್ವೀಕರಿಸಲಾಗದು.

**ಆಡಳಿತದ ನಿಯಂತ್ರಣ:**

ರಾಷ್ಟ್ರೀಯ ಆಯೋಗಕ್ಕೆ ಎಲ್ಲ ರಾಜ್ಯ ಆಯೋಗಗಳ ಮೇಲೆ ಆಡಳಿತ, ನಿಯಂತ್ರಣ ಇರುತ್ತದೆ.

ಅ) ದಾಖಲಾದ ಪ್ರಕರಣಗಳು ಇತ್ಯರ್ಥವಾದ ಪ್ರಕರಣಗಳು ಮತ್ತು ತೀರ್ಮಾನವಾಗದ ಪ್ರಕರಣಗಳ ಬಗೆಗೆ ನಿಯತಕಾಲಿಕವಾಗಿ ವರದಿಗಳನ್ನು ಪಡೆಯುವುದು.

ಬ) ದೂರುಗಳನ್ನು ವಿಚಾರಿಸುವ ಬಗೆಗೆ, ಒಂದೇ ತೆರನಾದ ವಿಧಾನವನ್ನು ಅನುಸರಿಸುವ ಕುರಿತು, ದೂರುದಾರ ನೀಡಿದ ಎಲ್ಲ ಕಾಗದ ಪತ್ರ, ದಸ್ತಾವೇಜುಗಳನ್ನು ಎದುರು ಪಕ್ಷದವರಿಗೆ ಕೊಡುವ ಕುರಿತು, ಯಾವುದೇ ಪ್ರಾದೇಶಿಕ ಭಾಷೆಯಲ್ಲಿ ನೀಡಿದ ಆದೇಶ ಇಂಗ್ಲೀಷ ಅನುವಾದ ಕಳುಹಿಸಿ ಕೊಡುವ ಸೂಚನೆಗಳನ್ನು ನೀಡುವುದು.

ಕ) ಜಿಲ್ಲಾ ವೇದಿಕೆಗಳು ಮತ್ತು ರಾಜ್ಯ ಆಯೋಗಗಳ ಅರೆ ನ್ಯಾಯಾಂಗ ಸ್ವಾತಂತ್ರದಲ್ಲಿ ಹಾಗೂ ಅಧಿಕಾರ ನಿರ್ವಹಣೆಯಲ್ಲಿ ಹಸ್ತಾಕ್ಷೇಪ ಮಾಡದೆ ಅವು ಕಾನೂನಿನ ಧೇಯೊದ್ಧೇಶಗಳನ್ನು ಅತ್ಯುತ್ತಮ ರೀತಿಯಲ್ಲಿ ಈಡೇರಿಸುವಂತೆ ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡುವುದು.

ರಾಜ್ಯ ಆಯೋಗಕ್ಕೆ ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಜಿಲ್ಲಾ ವೇದಿಕೆಗಳ ಕಾರ್ಯನಿರ್ವಹಣೆಯ ಮೇಲ್ವಿಚಾರಣೆ ಮಾಡಬೇಕಾಗುತ್ತದೆ.

ಜಿಲ್ಲಾ ವೇದಿಕೆ, ರಾಜ್ಯ ಆಯೋಗ ಅಥವಾ ರಾಷ್ಟ್ರೀಯ ಆಯೊಗದ ಆದೇಶಗಳನ್ನು ಜಾರಿಗೆಗೊಳಿಸಬಹುದು. ಒಂದು ವೇಳೆ ಜಾರಿಗೆ ತರಲು ಸಾಧ್ಯವಾಗದಿದ್ದರೆ, ಜಿಲ್ಲಾವೇದಿಕೆ, ರಾಜ್ಯ

ಆಯೋಗ ಅಥವಾ ರಾಷ್ಟ್ರೀಯ ಆಯೋಗವು ತನ್ನ ಆದೇಶವನ್ನು ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರುವ ನ್ಯಾಯಾಲಯಕ್ಕೆ ಕಳಿಸಿಕೊಡಬಹುದು.

ಜಿಲ್ಲಾ ವೇದಿಕೆ, ರಾಜ್ಯ ಆಯೋಗ, ಅಥವಾ ರಾಷ್ಟ್ರೀಯ ಆಯೋಗದಲ್ಲಿ ಸಲ್ಲಿಸಿದ ದೂರು ಕ್ಷುಲ್ಲಕವಾಗಿದ್ದರೆ ಅಥವಾ ಕಿರುಕುಳ ನೀಡುವಂತಹದ್ದು ಎಂದು ಗೊತ್ತಾದರೆ ಅಂತಹ ದೂರನ್ನು ಕಿತ್ತು ಹಾಕಲು ಬರುತ್ತದೆ ಹಾಗು ಕಿತ್ತು ಹಾಕಿದ ಕಾರಣಗಳನ್ನು ದಾಖಲಿಸಲಾಗುವುದು. ದೂರುದಾರನು ಎದುರು ಪಕ್ಷದವನಿಗೆ ರೂ ೧೦೦೦೦ ಮೀರದಂತೆ ನಷ್ಟಪರಿಹಾರ ಕೊಡಬೇಕೆಂದು ಆದೇಶ ನೀಡಬಹುದು.

ದೂರು ನೀಡಿದ ವ್ಯಕ್ತಿಯಾಗಲಿ, ಎದುರು ಪಕ್ಷದವರಾಗಲಿ, ಜಿಲ್ಲಾ ವೇದಿಕೆ ರಾಜ್ಯ ಆಯೋಗ, ಅಥವಾ ರಾಷ್ಟ್ರೀಯ ಆಯೋಗವು ನೀಡಿದ ಆದೇಶದ ಪ್ರಕಾರ ನಡೆದುಕೊಳ್ಳದಿದ್ದರೆ, ಆದೇಶವನ್ನು ಉಲ್ಲಂಘಿಸಿದರೆ, ತಪ್ಪಿತಸ್ಥ ವ್ಯಕ್ತಿಗೆ, ಒಂದು ತಿಂಗಳಿಂದ ಮೂರು ವರ್ಷದವರೆಗೆ ಶಿಕ್ಷೆ ವಿಧಿಸಬಹುದು ಅಥವಾ ಎರಡು ಸಾವಿರ ರೂಪಾಯಿಂದ ಹತ್ತು ಸಾವಿರ ರೂಪಾಯಿಗಳವರೆಗೆ ದಂಡ ವಿಧಿಸಬಹುದು ಅಥವಾ ಶಿಕ್ಷೆ ಮತ್ತು ದಂಡ ಎರಡನ್ನು ವಿಧಿಸಬಹುದು.

ಕೇಂದ್ರ ಸರಕಾರವು ಈ ಕಾನೂನಿನ ಅಡಿಯಲ್ಲಿ ಮಾಡಿದ ಪ್ರತಿಯೊಂದು ನಿಯಮವನ್ನು ಸಂಸತ್ತಿನ ಪ್ರತಿಯೊಂದು ಸದನಲ್ಲಿ ಅದನ್ನು ಮಂಡಿಸಬೇಕು. ಸಂಸತ್ತಿನ ಸದನದಲ್ಲಿ ನಿಯಮದ ಬದಲಾವಣೆಗೆ ಒಪ್ಪಿದರೆ ಅದನ್ನು ತಿದ್ದುಪಡಿ ಮಾಡಿ ಜಾರಿಗೆ ತರುತ್ತದೆ. ಸಂಸತ್ತಿನ ಎರಡು ಸದನಗಳು ನಿಯಮವನ್ನು ಮಾಡಬಾರದೆಂದು ತೀರ್ಮಾನಕ್ಕೆ ಬಂದರೆ ನಿಯಮ ರದ್ದಾಗುತ್ತದೆ.

ರಾಜ್ಯ ಸರಕಾರವು ಯಾವುದೇ ನಿಯಮವನ್ನು ಮಾಡಿದ ಕೂಡಲೇ ಅದನ್ನು ಬೇಗನೆ ಶಾಸನ ಸಭೆಯಲ್ಲಿ ಮಂಡಿಸಬೇಕಾಗುತ್ತದೆ.

೧೯೮೬ ರಲ್ಲಿ ಅಸ್ತಿತ್ವಗೊಂಡ ಗ್ರಾಹಕ ರಕ್ಷಣಾ ಕಾನೂನಿನಲ್ಲಿ ಗ್ರಾಹಕನು ತಾನು ಸಲ್ಲಿಸುವ ಅರ್ಜಿಗೆ ಶುಲ್ಕವಿಲ್ಲದೇ ಹಾಗೂ ಶೀಘ್ರದಲ್ಲಿ ದೂರು ಇತ್ಯರ್ಥಗೊಂಡು ನೊಂದ ಗ್ರಾಹಕನಿಗೆ ಪರಿಹಾರ ಕೊಡಬೇಕೆಂದು ಧೋರಣೆಯಿತ್ತು. ಈ ಗ್ರಾಹಕ ರಕ್ಷಣಾ ಕಾನೂನು ೨೦೦೪ ರಲ್ಲಿ ತಿದ್ದುಪಡಿ ತಂದು, ಸಲ್ಲಿಸುವ ದೂರುಗಳಿಗೆ ಕೊಡಬೇಕಾದ ಶುಲ್ಕದ ಶ್ರೇಣಿಯನ್ನು ಪ್ರಕಟಿಸಿದೆ.

ಅತೀ ಸಣ್ಣ ಪ್ರಮಾಣದ ಪರಿಹಾರ ಕೋರಿ ಅರ್ಜಿ ಸಲ್ಲಿಸವರಿಗೆ ಶುಲ್ಕ ವಿಧಿಸಿದರೆ ಗ್ರಾಹಕರಲ್ಲಿ ಉತ್ಸಾಹ, ಗ್ರಾಹಕ ಅಂದೋಲನ ಕುಂಠಿತವಾಗಬಹುದು. ಆದ್ದರಿಂದ ಶುಲ್ಕ ವಿನಾಯತಿ ನೀಡುವಂತೆ ಅನೇಕ ಸಂಘ ಸಂಸ್ಥೆಗಳು ದೂರು ಸಲ್ಲಿಸಿದಾಗ ಕೇಂದ್ರ ಸರ್ಕಾರ ೧೧.೨.೨೦೦೫ ರಂದು ಮತ್ತೊಂದು ತಿದ್ದುಪಡಿತಂದು, ಈ ಕೆಳಕಂಡ ಶುಲ್ಕವನ್ನು ಜಾರಿಗೆ ತರಲು ರಾಜ್ಯ ಪತ್ರದಲ್ಲಿ ಘೋಷಣೆ ಮಾಡಿತು.

**ಜಿಲ್ಲಾ ವೇದಿಕೆ**

| | | |
|---|---|---|
| ೧ | **ರೂಪಾಯಿ ಒಂದು ಲಕ್ಷದವರೆಗೆ ಪರಿಹಾರ ಕೇಳಿದ ದೂರುಗಳು**<br>ಎ) (ಅಂತ್ಯೋದಯ) ಪಡಿತರ ಚೀಟಿದಾರರು ಸಲ್ಲಿಸುವ ದೂರುಗಳಿಗೆ<br>ಬಿ) ಇತರರಿಗೆ | **ಶುಲ್ಕ ವಿನಾಯತಿ**<br><br>ರೂ ೧೦೦.೦೦ |
| ೨ | ೫ ಲಕ್ಷದವರಿಗಿನ ಪರಿಹಾರಕ್ಕೆ | ರೂ ೨೦೦.೦೦ |
| ೩ | ೫ ಲಕ್ಷದಿಂದ ೧೦ ಲಕ್ಷ ಪರಿಹಾರಕ್ಕೆ | ರೂ ೪೦೦.೦೦ |
| ೪ | ೧೦ ಲಕ್ಷದಿಂದ ೨೦ ಲಕ್ಷ ಪರಿಹಾರಕ್ಕೆ | ರೂ ೫೦೦.೦೦ |

**ರಾಜ್ಯ ಆಯೋಗ**

| | | |
|---|---|---|
| ೧ | ೫೦ ಲಕ್ಷದ ವರೆಗೆ ಪರಿಹಾರಕ್ಕೆ | ರೂ ೨೦೦೦.೦೦ |
| ೨ | ೫೦ ಲಕ್ಷದಿಂದ ೧ ಕೋಟಿಯವರೆಗೆ ಪರಿಹಾರಕ್ಕೆ | ರೂ. ೪೦೦೦.೦೦ |

**ರಾಷ್ಟ್ರೀಯ ಆಯೋಗ**

| | | |
|---|---|---|
| ೧ | ಒಂದು ಕೋಟಿಗಿಂತ ಹೆಚ್ಚಿನ ಪರಿಹಾರ | ರೂ ೫೦೦೦.೦೦ |

ಶುಲ್ಕಿನ ಕುರಿತು ಕರ್ನಾಟಕ ರಾಜ್ಯ ಸರ್ಕಾರ ಕೆಲವು ನಿಬಂಧನೆಗಳನ್ನು ಜಾರಿಗೆಗೊಳಿಸದಿರುವುದರಿಂದ ಇದನ್ನರಿತ ರಾಜ್ಯ ಆಯೋಗ ಗ್ರಾಹಕರಿಂದ ಶುಲ್ಕ ಪಡೆಯುವುದುನ್ನು ತಾತ್ಕಾಲಿವಾಗಿ ತಡೆಹಿಡಿದಿದೆ.[೭]

ಸದ್ಯದ ಪರಿಸ್ಥಿತಿಯಲ್ಲಿ ೬೦೪ ಜಿಲ್ಲಾವೇದಿಕೆಗಳು, ೩೫ ರಾಜ್ಯ ಆಯೋಗಗಳು, ರಾಷ್ಟ್ರೀಯ ಆಯೋಗದ ನೇತೃತ್ವದಲ್ಲಿ ಕಾರ್ಯ ಮಾಡುತ್ತಿವೆ.

**೪.೭. ಬೆಳಗಾವಿ ಜಿಲ್ಲಾ ಗ್ರಾಹಕರ ವೇದಿಕೆಯ ಕಾರ್ಯ ನಿರ್ವಹಣೆಯ ವಿಶ್ಲೇಷಣೆ :**

ಸಂಶೋಧನೆಗೆ ಕರ್ನಾಟಕ ರಾಜ್ಯ ಆಯೋಗವನ್ನು ಆಯ್ಕೆ ಮಾಡಿಕೊಳ್ಳಲು ಕಾರಣವನ್ನು, ಈ ಕೆಳಗೆ ವಿವರಿಸಲಾಗಿದೆ.

೧) ೩೧.೧೨.೨೦೦೭ ರಂದು ರಾಷ್ಟ್ರೀಯ ಆಯೋಗ, ಅಂತರ್ಜಾಲದಲ್ಲಿ ಬಿಡುಗಡೆ ಮಾಡಿದ ವರದಿಯ ಅನುಸಾರ, ನಮ್ಮ ದೇಶದಲ್ಲಿ ೬೦೪ ಜಿಲ್ಲಾ ವೇದಿಕೆಗಳು ಹಾಗು ೩೫ ರಾಜ್ಯ ಆಯೋಗಗಳು, ರಾಷ್ಟ್ರೀಯ ಆಯೋಗದ ನಿಯಮಗಳನ್ನು ಪರಿಪಾಲಿಸುತ್ತ ಕಾರ್ಯ ನಿರ್ವಹಿಸುತ್ತಿವೆ.

ರಾಜ್ಯ ಆಯೋಗಗಳು ೩೫

ಜಿಲ್ಲಾ ವೇದಿಕೆಗಳು ೬೦೪

ರಾಷ್ಟ್ರೀಯ ಆಯೋಗ ೧

ರಾಜ್ಯ ಆಯೋಗಗಳು ಹಾಗು ಜಿಲ್ಲಾವೇದಿಕೆಗಳ ಅನುಪಾತವು.

೩೫ : ೬೦೪ ಹಾಗೂ ೧ : ೧೭

೨) ಕರ್ನಾಟಕ ರಾಜ್ಯ ಆಯೋಗದ ಕೈಕೆಳಗೆ ೩೧ ಜಿಲ್ಲಾ ವೇದಿಕೆಗಳು ಕೆಲಸ ಮಾಡುತ್ತವೆ. ಅವುಗಳ ಅನುಪಾತವು. ೧ : ೩೧ ಇರುತ್ತದೆ.

೩) ಇದರಿಂದ ನಮಗೆ ಗೊತ್ತಾಗುವುದು ಏನೇಂದರೆ, (ಎ) ದೇಶದ ಎಲ್ಲಾ ರಾಜ್ಯ ಆಯೋಗಗಳು ಹಾಗು ಜಿಲ್ಲಾವೇದಿಕೆಗಳು ಅನುಪಾತಕ್ಕೆ (೧:೭) (ಬಿ) ಕರ್ನಾಟಕದ ರಾಜ್ಯ ಆಯೋಗ ಹಾಗೂ ಜಿಲ್ಲಾವೇದಿಕೆಗಳ ಅನುಪಾತವನ್ನು (೧:೩೧) ಹೋಲಿಸಿದಾಗ "ಕರ್ನಾಟಕದ ರಾಜ್ಯ ಆಯೋಗದ ಕೆಳಗೆ ಹೆಚ್ಚಿನ ಜಿಲ್ಲಾ" ವೇದಿಕೆಗಳು ಕಾರ್ಯನಿರ್ವಹಿಸುತ್ತ ಗ್ರಾಹಕರಿಗೆ ಸಾಧ್ಯವಾದ ನ್ಯಾಯವನ್ನು ಒದಗಿಸಿ ಕೊಡಲು ಕಾರ್ಯತತ್ಪರವಾಗಿವೆ ಎಂದು ಕಂಡುಕೊಳ್ಳಲಾಗಿದೆ.

ಆದ್ದರಿಂದ ಕಾರ್ಯವಿಶ್ಲೇಷಣೆಗೆ ಕರ್ನಾಟಕ ರಾಜ್ಯ ಆಯೋಗ ಸೂಕ್ತವೆಂದು ತಿಳಿದು ಅದನ್ನು ಆರಿಸಿಕೊಳ್ಳಲಾಯಿತು. ಪ್ರಸ್ತುತ ಅಧ್ಯಯನಕ್ಕೆ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯನ್ನು ಕಾರ್ಯವಿಶ್ಲೇಷಣೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ ೪.೧**

**೩೧.೧೨.೨೦೦೭ ರ ವರದಿಯ ಅನುಸಾರ ಕರ್ನಾಟಕ ರಾಜ್ಯದ ಜಿಲ್ಲಾವೇದಿಕೆಗಳಲ್ಲಿ ದಾಖಲಾದ ಹಾಗು ತೀರ್ಪುಗೊಂಡ ವ್ಯಾಜ್ಯಗಳ ವಿವರ.**[೮]

| ಅ.ನಂ | ಜಿಲ್ಲಾ ವೇದಿಕೆಯ ಹೆಸರು | ದಾಖಲಾದ ವ್ಯಾಜ್ಯಗಳು | ತೀರ್ಪುಗೊಂಡ ವ್ಯಾಜ್ಯಗಳು |
|---|---|---|---|
| ೧ | ಬೆಂಗಳೂರು ಅರ್ಬನ್ | ೨೨೫೩೬ | ೨೨೪೦೫ |
| ೨ | ಬೆಂಗಳೂರು ರೂರಲ್ ಬೆಂಗಳೂರು ಅರ್ಬನ್ | ೪೮೬ | ೪೮೦ |
| ೩ | ಮೊದಲನೇ ಹೆಚ್ಚುವರಿ | ೫೭೩೪ | ೫೫೯೨ |
| ೪ | ಎರಡನೇ ಹೆಚ್ಚುವರಿ | ೬೬೭೪ | ೬೫೧೪ |
| ೫ | ಮೂರನೇ ಹೆಚ್ಚುವರಿ | ೨೮೩೭ | ೨೬೯೪ |

| | | | |
|---|---|---|---|
| ೬ | ನಾಲ್ಕನೇ ಹೆಚ್ಚುವರಿ | ೨೭೫೮ | ೨೫೭೧ |
| ೭ | ಬಳ್ಳಾರಿ | ೨೦೫೯ | ೨೦೨೧ |
| ೮ | ಬೆಳಗಾವಿ | ೫೮೭೫ | ೫೬೯ |
| ೯ | ಬೀದರ್ | ೧೭೫೯ | ೧೬೩೨ |
| ೧೦ | ಬಿಜಾಪೂರ | ೨೩೫೦ | ೨೨೬೨ |
| ೧೧ | ಚಿತ್ರದುರ್ಗ | ೨೭೧೫ | ೨೬೯೩ |
| ೧೨ | ಚಿಕ್ಕಮಂಗಳೂರ | ೨೩೬೨ | ೨೨೩೮ |
| ೧೩ | ಧಾರವಾಡ | ೬೧೩೦ | ೫೬೯೨ |
| ೧೪ | ದಕ್ಷಿಣ ಕನ್ನಡ | ೮೮೪೫ | ೮೬೫೧ |
| ೧೫ | ಗುಲ್ಬರ್ಗಾ | ೨೩೧೯ | ೨೨೩೫ |
| ೧೬ | ಹಾಸನ | ೩೨೩೫ | ೩೦೧೨ |
| ೧೭ | ಕೋಲಾರ್ | ೧೯೭೨ | ೧೭೦೨ |
| ೧೮ | ಕೊಡಗು | ೨೭೧೪ | ೨೬೮೨ |
| ೧೯ | ಮಂಡ್ಯ | ೧೮೭೦ | ೧೮೦೮ |
| ೨೦ | ಮೈಸೂರು | ೫೪೧೯ | ೫೩೩೩ |
| ೨೧ | ರಾಯಚೂರ | ೧೭೧೮ | ೧೬೭೬ |
| ೨೨ | ಶಿವಮೊಗ್ಗ | ೨೯೨೪ | ೨೮೭೪ |
| ೨೩ | ತುಮಕೂರು | ೩೧೫೬ | ೩೧೧೬ |
| ೨೪ | ಹಾವೇರಿ | ೧೩೮೩ | ೬೭೬ |
| ೨೫ | ಬಾಗಲಕೋಟ | ೪೮೪ | ೪೧೭ |
| ೨೬ | ಉಡುಪಿ | ೧೦೧೪ | ೯೬೯ |
| ೨೭ | ಚಾಮರಾಜ ನಗರ | ೭೩೩ | ೭೦೭ |
| ೨೮ | ಕಾರವಾರ (ಉತ್ತರ ಕನ್ನಡ) | ೨೪೧೮ | ೨೨೮೭ |

| | | | |
|---|---|---|---|
| ೨೯ | ಗದಗ | ೧೦೧೪ | ೮೩೩ |
| ೩೦ | ಕೊಪ್ಪಳ | ೨೫೫ | ೧೯೩ |
| ೩೧ | ದಾವಣಗೆರೆ | ೧೦೭೨ | ೧೦೩೨ |
| | **ಒಟ್ಟು** | **೧೦೬೭೮೦** | **೧೦೨೩೯೬** |

**ಮೂಲ : ರಾಷ್ಟ್ರೀಯ ಆಯೋಗದ ವರದಿ.**

೧) ೩೧ ಗ್ರಾಹಕರ ವೇದಿಕೆಗಳಲ್ಲಿ ದಾಖಲಾದ ವ್ಯಾಜ್ಯಗಳು = ೧೦೬೭೮೦

ತೀರ್ಮಗೊಂಡ ವ್ಯಾಜ್ಯಗಳು = ೧೦೨೩೯೬

ಶೇಕಡಾವಾರು ತೀರ್ಮಗೊಂಡ ವ್ಯಾಜ್ಯಗಳು = ೧೦೨೩೯೬ × ೧೦೦ / ೧೦೬೭೮೦

= ೯೫%

೨) ಬೆಳಗಾವಿ ಜಿಲ್ಲಾ ವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳು = ೫೬೯೯

ತೀರ್ಮಗೊಂಡ ವ್ಯಾಜ್ಯಗಳು = ೫೮೭೫

ಶೇಕಡಾವಾರು ತೀರ್ಮಗೊಂಡ ವ್ಯಾಜ್ಯಗಳು = ೫೬೯೯ × ೧೦೦ / ೫೮೭೫

= ೯೭%

೩) ೩೧ ಗ್ರಾಹಕರ ವೇದಿಕೆಗಳ ತೀರ್ಮಗೊಂಡ ವ್ಯಾಜಗಳು ೯೫%

ಬೆಳಗಾವಿ ಜಿಲ್ಲಾವೇದಿಕೆಯ ತೀರ್ಮಗೊಂಡ ವ್ಯಾಜ್ಯಗಳು ೯೭%

೪) ಬೆಳಗಾವಿ ಗ್ರಾಹಕ ವೇದಿಕೆಯ ತೀರ್ಮಗೊಂಡ ವ್ಯಾಜ್ಯಗಳ ಶೇಕಡಾವಾರಕ್ಕೂ ಹಾಗೂ ಕರ್ನಾಟಕ ರಾಜ್ಯದ ಎಲ್ಲ ೩೧ ಗ್ರಾಹಕವೇದಿಕೆಗಳಲ್ಲಿ ಇತ್ಯರ್ಥಗೊಂಡ ವ್ಯಾಜ್ಯಗಳ ಶೇಕಡಾವಾರಕ್ಕೂ ತುಲನೆ ಮಾಡಿದರೆ, ಬೆಳಗಾವಿ ಗ್ರಾಹಕ ವೇದಿಕೆ ತುಲನಾತ್ಮಕವಾಗಿ ವ್ಯಾಜ್ಯಗಳನ್ನು ಪರಿಹರಿಸುವಲ್ಲಿ ಮುಂದಿದೆ.

**ಕೋಷ್ಟಕ ೪.೨**

**ತೀರ್ಮಗೊಂಡ ವ್ಯಾಜ್ಯಗಳು (ಗ್ರಾಹಕರ ಪರ ಹಾಗು ವಿರುದ್ದ)**

| ವಿವರ ೧೯೮೯ ರಿಂದ ೩೧.೧೨.೨೦೦೯ ವರೆಗೆ | ಗ್ರಾಹಕರ ಪರವಾಗಿ ತೀರ್ಮ | ಶೇಕಡಾ ವಾರು | ಗ್ರಾಹಕರ ವಿರುದ್ದ ತೀರ್ಮ | ಶೇಕಡಾ ವಾರು | ಒಟ್ಟು |
|---|---|---|---|---|---|
| | ೩೮೩೨ | ೬೪.೫% | ೨೧೦೬ | ೩೫.೫% | ೫೯೩೮ |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ.**

ಕೋಷ್ಟಕ ೪.೨ರ ಅನುಸಾರ ೧೯೮೯ ರಿಂದ ೨೦೦೯ ರ ವರೆಗಿನ ದಾಖಲಾಗಿ ಪರಿಹಾರ ಸಿಕ್ಕ ವ್ಯಾಜ್ಯಗಳಲ್ಲಿ ೬೪.೫% ಗ್ರಾಹಕರ ಪರವಾಗಿ ಬೆಳಗಾವಿ ಜಿಲ್ಲಾವೇದಿಕೆ ತೀರ್ಪು ನೀಡಿದೆ. ಮತ್ತು ೩೫.೫% ಗ್ರಾಹಕರ ವಿರುದ್ಧವಾಗಿ ತೀರ್ಪು ಕೊಟ್ಟಿದೆ. ಇದರಿಂದ ಬೆಳಗಾವಿ ಜಿಲ್ಲಾ ವೇದಿಕೆಯು ಗ್ರಾಹಕರ ಅಳಲನ್ನು ಕುಲಂಕಷವಾಗಿ ಪರಿಶೀಲಿಸಿ ವ್ಯಾಜ್ಯಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿದೆ ಎಂದು ತಿಳಿಯುತ್ತದೆ.

**ಕೋಷ್ಟಕ ೪.೩**

**೧೯೮೯ ರಿಂದ ೨೦೦೯ ರ ವರೆಗೆ ಪರಿಹಾರ ಪಡೆದ ವ್ಯಾಜ್ಯಗಳ ವಿವರ**

| ವಿವರ ೧೯೮೯ ರಿಂದ ೩೧.೧೨.೨೦೦೯ ವರೆಗೆ | ತಾಂತ್ರಿಕ ವ್ಯಾಜ್ಯಗಳ ಪರಿಹಾರ | ಶೇಕಡಾವಾರು | ಸಾಮಾನ್ಯ ವ್ಯಾಜ್ಯಗಳ ಪರಿಹಾರ | ಶೇಕಡಾವಾರು | ಒಟ್ಟು |
|---|---|---|---|---|---|
| | ೧೭೧ | ೨.೮೮% | ೫೭೬೭ | ೯೭.೧೨% | ೫೯೩೮ |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

೨೦೦೯ ರ ವರೆಗೆ ಪರಿಹಾರ ಪಡೆದ ವ್ಯಾಜ್ಯಗಳಲ್ಲಿ ಕೇವಲ ೧೭೧ ವ್ಯಾಜ್ಯಗಳು (೨.೮೮%) ತಾಂತ್ರಿಕ ವ್ಯಾಜ್ಯಗಳ ಅಡಿಯಲ್ಲಿ ಪರಿಹಾರ ಕಂಡುಕೊಂಡಿವೆ. ಬೆಳಗಾವಿ ಗ್ರಾಹಕ ವೇದಿಕೆಯು ವ್ಯಾಜ್ಯಗಳನ್ನು ಕುಲಂಕಷವಾಗಿ ಪರಿಶೀಲಿಸಿ ವಸ್ತುಗಳನ್ನು ಅವಶ್ಯವಿದ್ದರೆ ಮಾತ್ರ ಪ್ರಯೋಗ ಶಾಲೆಗೆ ಕಳುಹಿಸುವ ಏರ್ಪಾಡನ್ನು ಮಾಡುತ್ತದೆ. ಪ್ರತಿಶತ ೯೭ ವ್ಯಾಜ್ಯಗಳನ್ನು ಪರಿಹಾರ ಕೋರುವ ಅಥವಾ ಎದುರು ಪಕ್ಷಕ್ಕಾಗಲಿ ನಿರೀಕ್ಷಿಸಲು ಹಚ್ಚದೆ ವ್ಯಾಜ್ಯವನ್ನು ಪರಿಹರಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿದೆ.

**ಕೋಷ್ಟಕ ೪.೪**

**೧೯೮೯ ರಿಂದ ೨೦೦೯ ರ ವರೆಗೆ ವ್ಯಾಜ್ಯ ಪರಿಹಾರಕ್ಕೆ ತೆಗೆದುಕೊಂಡ ಅವಧಿ**

| ವ್ಯಾಜ್ಯ ಪರಿಹರಿಸಲು ತೆಗೆದುಕೊಂಡ ಅವಧಿ | ಪರಿಹಾರಗೊಂಡ ವ್ಯಾಜ್ಯಗಳು | ಶೇಕಡಾವಾರು |
|---|---|---|
| ೯೦ ದಿನಗಳೊಳಗಾಗಿ | ೨೬೯೨ | ೪೪% |
| ೧೫೦ ದಿನಗಳೊಳಗಾಗಿ | ೯೮೮ | ೧೬% |
| ೧೫೦ ದಿನಗಳಿಗಿಂತ ಹೆಚ್ಚು | ೨೪೨೯ | ೪೦% |
| ಒಟ್ಟು | ೬೧೦೯ | ೧೦೦% |

**ಮೂಲ : ಬೆಳಗಾವಿ ಗ್ರಾಹಕವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ೪.೪ ರ ಅನುಸಾರ ೧೯೮೯ ರಿಂದ ೨೦೦೯ ರವರೆಗೆ ಇಪ್ಪತ್ತು ವರ್ಷದಲ್ಲಿ ಜಿಲ್ಲಾವೇದಿಕೆ ದಾಖಲು ಮಾಡಿಕೊಂಡು ಪರಿಹಾರ ನೀಡಿದ ವ್ಯಾಜ್ಯಗಳಲ್ಲಿ ಶೇಕಡಾ ೪೪% ರಷ್ಟು ೯೦ ದಿನಗಳೊಳಗೆ ವ್ಯಾಜ್ಯಗಳನ್ನು ಪರಿಹರಿಸಿವೆ. ಹಾಗೆಯೇ ೧೫೦ ದಿನಗಳೊಳಗಾಗಿ ೧೬% ವ್ಯಾಜ್ಯಗಳಿಗೆ ಪರಿಹಾರ ದೊರೆತಿದೆ. ೧೫೦ ದಿನಗಳಿಗಿಂತ ಹೆಚ್ಚಿನ ಅವಧಿಯನ್ನು ತೆಗೆದುಕೊಂಡು ೪೦% ರಷ್ಟು ವ್ಯಾಜ್ಯಗಳು ಪರಿಹಾರ ಕಂಡುಕೊಂಡಿವೆ. ಬೆಳಗಾವಿ ಗ್ರಾಹಕ ವೇದಿಕೆಯು ತನ್ನ ಕಾರ್ಯ ವಿಧಾನವನ್ನು ಸಾಧ್ಯವಾದಷ್ಟು ತ್ವರಿತಗತಿಯಲ್ಲಿ ಮಾಡುತ್ತ ವ್ಯಾಜ್ಯಗಳನ್ನು ಪರಿಹರಿಸಬೇಕು.

**ಕೋಷ್ಟಕ ೪.೫**

**೧೯೮೯ ರಿಂದ ೨೦೦೯ ರ ವರೆಗೆ ಇತ್ಯರ್ಥವಾಗದ ವ್ಯಾಜ್ಯಗಳ ವಿವರ**

| ಇತ್ಯರ್ಥವಾಗದ ವ್ಯಾಜ್ಯಗಳ ಅವಧಿ | ಇತ್ಯರ್ಥವಾಗದ ವ್ಯಾಜ್ಯಗಳು | ಶೇಕಡಾವಾರು |
|---|---|---|
| ೯೦ ದಿನಗಳೊಳಗೆ | ೧೭೩ | ೬೪% |
| ೯೦ ದಿನದಿಂದ ೬ ತಿಂಗಳು | ೪೦ | ೧೫% |
| ೬ ತಿಂಗಳಿಂದ ಒಂದು ವರ್ಷ | ೫೮ | ೨೧% |
| ೧ ವರ್ಷದಿಂದ ೨ ವರ್ಷ | ೦೧ | – |
| ೨ ವರ್ಷ ಮೇಲ್ಪಟ್ಟು | – | – |
| ಒಟ್ಟು | ೨೭೨ | ೧೦೦% |

**ಮೂಲ : ಬೆಳಗಾವಿ ಗ್ರಾಹಕವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ನಂ ೪.೫ ರ ಅನುಸಾರ ಹಲವು ಕಾರಣಗಳಿಂದ ಬೆಳಗಾವಿ ಜಿಲ್ಲಾ ವೇದಿಕೆಯಲ್ಲಿ ಇತ್ಯರ್ಥವಾಗದೆ ಉಳಿದ ವ್ಯಾಜ್ಯಗಳನ್ನು ತ್ವರಿತ ಗತಿಯಲ್ಲಿ ಇತ್ಯರ್ಥಗೊಳಿಸಲು ಕೈಕೊಂಡ ಕಾರ್ಯದಿಂದ ೬೪% ರಷ್ಟು ವ್ಯಾಜ್ಯಗಳನ್ನು ೯೦ ದಿನಗಳೊಳಗೆ ಇತ್ಯರ್ಥಗೊಳಿಸಲಾಗಿದೆ. ೧೫%ರಷ್ಟು ವ್ಯಾಜ್ಯಗಳನ್ನು ೯೦ ದಿನಗಳಿಂದ ಆರು ತಿಂಗಳಲ್ಲಿ ಪರಿಹಾರ ನೀಡಿದೆ. ೨೧% ರಷ್ಟು ವ್ಯಾಜ್ಯಗಳನ್ನು ಆರು ತಿಂಗಳಿನಿಂದ ಒಂದು ವರ್ಷದಲ್ಲಿ ಪರಿಹರಿಸಲಾಗಿದೆ. ಬೆಳಗಾವಿ ಜಿಲ್ಲಾ ವೇದಿಕೆಯು ತನ್ನ ಕಾರ್ಯವಿಧಾನದಲ್ಲಿ ತನ್ನ ವ್ಯಾಪ್ತಿಗೆ ಹೊಂದುವಂತೆ ವ್ಯಾಜ್ಯಗಳನ್ನು ಪರಿಹರಿಸುತ್ತಿದೆ. ಇಲ್ಲಿಯವರೆಗೆ ಒಂದೇ ಒಂದು ವ್ಯಾಜ್ಯ ಕಾರಣಾಂತರಗಳಿಂದ ಎರಡು ವರ್ಷದವರೆಗೆ ಇತ್ಯರ್ಥವಾಗದೆ ಉಳಿದ ನಂತರ ಪರಿಹಾರ ಕಂಡುಕೊಂಡಿದೆ. ಆದ್ದರಿಂದ ಬೆಳಗಾವಿ ಜಿಲ್ಲಾ ವೇದಿಕೆಯು ತನ್ನ ಕಾರ್ಯ ವಿಧಾನದಲ್ಲಿ ತನ್ನ ವ್ಯಾಪ್ತಿಗೆ ಹೊಂದುವಂತೆ ವ್ಯಾಜ್ಯಗಳನ್ನು ಪರಿಹರಿಸುತ್ತಾ ಗ್ರಾಹಕ ಸ್ನೇಹಿಯಾಗಿ ಹೊರಹೊಮ್ಮಿದೆ ಎಂಬ ಅಂಶ ತಿಳಿದುಬರುತ್ತದೆ.

## ಕೋಷ್ಟಕ ೪.೬

### ೧೯೮೯ ರಿಂದ ೨೦೦೯ ರ ವರೆಗೆ ದಾಖಲಾದ ವ್ಯಾಜ್ಯಗಳ ವಿವರ.

| ಅ.ನಂ | ಅವಧಿ | ದಾಖಲಾದ ವ್ಯಾಜ್ಯಗಳು | ಶೇಕಡಾವಾರು |
|---|---|---|---|
| ೧ | ೧೯೮೯ | ೮ | ೦.೧೨% |
| | ೧೯೯೦ | ೧೮೦ | ೨.೮೨% |
| | ೧೯೯೧ | ೨೮೭ | ೪.೪೯% |
| | ೧೯೯೨ | ೨೭೦ | ೪.೨೩% |
| | ೧೯೯೩ | ೪೫೯ | ೭.೧೯% |
| | ೧೯೯೪ | ೨೬೧ | ೭.೨೨% |
| | **ಒಟ್ಟು** | **೧೪೬೫** | **೧೨.೨೯%** |
| ೨ | ೧೯೯೫ | ೨೫೭ | ೪.೦೨% |
| | ೧೯೯೬ | ೨೮೨ | ೪.೪೨% |
| | ೧೯೯೭ | ೩೫೨ | ೫.೫೨% |
| | ೧೯೯೮ | ೨೫೩ | ೭.೦೯% |
| | ೧೯೯೯ | ೨೨೪ | ೨೧.೪% |
| | **ಒಟ್ಟು** | **೧೩೬೮** | **೬.೮೦%** |
| ೩ | ೨೦೦೦ | ೩೬೩ | ೫.೬೮% |
| | ೨೦೦೧ | ೩೩೧ | ೫.೧೮% |
| | ೨೦೦೨ | ೩೦೨ | ೪.೭೩% |
| | ೨೦೦೩ | ೨೪೯ | ೩.೯೦% |
| | ೨೦೦೪ | ೨೩೯ | ೩.೭೫% |
| | **ಒಟ್ಟು** | **೧೪೮೪** | **೨೩.೨೪%** |
| ೪ | ೨೦೦೫ | ೩೦೭ | ೪.೩೭% |

| | | | |
|---|---|---|---|
| | ೨೦೦೬ | ೨೭೯ | ೪.೩೭% |
| | ೨೦೦೭ | ೩೬೨ | ೫.೬೭% |
| | ೨೦೦೮ | ೫೦೬ | ೭.೯೨% |
| | ೨೦೦೯ | ೬೧೦ | ೯.೫೫% |
| | **ಒಟ್ಟು** | **೨೦೬೪** | **೩೨.೩೪%** |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ೪.೬ರ ಪ್ರಕಾರ ಬೆಳಗಾವಿ ಜಿಲ್ಲಾವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳನ್ನು ಜಿಲ್ಲಾವೇದಿಕೆ ಸ್ಥಾಪಿತವಾದ ವರ್ಷವನ್ನು (೧೯೮೯) ಹೊರತುಪಡಿಸಿ ಉಳಿದೆಲ್ಲ ವರ್ಷಗಳ ಅವಧಿಯಲ್ಲಿಯ ದಾಖಲಾತಿಯಲ್ಲಿ ಏರಿಕೆ ಇದೆ.

೧. ೧೯೮೯ ರಿಂದ ೧೯೯೪ ರ ವರೆಗೆ ೧೪೬೫ ವ್ಯಾಜ್ಯಗಳು ದಾಖಲಾಗಿವೆ. (೧೨.೨೯%)

೨. ೧೯೯೫ ರಿಂದ ೧೯೯೯ ರ ವರೆಗೆ ೧೩೬೮ ವ್ಯಾಜ್ಯಗಳು ದಾಖಲಾಗಿವೆ. (೨೧.೪%)

೩. ೨೦೦೦ ರಿಂದ ೨೦೦೪ ರ ವರೆಗೆ ೧೪೮೪ ವ್ಯಾಜ್ಯಗಳು ದಾಖಲಾಗಿವೆ. (೨೩.೨೪%)

೪. ೨೦೦೫ ರಿಂದ ೨೦೦೯ ರ ವರೆಗೆ ೨೦೬೪ ವ್ಯಾಜ್ಯಗಳು ದಾಖಲಾಗಿವೆ. (೩೨.೩೪%)

**ಕೋಷ್ಟಕ ೪.೭**

**೧೯೮೯ ರಿಂದ ೨೦೦೯ ರ ವರೆಗೆ ವ್ಯಾಜ್ಯಗಳ ದಾಖಲಾತಿ ಇತ್ಯರ್ಥ ಹಾಗ ಇತ್ಯರ್ಥವಾಗದ ವ್ಯಾಜ್ಯಗಳ ವಿವರ**

| ಅವಧಿ | ವ್ಯಾಜ್ಯಗಳ ದಾಖಲಾತಿ | ಇತ್ಯರ್ಥಗೊಂಡ ವ್ಯಾಜ್ಯಗಳು | ಇತ್ಯರ್ಥವಾಗದೆ ಉಳಿದ ವ್ಯಾಜ್ಯಗಳು |
|---|---|---|---|
| ೧೯೮೯ | ೮ | ೮ | – |
| ೧೯೯೦ | ೧೮೦ | ೧೮೦ | – |
| ೧೯೯೧ | ೨೮೭ | ೨೮೭ | – |
| ೧೯೯೨ | ೨೭೦ | ೨೭೦ | – |
| ೧೯೯೩ | ೪೫೯ | ೪೫೯ | – |
| ೧೯೯೪ | ೨೬೧ | ೨೬೧ | – |
| ೧೯೯೫ | ೨೫೭ | ೨೫೭ | – |

| | | | |
|---|---|---|---|
| ೧೯೯೬ | ೨೮೨ | ೨೮೨ | – |
| ೧೯೯೭ | ೩೫೨ | ೩೫೨ | – |
| ೧೯೯೮ | ೨೫೩ | ೨೫೩ | – |
| ೧೯೯೯ | ೨೨೪ | ೨೨೪ | – |
| ೨೦೦೦ | ೩೬೩ | ೩೬೩ | – |
| ೨೦೦೧ | ೩೩೧ | ೩೩೧ | – |
| ೨೦೦೨ | ೩೦೨ | ೩೦೨ | – |
| ೨೦೦೩ | ೨೪೯ | ೨೪೯ | – |
| ೨೦೦೪ | ೨೩೯ | ೨೩೯ | – |
| ೨೦೦೫ | ೩೦೭ | ೩೦೭ | – |
| ೨೦೦೬ | ೨೭೯ | ೨೭೯ | – |
| ೨೦೦೭ | ೩೬೨ | ೩೫೧ | ೧೧ |
| ೨೦೦೮ | ೫೦೬ | ೨೪೫ | ೨೬೧ |
| ೨೦೦೯ | ೬೧೦ | ೬೧೦ | – |
| **ಒಟ್ಟು** | **೬೩೮೧** | **೬೧೧೯** | **೨೭೨** |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ೪.೭ ರಲ್ಲಿ ಬೆಳಗಾವಿ ಜಿಲ್ಲಾ ವೇದಿಕೆಯು ಪ್ರಾರಂಭವಾದ ವರ್ಷದಿಂದ ೨೦೦೯ ರ ವರೆಗಿನ ವ್ಯಾಜ್ಯಗಳ ದಾಖಲಾತಿ, ಆ ವರ್ಷಗಳಲ್ಲಿ ಅವುಗಳ ಇತ್ಯರ್ಥ ಹಾಗೂ ಇತ್ಯರ್ಥವಾಗದೇ ಉಳಿದ ವ್ಯಾಜ್ಯಗಳ ಮಾಹಿತಿಯನ್ನು ಕೊಟ್ಟಿದೆ. ಈ ಕೋಷ್ಟಕದ ಆಧಾರದ ಮೇಲೆ ಬೆಳಗಾವಿ ಜಿಲ್ಲಾ ವೇದಿಕೆ ವ್ಯಾಜ್ಯಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಉತ್ತಮ ಕಾರ್ಯವನ್ನು ನಿರ್ವಹಿಸುತ್ತಿದೆ ಎನ್ನಬಹುದು. ಸ್ಥಾಪಿತವಾದ ವರ್ಷ ೧೯೮೯ ರಿಂದ ೨೦೦೬ ರ ವರೆಗೆ ಯಾವುದೇ ವ್ಯಾಜ್ಯಗಳು ಇತ್ಯರ್ಥವಾಗದೆ ಹಾಗೆ ಉಳಿದಿಲ್ಲ. ಆದರೆ ೨೦೦೭ನೇ ವರ್ಷದಲ್ಲಿ ೩೬೨ ಗ್ರಾಹಕ ವ್ಯಾಜ್ಯಗಳಲ್ಲಿ ೩೫೧ ವ್ಯಾಜ್ಯಗಳು ಇತ್ಯರ್ಥಗೊಂಡರೆ ೧೧ ವ್ಯಾಜ್ಯಗಳು ಕಾಯ್ದಿರಿಸುವ ಪಟ್ಟಿಯಲ್ಲಿವೆ. ೨೦೦೮ ನೇ ಸಾಲಿನಲ್ಲಿ ಮಾತ್ರ ಬೆಳಗಾವಿ ಗ್ರಾಹಕ ವೇದಿಕೆಯು ವ್ಯಾಜ್ಯಗಳನ್ನು ಪರಿಹರಿಸುವ ಕಾರ್ಯದಲ್ಲಿ ಹಿನ್ನೆಡೆಯನ್ನು ಕಂಡಿದೆ. ವೇದಿಕೆಯನ್ನು ಈ ಕುರಿತು ವಿಚಾರಿಸಲಾಗಿ ವೇದಿಕೆ ಅನುಭವಿಸುತ್ತಿರುವ

ಸಮಸ್ಯೆಗಳನ್ನು ಅಲ್ಲಿನ ಸಿಬ್ಬಂದಿ ವರ್ಗದವರು ವಿವರಿಸಿದರು. ೨೦೦೮ ರಲ್ಲಿ ವೇದಿಕೆ ೫೦೬ ವ್ಯಾಜ್ಯಗಳ ದಾಖಲಾತಿಯಲ್ಲಿ ಕೇವಲ ೨೪೫ ವ್ಯಾಜ್ಯಗಳು ಪರಿಹಾರ ಕಂಡುಕೊಂಡು ಶೇಕಡಾ ೪೮.೪೧% ರಷ್ಟು ಕಾರ್ಯ ಸಫಲತೆಯನ್ನು ಕಂಡುಕೊಂಡಿದೆ ಮತ್ತು ೨೬೧ ವ್ಯಾಜ್ಯಗಳನ್ನು ಕಾಯ್ದಿರಿಸಲಾಗಿದೆ ಅಂದರೆ ಇತ್ಯಾರ್ಥವಾಗದ ವ್ಯಾಜ್ಯಗಳು ೫೨%. ೨೦೦೯ ರಲ್ಲಿ ದಾಖಲಾದ ಎಲ್ಲ ೬೧೦ ವ್ಯಾಜ್ಯಗಳು ಇತ್ಯರ್ಥಗೊಂಡಿವೆ. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಪ್ರಮುಖ ಉದ್ದೇಶವಾದ ವ್ಯಾಜ್ಯಗಳ ತ್ವರಿತಗತಿಯ ವಿಲೇವಾರಿಯಲ್ಲಿ ಆಗುತ್ತಿರುವ ವಿಳಂಬಕ್ಕೆ ಕಾರಣವಾಗುವ ಸಮಸ್ಯೆಗಳನ್ನು ಜಿಲ್ಲಾ ವೇದಿಕೆ ಪರಿಹರಿಸುವ ನಿಟ್ಟಿನಲ್ಲಿ ತೊಡಗಬೇಕಾಗಿದೆ.

**ಕೋಷ್ಟಕ ೪.೮**

**೧೫.೩.೨೦೦೩ ರಿಂದ ೩೧.೧೨.೨೦೦೯ ರ ವರೆಗಿನ ವ್ಯಾಜ್ಯಗಳ ವಿವರ**

| ವಿವರ | ವ್ಯಾಜ್ಯಗಳ ದಾಖಲಾತಿ | ಇತ್ಯರ್ಥಗೊಂಡ | ಶೇಕಡಾವಾರು |
|---|---|---|---|
| ೧೫.೩.೨೦೦೩ ರಿಂದ ೩೧.೧೨.೨೦೦೯ | **೧೯೧೫** | **೪೦೭** | **೨೬.೪೭%** |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರಲ್ಲಿ ಜಾರಿಗೆ ಬಂದಿತು. ನಂತರ ಎರಡು ಸಲ ಅದರ ತಿದ್ದುಪಡಿ ಮಾಡಲಾಯಿತು. ೧೯೯೩ ರಲ್ಲಿ ಮತ್ತು ೨೦೦೨ ರ ತಿದ್ದುಪಡಿ ಕಾಯ್ದೆ ಜಾರಿಗೆ ಬಂದಿದ್ದು ೧೫.೦೩.೨೦೦೩ ರಲ್ಲಿ ತಿದ್ದುಪಡಿ ಕಾನೂನಿನ ಪ್ರಕಾರ ವ್ಯಾಜ್ಯ ದಾಖಲಾದ ೨೧ ದಿನಗಳೊಳಗೆ ಗ್ರಾಹಕ ವೇದಿಕೆ ಇತ್ಯರ್ಥಗೊಳಿಸಬೇಕು. ವಿರುದ್ಧ ಪಕ್ಷದವರಿಗೆ ೨೧ ದಿನಗಳೊಳಗೆ ವೇದಿಕೆಗೆ ತಮ್ಮ ಹೇಳಿಕೆಯನ್ನು ಪ್ರಸ್ತುತಪಡಿಸಲು, ವ್ಯಾಜ್ಯದ ಒಂದು ಪ್ರತಿಯನ್ನು ವೇದಿಕೆ ಕಳುಹಿಸಬೇಕು. ಕೋಷ್ಟಕ ೪.೮ ರಲ್ಲಿ ಬೆಳಗಾವಿ ಗ್ರಾಹಕ ವೇದಿಕೆಯ ಮಾಹಿತಿ ನೀಡಲಾಗಿದೆ. ೨೦೦೨ ರ ತಿದ್ದುಪಡಿ ಕಾನೂನಿನ ಪ್ರಕಾರ ಬೆಳಗಾವಿ ಗ್ರಾಹಕ ವೇದಿಕೆ ದಾಖಲು ಮಾಡಿಕೊಂಡ (೧೫.೩.೨೦೦೩ ರಿಂದ ೩೧.೧೨.೨೦೦೯ ರ ವರೆಗೆ) ವ್ಯಾಜ್ಯಗಳು ೧೯೧೫ ಅವುಗಳಲ್ಲಿ ೨೧ ದಿನಗಳಲ್ಲಿ ಇತ್ಯರ್ಥ ಮಾಡಿದ ವ್ಯಾಜ್ಯಗಳು ೪೦೭.

**ಕೋಷ್ಟಕ ೪.೯**

**೧೯೮೯ ರಿಂದ ೨೦೦೯ ರವರೆಗೆ ಕಲಂ ೨೫ ರ ಅಡಿಯಲ್ಲಿನ ವ್ಯಾಜ್ಯಗಳ ವಿವರ**

| ವಿವರ | ದಾಖಲಾದ ವ್ಯಾಜ್ಯಗಳು | ಇತ್ಯರ್ಥವಾದ ವ್ಯಾಜ್ಯಗಳು | ಇತ್ಯರ್ಥವಾಗದ ವ್ಯಾಜ್ಯಗಳು |
|---|---|---|---|
| ದಾಖಲಾದ ಅರ್ಜಿ ೨೦೦೩ ರಿಂದ ೩೧.೧೨.೨೦೦೯ ರ ವರೆಗೆ | ೭೭ | ೭೩ | ೪ |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಮಾಹಿತಿ**

ಕೋಷ್ಟಕ ೪.೯ ರಲ್ಲಿ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ಕಾನೂನಿನ ಪರಿಚ್ಛೇದ ೨೫ ರ ಅನುಸಾರ ಬೆಳಗಾವಿ ಗ್ರಾಹಕ ವೇದಿಕೆ, ತನ್ನ ವಿಷೇಶ ಹಕ್ಕನ್ನು ಚಲಾಯಿಸಿ ಮಧ್ಯಂತರ ಆದೇಶವನ್ನು ಕೊಟ್ಟಿದೆ. ವ್ಯಾಜ್ಯದಲ್ಲಿರುವ ಪರಿಹಾರಕ್ಕಾಗಿ ಗ್ರಾಹಕ ವೇದಿಕೆ, ಎದುರು ಪಕ್ಷದವರ ಆಸ್ತಿಯನ್ನು ಮುಟ್ಟುಗೋಲು ಹಾಕುತ್ತದೆ. ಈ ವಿಶೇಷ ಹಕ್ಕನ್ನು "ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ತಿದ್ದುಪಡಿ ಕಾಯ್ದೆ ೧೯೯೩ ಹಾಗೂ ೨೦೦೨ ರಿಂದ ಜಾರಿ ಬಂದಿದೆ. ಪರಿಚ್ಛೇದ ೨೫ರ ಅನುಸಾರವಾಗಿ ಗ್ರಾಹಕ ವೇದಿಕೆ ಪ್ರಾರಂಭವಾದ ವರ್ಷದಿಂದ ೩೧.೧೨.೨೦೦೯ ರ ವರೆಗೆ ೭೭ ವ್ಯಾಜ್ಯಗಳಿಗೆ ಅರ್ಜಿ ಜಾರಿಮಾಡಿದೆ. ಅವುಗಳಲ್ಲಿ ೭೩ ವ್ಯಾಜ್ಯಗಳು ಇತ್ಯರ್ಥಗೊಂಡು ಪರಿಹಾರವಾಗಿ, ಉಳಿದ ವ್ಯಾಜ್ಯಗಳು ಕೇವಲ ೪. ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯ ಪರಿಹರಿಸುವ ನಿಟ್ಟಿನಲ್ಲಿ ಈ ವಿಷೇಶವಾದ ಕಲಂನ್ನು ಉಪಯೋಗ ಮಾಡುತ್ತಿದೆ. ಇದರಿಂದ ವ್ಯಾಜ್ಯಗಳು ಸರಿಯಾಗಿ ಇತ್ಯರ್ಥಗೊಳ್ಳುತ್ತಿವೆ.

**ಕೋಷ್ಟಕ ೪.೧೦**

**೨೦೦೩ ರಿಂದ ೨೦೦೯ ರವರೆಗಿನ ಕಲಂ ೨೭ ರ ಅಡಿಯಲ್ಲಿನ ವ್ಯಾಜಗಳ ವಿವರ**

| ವಿವರ | ದಾಖಲಾದ ವ್ಯಾಜ್ಯಗಳು | ಇತ್ಯರ್ಥವಾದ ವ್ಯಾಜ್ಯಗಳ | ಇತ್ಯರ್ಥವಾಗದ ವ್ಯಾಜ್ಯಗಳು |
|---|---|---|---|
| ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲಂ ೨೭ ರೆ ಅನುಸಾರ ೨೦೦೩ ರಿಂದ ೩೧.೧೨.೨೦೦೯ ರವರೆಗೆ ಅರ್ಜಿ ಜಾರಿ | ೧೧೯೬ | ೧೦೦೦ | ೧೯೬ |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲಂ ೨೭ ರ ಅನುಸಾರ ಎದುರು ಪಕ್ಷದವರು ಗ್ರಾಹಕ ವೇದಿಕೆ ಕೊಟ್ಟ ಆದೇಶನ್ನು ಮನ್ನಿಸದೆ ನಿರ್ಲಕ್ಷಿಸಿದರೆ, ಗ್ರಾಹಕ ವೇದಿಕೆ ಮೂರು ವರ್ಷ ಜೈಲು ಶಿಕ್ಷೆ ಅಥವಾ ರೂ ೧೦,೦೦೦ ದಂಡ ಅಥವಾ ಎರಡನ್ನು ವಿಧಿಸಬಹುದು. ಬೆಳಗಾವಿ ಗ್ರಾಹಕ ವೇದಿಕೆಯು ಇಂಥಹ ವ್ಯಾಜ್ಯಗಳನ್ನು ಕೈಗೆತ್ತಿಕೊಳ್ಳುತ್ತದೆ. ಗ್ರಾಹಕ ವೇದಿಕೆ ಸ್ಥಾಪಿತವಾದ ವರ್ಷ ೨೦೦೩ ರಿಂದ ೩೧.೧೨.೨೦೦೮ ರ ವರೆಗೆ ೧೧೯೬ ಅರ್ಜಿ ಜಾರಿ ಮಾಡಿದೆ ಅವುಗಳಲ್ಲಿ ೧,೦೦೦ ಅರ್ಜಿಗಳು ಇತ್ಯರ್ಥಗೊಂಡು, ಇತ್ಯರ್ಥವಾಗದೆ ಇರುವ ಅರ್ಜಿಗಳು ಕೇವಲ ೧೯೬. ಮೇಲಿನ ಮಾಹಿತಿಯಿಂದ ತಿಳಿಯುವುದು ಏನೆಂದರೆ ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಲಂ ೨೭ನ್ನು ಉಪಯೋಗಿಸಿಕೊಂಡು ದಂಡ ವ್ಯವಹರಣಾ ಕಾಯ್ದೆಯನ್ನು ಅನುಸರಿಸುತ್ತಿರುವುದು ಸ್ಪಷ್ಟವಾಗುತ್ತದೆ.

## ಕೊಷ್ಟಕ ೪.೧೧

### ಮಾರ್ಚ, ೧೫, ೨೦೦೩ ರಿಂದ ೨೦೦೯ ರ ವರೆಗೆ ಕಲಂ ೨೫ ರ ಪ್ರಕಾರ ಜಿಲ್ಲಾಧಿಕಾರಿಗೆ ರವಾನಿಸಿದ, ವ್ಯಾಜ್ಯಗಳ ವಿವರ.

| ವಿವರ | ಜಾರಿ ಅರ್ಜಿ ಪ್ರಮಾಣ ಪತ್ರಗಳು | ಪ್ರಮಾಣ ಪತ್ರಗಳ ಇತ್ಯರ್ಥ | ಇತ್ಯರ್ಥವಾಗದ ಪ್ರಮಾಣ ಪತ್ರಗಳು | ಜಾರಿ ಅರ್ಜಿ ವಜಾ |
|---|---|---|---|---|
| ಕಲಂ ೨೫ ಗ್ರಾಹಕ ಸಂರಕ್ಷಣಾ ಕಾಯ್ದೆಯ ವ್ಯಾಜ್ಯಗಳು ಜಾರಿ ಅರ್ಜಿಯ ಪ್ರಮಾಣ ಪತ್ರ ಜಿಲ್ಲೆಯ ಜಿಲ್ಲಾಧಿಕಾರಿಗೆ ರವಾನೆ | ೫೩ | ೩೧ | ೨೧ | ೧ |

ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ

ಕೋಷ್ಟಕ ೪.೧೧ರಲ್ಲಿ ಬೆಳಗಾವಿ ಗ್ರಾಹಕ ವೇದಿಕೆ ಜಾರಿ ಮಾಡಿದ ಅರ್ಜಿಗಳನ್ನು ಜಿಲ್ಲಾಧಿಕಾರಿ ಇತ್ಯರ್ಥ ಮಾಡಿದ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲಂ ೨೫ ರ ಅಡಿಯಲ್ಲಿ ಬರುವ ವ್ಯಾಜ್ಯಗಳ ವಿವರ ಇದೆ. ಬೆಳಗಾವಿ ಗ್ರಾಹಕ ವೇದಿಕೆ ಬೆಳಗಾವಿ ಜಿಲ್ಲಾಧಿಕಾರಿ ಕೊಟ್ಟು ಕಳಹಿಸಿದ ಕಲಂ ೨೫ ಅಡಿಯಲ್ಲಿ ಬರುವ ವ್ಯಾಜ್ಯಗಳ ಪ್ರಮಾಣ ಪತ್ರಗಳು ೧೫.೩.೧೯೯೩ ರಿಂದ ೩೧.೧೨.೨೦೦೯ ರವರಗೆ ೫೩ ಅವುಗಳಲ್ಲಿ ಜಿಲ್ಲಾಧಿಕಾರಿ ತಮ್ಮ ಒಪ್ಪಿಗೆ ಸೂಚಿಸಿ ಇತ್ಯರ್ಥಗೊಳಿಸಿದ ಉಳಿದ ಅರ್ಜಿಗಳು ೩೧ ಹಾಗೂ ಇತ್ಯರ್ಥವಾಗದೇ ಉಳಿದ ಪ್ರಮಾಣಪತ್ರಗಳು ೨೧ ಹಾಗೂ ವಜಾ ಮಾಡಲ್ಪಟ್ಟ ಅರ್ಜಿ ೧. ಇದರಿಂದ ತಿಳಿದುಬರುವುದೇನೆಂದರೆ, ೫೮.೪೯% ರಷ್ಟು ಅರ್ಜಿಗಳು ಇತ್ಯರ್ಥಗೊಂಡಿವೆ. ಹೀಗಾಗಿ ಬೆಳಗಾವಿ ಗ್ರಾಹಕ ವೇದಿಕೆ ಈ ಒಂದು ನಿಟ್ಟಿನಲ್ಲಿ ಯಶಸ್ಸು ಸಾಧಿಸಿದೆ.

## ಕೋಷ್ಟಕ ೪.೧೨

### ೨೦೦೯ ರ ವರೆಗೆ ಕಲಂ ೨೫ ಹಾಗೂ ೨೭ ರ ಅಡಿಯಲ್ಲಿ ಇತ್ಯರ್ಥವಾಗದ ಅರ್ಜಿಗಳ ವಿವರ

| ಅ.ಸಂ | ವಿವರ | ಇತ್ಯರ್ಥವಾಗದ ಜಾರಿ ಅರ್ಜಿ | ಶೇಕಡಾವಾರು |
|---|---|---|---|
| ೧ | ಇತ್ಯರ್ಥವಾಗದ ಜಾರಿಗೆಯಾದ ಅರ್ಜಿಗಳು ಕಲಂ ೨೫ | ೧೧ | ೫.೫% |
| ೨ | ಇತ್ಯರ್ಥವಾಗದ ಜಾರಿಗೆಯಾದ ಅರ್ಜಿಗಳು ಕಲಂ ೨೭ | ೧೮೯ | ೯೪.೫% |
| | ಒಟ್ಟು | ೨೦೦ | ೧೦೦% |

ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ.

ಕೋಷ್ಟಕ ೪.೧೨ ರ ಪ್ರಕಾರ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಕಲಂ ೨೫ ರ ಅಡಿಯಲ್ಲಿ ಕೇವಲ ೧೧ ವ್ಯಾಜ್ಯಗಳು ಇತ್ಯರ್ಥವಾಗಬೇಕಿದೆ ಆದರೆ ಕಲಂ ೨೭ ರ ಅಡಿಯಲ್ಲಿ ೧೮೯ ವ್ಯಾಜ್ಯಗಳು ಇತ್ಯರ್ಥವಾಗಬೇಕಿದೆ. ಬೆಳಗಾವಿ ಗ್ರಾಹಕ ವೇದಿಕೆ ಆದೇಶ ಪಾಲಿಸದ ಪಕ್ಷಕ್ಕೆ ದಂಡವಿದಿಸಿ ದಂಡ ವ್ಯವಹರಣಾ ಕಾಯ್ದೆಯನ್ನು ಉಪಯೋಗಿಸುವಲ್ಲಿ ಮೀನಮೇಷ ಮಾಡುತ್ತದೆ.

**ಕೊಷ್ಟಕ ೪.೧೩**

**೧೯೮೯ ರಿಂದ ೨೦೦೯ ರವರಗೆ ಇತ್ಯರ್ಥವಾಗದ ವ್ಯಾಜ್ಯಗಳ ಅವಧಿ ವಿವರ.**

| ಅ.ಸಂ | ವಿವರ | ವ್ಯಾಜ್ಯಗಳು | ಶೇಕಡಾವಾರು |
|---|---|---|---|
| ೧ | ಇತ್ಯರ್ಥವಾಗದ ವ್ಯಾಜ್ಯಗಳು ೯೦ ದಿನಗಳವರೆಗೆ | ೧೪೬ | ೭೩% |
| ೨ | ಇತ್ಯರ್ಥವಾಗದ ವ್ಯಾಜ್ಯಗಳು ೯೦ ದಿನದಿಂದ ೧೮೦ ದಿನಗಳು | ೪೦ | ೨೦% |
| ೩ | ಇತ್ಯರ್ಥವಾಗದ ವ್ಯಾಜ್ಯಗಳು ೬ ತಿಂಗಳಿಂದ ೧ ವರ್ಷ | ೦೮ | ೪% |
| ೪ | ಇತ್ಯರ್ಥವಾಗದ ವ್ಯಾಜ್ಯಗಳು ೧ ವರ್ಷದಿಂದ ೨ ವರ್ಷದವರೆಗೆ | ೦೬ | ೩% |
| | **ಒಟ್ಟು** | **೨೦೦** | **೧೦೦%** |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ೪.೧೩ ದ ಪ್ರಕಾರ ೩೧.೧೨.೨೦೦೯ ರವರಗೆ ಅರ್ಜಿ ಜಾರಿ ಮಾಡಿ ಪ್ರಮಾಣ ಪತ್ರ ನೀಡಿದೆ. (ಕಲಂ ೨೫ ಹಾಗೂ ಕಲಂ ೨೭ ರ ಗ್ರಾಹಕ ಸಂರಕ್ಷಣೆ ಅನುಸಾರ) ಒಟ್ಟು ಇತ್ಯರ್ಥವಾಗದ ವ್ಯಾಜ್ಯಗಳು ೨೦೦ ಆಗಿವೆ. ೯೦ ದಿನದವರೆಗೆ ಇತ್ಯರ್ಥವಾಗದ ವ್ಯಾಜ್ಯಗಳು ೭೩%. ೯೦ ದಿನದಿಂದ ೧೮೦ ದಿನ ಇತ್ಯರ್ಥವಾಗದ ವ್ಯಾಜ್ಯಗಳು ೨೦% ಆರು ತಿಂಗಳಿಂದ ೧ ವರ್ಷದವರೆಗೆ ೪% ಹಾಗೂ ೧ ವರ್ಷದಿಂದ ೨ ವರ್ಷದವರೆಗೆ ೩%. ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯಗಳಿಗೆ ಪರಿಹಾರ ಕೊಡಲು ತುಂಬಾ ಶ್ರಮಿಸುತ್ತಿದೆ ಎನ್ನುವುದು ಸ್ಪಷ್ಟವಾಗುತ್ತದೆ.

**ಕೋಷ್ಟಕ ೪.೧೪**

**೨೦೦೯ ರ ವರೆಗೆ ಪ್ರತಿವರ್ಷದ ದಾಖಲಾತಿ ಇತ್ಯರ್ಥ (ಕಲಂ ೨೫ ಮತ್ತು ೨೭)**

| ಅವಧಿ | ದಾಖಲಾದ ವ್ಯಾಜ್ಯಗಳು | ಇತ್ಯರ್ಥವಾದ ವ್ಯಾಜ್ಯಗಳು | ಶೇಕಡಾ ವಾರು | ಇತ್ಯರ್ಥವಾಗದ ವ್ಯಾಜ್ಯಗಳು | ಶೇಕಡಾ ವಾರು |
|---|---|---|---|---|---|
| ೧೯೯೩ ರಿಂದ ಫೆಬ್ರುವರಿ ೨೦೦೩ | ೬೬೪ | ೬೬೩ | ೯೯% | ೧ | ೧% |

| | | | | | |
|---|---|---|---|---|---|
| ಫೆಬ್ರುವರಿ ೨೦೦೩ ರಿಂದ ಡಿ. ೨೦೦೪ | ೫೨ | ೫೨ | ೧೦೦% | - | - |
| ೨೦೦೫ | ೪೫ | ೪೫ | ೧೦೦% | - | - |
| ೨೦೦೬ | ೮೮ | ೮೩ | ೯೪% | ೫ | ೬% |
| ೨೦೦೭ | ೧೦೩ | ೮೫ | ೮೩% | ೧೮ | ೧೯% |
| ೨೦೦೮ | ೧೩೮ | ೧೧೦ | ೮೦% | ೨೮ | ೨೦% |
| ೨೦೦೯ | ೧೮೩ | ೩೫ | ೧೯% | ೧೪೮ | ೮೧% |
| **ಒಟ್ಟು** | **೧೨೭೩** | **೧೦೭೩** | | **೨೦೦** | |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ.**

ಕೋಷ್ಠಕ ೪.೧೪ರಲ್ಲಿ ಗ್ರಾಹಕ ಸಂರಕ್ಷಣಾ ಕಾಯದೆ ೧೯೮೬ ರ ಕಲಂ ೨೫ ಹಾಗೂ ಕಲಂ ೨೭ ರ ಬೆಳಗಾವಿ ಜಿಲ್ಲಾ ಗ್ರಾಹಕರ ವೇದಿಕೆ ದಾಖಲು ಮಾಡಿಕೊಂಡು ಇತ್ಯರ್ಥ ಮಾಡಿದ ವ್ಯಾಜ್ಯಗಳ ವಿವರ ಇದೆ. ಬೆಳಗಾವಿ ಗ್ರಾಹಕ ವೇದಿಕೆ ೧೯೯೩ ವರ್ಷದಿಂದ ಗ್ರಾಹಕ ಸಂರಕ್ಷಣಾ ಕಾಯದೆಯ ತಿದ್ದುಪಡಿಯವರೆಗೆ ೧೫.೦೨.೨೦೦೩ ರ ವರೆಗೆ ೬೬೪ ವ್ಯಾಜ್ಯಗಳನ್ನು ದಾಖಲು ಮಾಡಿಕೊಂಡು ಕೇವಲ ೧ ವ್ಯಾಜ್ಯ ಇತ್ಯರ್ಥವಾಗದ ಸ್ಥಿತಿಯಲ್ಲಿ ಇತ್ತು. ೨೦೦೩ನೇ ಇಸ್ವಿಯಿಂದ ೨೦೦೮ ರ ವರೆಗೆ ಇತ್ಯರ್ಥಗೊಂಡ ವ್ಯಾಜ್ಯಗಳು ೧೦೦%, ೧೦೦% ೯೪% ೮೩% ೮೦% ಇದ್ದು ಗ್ರಾಹಕ ವೇದಿಕೆಯ ಕಾರ್ಯ ಆ ಅವಧಿಗಳಲ್ಲಿ ತುಂಬ ಉತ್ತಮವಾಗಿತ್ತು.ಆದರೆ ೨೦೦೯ ನೇ ಸಾಲಿನಲ್ಲಿ ೧೮೩ ವ್ಯಾಜ್ಯಗಳನ್ನು ದಾಖಲು ಮಾಡಿಕೊಂಡು ಕೇವಲ ೩೫ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿವೆ. ಈ ನಿಧಾನಗತಿಯ ಕೆಲಸಕ್ಕೆ ಕಾರಣಗಳು ಇದ್ದರೂ ಗ್ರಾಹಕ ವೇದಿಕೆ ಕಲಂ ೨೫ ರ ಹಾಗೂ ಕಲಂ ೨೭ ರ ಅಡಿಯಲ್ಲಿರುವ ವ್ಯಾಜ್ಯಗಳನ್ನು ತ್ವರಿತಗತಿಯಲ್ಲಿ ನಿರ್ಣಯಿಸಲು ಕ್ರಮ ಕೈಗೊಳ್ಳಬೇಕು.

**ಕೋಷ್ಠಕ ೪.೧೫**

**ಗ್ರಾಹಕ ವೇದಿಕೆಯಲ್ಲಿ ದಾಖಲಾದ ಇತ್ಯರ್ಥಗೊಂಡ ಹಾಗೂ ಇತ್ಯರ್ಥಗೊಳ್ಳದ (೧೯೮೯ ರಿಂದ ೨೦೦೯ರ ರೆಗಿನ ವ್ಯಾಜ್ಯಗಳು).**

| ಅ.ಸಂ | ವಿವರ | ವ್ಯಾಜ್ಯಗಳು ದಾಖಲಾತಿ | ಇತ್ಯರ್ಥ | | ಇತ್ಯರ್ಥವಾಗದ | |
|---|---|---|---|---|---|---|
| | | | ಸಂಖ್ಯೆ | ಶೇಖಡಾವಾರು | ಸಂಖ್ಯೆ | ಶೇಕಡಾವಾರು |
| ೧ | ಬ್ಯಾಂಕು | ೪೩೫ | ೪೧೩ | ೯೫% | ೨೨ | ೫% |
| ೨ | ರೈಲ್ವೆ | ೪೪ | ೪೨ | ೯೬% | ೨ | ೪% |
| ೩ | ವಿಮಾನಯಾನ | ೯ | ೯ | ೧೦೦% | - | - |

| | | | | | | |
|---|---|---|---|---|---|---|
| ೪ | ವಿಮೆ | ೮೭೯ | ೭೭೩ | ೯೨% | ೭೬ | ೮% |
| ೫ | ದೂರ ಸಂಪರ್ಕ | ೨೨೮ | ೨೨೮ | ೧೦೦% | – | – |
| ೬ | ಅಂಚೆ | ೭೪ | ೭೦ | ೯೫% | ೪ | ೫% |
| ೭ | ವಿದ್ಯುತ್ | ೨೬೬ | ೨೬೬ | ೧೦೦% | – | – |
| ೮ | ವೈದ್ಯಕೀಯ ನಿರ್ಲಕ್ಷ | ೧೧೯ | ೧೧೦ | ೯೨% | ೯ | ೮% |
| ೯ | ದೈನಂದಿನ ಸರಕು | ೪೨೫ | ೪೦೬ | ೯೬% | ೧೯ | ೪% |
| ೧೦ | ಶೈಕ್ಷಣಿಕ | ೫೭ | ೫೭ | ೧೦೦% | ೦೫ | ३% |
| ೧೧ | ರಸ್ತೆ ಸಾರಿಗೆ | ೧೪೩ | ೧೩೮ | ೯೭% | ೦೫ | ३% |
| ೧೨ | ಇತರೆ | ೩೬೨೦ | ೩೪೯೬ | ೯೭% | ೧೨೪ | ३% |
| | ಒಟ್ಟು | ೬೨೬೯ | ೬೦೦೮ | | ೨೬೧ | |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ.**

ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಬ್ಯಾಂಕಿನ ದಾಖಲಾದ ವ್ಯಾಜ್ಯಗಳು ೧೯೮೯ ರಿಂದ ೨೦೦೯ ರವರಗೆ ೪೩೫ ಅವುಗಳಲ್ಲಿ ಇತ್ಯರ್ಥಗೊಂಡ ವ್ಯಾಜ್ಯಗಳು ೪೧೩, ೯೫% ರಷ್ಟು ಪುರೋಭಿವೃದ್ದಿಯಾಗಿ ಗ್ರಾಹಕ ವೇದಿಕೆ ಇಲ್ಲಿಯವರೆಗೆ ಕಾರ್ಯವನ್ನು ತೃಪ್ತಿಯಾಗಿ ಮಾಡಿದೆ. ಗ್ರಾಹಕ ವೇದಿಕೆಯು ೧೯೮೯ ರಿಂದ ೨೦೦೯ ವರೆಗೆ ರೇಲ್ವೆ ಇಲಾಖೆಯ ವ್ಯಾಜ್ಯಗಳನ್ನು ೯೬% ರಷ್ಟು ಇತ್ಯರ್ಥಗೊಳಿಸುವಲ್ಲಿ ಯಶಸ್ವಿಯಾಗಿದೆ. ಏರಲಾಯನ್ಸ ಕಂಪನಿಯ ದಾಖಲಾದ ಎಲ್ಲ ೯ ವ್ಯಾಜ್ಯಗಳನ್ನು ವೇದಿಕೆ ಇತ್ಯರ್ಥಗೊಳಿಸಿದೆ. ವಿಮಾ ಕಂಪನಿಯ ದಾಖಲಾದ ಎಲ್ಲ ೯ ವ್ಯಾಜ್ಯಗಳನ್ನು ವೇದಿಕೆ ಇತ್ಯರ್ಥಗೊಳಿಸಿದೆ. ವಿಮಾ ಕಂಪನಿಯ ಬೃಹತ ವ್ಯಾಜ್ಯ ದಾಖಲಾತಿ ಸಂಖ್ಯೆಯಾದ ೮೪೯ ರಲ್ಲಿ ೭೭೩ ವ್ಯಾಜ್ಯಗಳನ್ನು ೧೯೮೯ ರಿಂದ ೨೦೦೮ ರವರೆಗೆ ಇತ್ಯರ್ಥಗೊಳಿಸುವಲ್ಲಿ ವೇದಿಕೆ ಯಶಸ್ಸು ಕಂಡುಕೊಂಡಿದೆ. ೧೯೮೯ ರಿಂದ ೨೦೦೯ ರವರೆಗೆ ದೂರಸಂಪರ್ಕ ಇಲಾಖೆಯ ೨೨೮ ವ್ಯಾಜ್ಯಗಳನ್ನು ನೂರಕ್ಕೆ ನೂರರಷ್ಟು ಪರಿಹರಿಸುವಲ್ಲಿ ಯಶಸ್ವಿಯಾಗಿದೆ. ಈ ಅವಧಿಯಲ್ಲಿಯೇ ದಾಖಲಾದ ಪೋಸ್ಟಲ್ ಡಿಪಾರ್ಟಮೆಂಟಿನ ೭೪ ವ್ಯಾಜ್ಯಗಳಲ್ಲಿ ೭೦ ವ್ಯಾಜ್ಯಗಳು ಇತ್ಯರ್ಥವಾಗಿ ಸುಮಾರು ೯೫% ದಷ್ಟು ಕಾರ್ಯಫಲಿಸಿದೆ. ೧೯೮೯ ರಿಂದ ೨೦೦೯ ರವರೆಗೆ ವಿದ್ಯುತ್‌ಶಕ್ತಿ ನಿಗಮದ ೨೬೬ ದಾಖಲಾದ ವ್ಯಾಜ್ಯಗಳಲ್ಲಿ ಎಲ್ಲ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ ಬೆಳಗಾವಿ ಗ್ರಾಹಕವೇದಿಕೆ ತನ್ನ ಕಾರ್ಯದಲ್ಲಿ ಅದ್ಭುತ ಯಶ ಸಾಧಿಸಿದೆ. ವೈದ್ಯಕೀಯ ನಿರ್ಲಕ್ಷ ಆಧಾರಿತ ಗ್ರೌಂಡಿನ ಅಡಿಯಲ್ಲಿ ದಾಖಲಾದ ೧೧೯ ವ್ಯಾಜ್ಯಗಳಲ್ಲಿ ೧೧೦ ವ್ಯಾಜ್ಯಗಳು ಇತ್ಯರ್ಥವಾಗಿ ಕೇವಲ ೯ ವ್ಯಾಜ್ಯಗಳು ಇತ್ಯರ್ಥವಾಗದೇ ಸುಮಾರು ೯೨% ರಷ್ಟು ಕಾರ್ಯದಲ್ಲಿ ಸಫಲವಾಗಿದೆ. ೧೯೮೯ ರಿಂದ ೨೦೦೯ ರ

ಅವಧಿಯಲ್ಲಿ ಬೆಳಗಾವಿ ಗ್ರಾಹಕ ವೇದಿಕೆ ೪೨೫ ವ್ಯಾಜ್ಯಗಳನ್ನು ಕೌಟಂಬಿಕ ದೋಷಪೂರಿತ ವಸ್ತುಗಳ ಅಡಿಯಲ್ಲಿ ದಾಖಲು ಮಾಡಿಕೊಂಡಿವೆ. ಕೇವಲ ೧೯ ವ್ಯಾಜ್ಯಗಳು ಇತ್ಯರ್ಥವಾಗದೆ ಉಳಿದಿವೆ. ಉಳಿದ ೪೦೬ ವ್ಯಾಜ್ಯಗಳನ್ನು ಪರಿಹರಿಸಲಾಗಿದೆ. ಶೈಕ್ಷಣಿಕ ವ್ಯಾಜ್ಯಗಳನ್ನು ಬೆಳಗಾವಿ ಗ್ರಾಹಕ ವೇದಿಕೆ ದಾಖಲು ಮಾಡಿಕೊಂಡಿದೆ. ೫೭ ವ್ಯಾಜ್ಯಗಳಲ್ಲಿ ಇತ್ಯರ್ಥಗೊಂಡು ೧೦೦% ಕಾರ್ಯದಲ್ಲಿ ಯಶಸ್ವಿಯಾಗಿದೆ.

ರಸ್ತೆ ಸಾರಿಗೆ ಸಂಸ್ಥೆಯ ದಾಖಲಾದ ಒಟ್ಟು ವ್ಯಾಜ್ಯಗಳಲ್ಲಿ ೧೩೮ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ ಕೇವಲ ೫ ವ್ಯಾಜ್ಯಗಳು ಇತ್ಯರ್ಥವಾಗದೆ ಉಳಿದಿವೆ. ಮೇಲಿನ ವಿಭಾಗಗಳಲ್ಲಿ ಬರದೆ ಉಳಿದ ಇತರೆ ವ್ಯಾಜ್ಯಗಳ ದಾಖಲಾಗಿವೆ. ಅದರಲ್ಲಿ ೩೪೯೬ ವ್ಯಾಜ್ಯಗಳು ಪರಿಹಾರ ಕಂಡುಕೊಂಡಿವೆ. ಅಂದರೆ ೯೭% ದಷ್ಟು ವ್ಯಾಜ್ಯಗಳನ್ನು ಇತ್ಯರ್ಥಮಾಡುವ ದೆಸೆಯಲ್ಲಿ ಕಾರ್ಯ ತತ್ಪರವಾಗಿ ೧೯೮೯ ರಿಂದ ೨೦೦೯ ರವರೆಗೆ ಗ್ರಾಹಕ ವೇದಿಕೆ ಎಲ್ಲ ತರಹದ ವ್ಯಾಜ್ಯಗಳನ್ನು ಪರಿಹರಿಸಿ ಗ್ರಾಹಕರಿಗೆ ನ್ಯಾಯ ಒದಗಿಸುವಲ್ಲಿ ಶ್ರಮಿಸಿದೆ.

**ಕೋಷ್ಟಕ ೪.೧೬**

**೧೯೮೯ ರಿಂದ ೨೦೦೯ ರ ವರೆಗೆ ಹೌಸಿಂಗ ಬೋರ್ಡನ ವ್ಯಾಜ್ಯಗಳ ವಿವರ.**

| ಅ.ಸಂ | ವಿವರ | ದಾಖಲಾದ ವ್ಯಾಜ್ಯಗಳು | ಇತ್ಯರ್ಥವಾದ ವ್ಯಾಜ್ಯಗಳು | | ಇತ್ಯರ್ಥವಾಗದ ವ್ಯಾಜ್ಯಗಳು | |
|---|---|---|---|---|---|---|
| | | | ಸಂಖ್ಯೆ | ಶೇಕಡಾವಾರು | ಸಂಖ್ಯೆ | ಶೇಕಡಾವಾರು |
| ೧ | ಸರ್ಕಾರ (ಹೌಸಿಂಗ ಬೋರ್ಡ) | ೨೯ | ೨೧ | ೭೨% | ೮ | ೨೮% |
| ೨ | ಸರ್ಕಾರೇತರ | ೮೩ | ೮೦ | ೯೬% | ೩ | ೪% |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ**

ಕೋಷ್ಟಕ ೪.೧೬ ಹೌಸಿಂಗ ಬೋರ್ಡನ ವ್ಯಾಜ್ಯಗಳ ವಿವರವನ್ನು ತೋರಿಸಿದೆ. ಬೆಳಗಾವಿ ಗ್ರಾಹಕ ವೇದಿಕೆಯು ಹೌಸಿಂಗ ಬೊರ್ಡನ ೨೯ ಸರ್ಕಾರಿ ವ್ಯಾಜ್ಯಗಳನ್ನು ದಾಖಲು ಮಾಡಿಕೊಂಡು ೨೧ ವ್ಯಾಜ್ಯಗಳನ್ನು ಇತ್ಯರ್ಥ ಮಾಡಿದೆ. ಹಾಗೆಯೇ ಸರ್ಕಾರೇತರ ಸಂಘಗಳ ೮೩ ವ್ಯಾಜ್ಯಗಳಲ್ಲಿ ೮೦ ವ್ಯಾಜ್ಯಗಳನ್ನು ೧೯೮೯ ರಿಂದ ೨೦೦೯ ರವರೆಗೆ ವ್ಯಾಜ್ಯಗಳನ್ನು ಪರಿಹರಿಸಿ ಗ್ರಾಹಕರಿಗೆ ನ್ಯಾಯ ಒದಗಿಸಿದೆ.

**ಕೋಷ್ಟಕ ೪.೧೭**

**೧೯೮೯ ರಿಂದ ೨೦೦೯ ರವರೆಗೆ ದಾಖಲಾದ ಹಿರಿಯ ನಾಗರಿಕರ ಹಾಗೂ ವಿಧವೆಯರ ವ್ಯಾಜ್ಯಗಳ ವಿವರ.**

| ವಿವರ | ದಾಖಲಾದ ವ್ಯಾಜ್ಯಗಳು | ಇತ್ಯರ್ಥವಾದ ವ್ಯಾಜ್ಯಗಳು | ಇತ್ಯರ್ಥವಾಗದ ವ್ಯಾಜ್ಯಗಳು |
|---|---|---|---|
| ಹಿರಿಯ ನಾಗರಿಕರು | ೧೭೨ | ೨೪೧ | ೪೨ |
| ವಿಧವೆಯರು | ೧೧೧ | | |
| ಒಟ್ಟು | ೨೮೩ | ೨೪೧ | ೪೨ |

**ಮೂಲ : ಬೆಳಗಾವಿ ಗ್ರಾಹಕ ವೇದಿಕೆಯ ಕಛೇರಿಯ ಮಾಹಿತಿ.**

ಬೆಳಗಾವಿ ಗ್ರಾಹಕ ವೇದಿಕೆ ೧೯೮೯ ರಿಂದ ೨೦೦೯ ರ ವರೆಗೆ ಹಿರಿಯ ನಾಗರಿಕರ ೧೭೨ ವ್ಯಾಜ್ಯಗಳನ್ನು ಹಾಗೂ ೧೧೧ ವ್ಯಾಜ್ಯಗಳನ್ನು ವಿಧವೆಯರಿಂದ ದಾಖಲು ಮಾಡಿಕೊಂಡು ಒಟ್ಟು ೨೮೩ ವ್ಯಾಜ್ಯಗಳಲ್ಲಿ ೨೪೧ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿವೆ. ೨೪೧ ವ್ಯಾಜ್ಯಗಳನ್ನು ಪರಿಹರಿಸಿ ಹಿರಿಯ ನಾಗರಿಕರ ಹಾಗೂ ವಿಧವೆಯರ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ, ಕಾರ್ಯದಲ್ಲಿ ಯಶಸ್ಸು ಸಾಧಿಸಿದೆ. ಇತ್ಯರ್ಥವಾಗದ ೪೨ ವ್ಯಾಜ್ಯಗಳಲ್ಲಿ ಕೇವಲ ಆರು ವ್ಯಾಜ್ಯಗಳು ೬ ತಿಂಗಳಿನಿಂದ ಪರಿಹಾರದ ನಿರೀಕ್ಷೆಯಲ್ಲಿದ್ದರೆ, ಉಳಿದ ೩೬ ವ್ಯಾಜ್ಯಗಳು ೬ ತಿಂಗಳಿಗಿಂತ ಕಡಿಮೆ ಅವಧಿಯಲ್ಲಿ ದಾಖಲಾದವುಗಳು. ಗ್ರಾಹಕ ವೇದಿಕೆ ಸಮಾಜದ ಸಂಕಷ್ಟದಲ್ಲಿರುವ ಜನರ ಕುರಿತು ಕಳಕಳಿ ಹೊಂದಿದೆ ಎನ್ನುವುದು ಗೊತ್ತಾಗುತ್ತದೆ.

ಜಾಗತೀಕರಣದ ಯುಗವನ್ನು ಎದುರಿಸುತ್ತಿರುವ ಕಂಪನಿಗಳು, ವ್ಯಾಪಾರಸ್ಥರು ಹಲವು ಸಮಸ್ಯೆಗಳಿಂದ ಪಾರಾಗುವ ತರಾತುರಿಯಲ್ಲಿ ಗ್ರಾಹಕತ್ವ ಗ್ರಾಹಕ, ಕಲ್ಯಾಣ, ಗ್ರಾಹಕ ಸಂರಕ್ಷಣೆಯ ಅಂಶಗಳನ್ನು ಮರೆಯುತ್ತಿವೆ. ಈ ವೇಳೆಯಲ್ಲಿ ಸರ್ಕಾರಗಳು ಹಾಗೂ ಗ್ರಾಹಕ ವೇದಿಕೆಗಳು ತಮ್ಮ ಕರ್ತವ್ಯಗಳಿಗೆ ಚ್ಯುತಿಬರದಂತೆ ಕಾರ್ಯ ನಿರ್ವಹಿಸಬೇಕಾಗುತ್ತದೆ. ಗ್ರಾಹಕ ವೇದಿಕೆಗಳು ತಮ್ಮ ಉದ್ದೇಶಗಳನ್ನು ಮರೆಯದೆ "ಗ್ರಾಹಕ ಸಂರಕ್ಷಣಾ ಕಾಯ್ದೆಯ ಸದುಪಯೋಗ ಪಡೆದು ಕಾಯ್ದೆಯ ಅಂಶಗಳನ್ನು ತಿದ್ದುಪಡಿಗಳನ್ನು ಅನುಸರಿಸಬೇಕು. ಗ್ರಾಹಕರ ಹಕ್ಕುಗಳನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಕಾರ್ಯ ಮಾಡಬೇಕು.

ಗ್ರಾಹಕ ಸಂರಕ್ಷಣೆ ಕಾಯದೆಯು ಗ್ರಾಹಕರಿಗೆ ಆದಂತಹ ಅನ್ಯಾಯದ ವಿರುದ್ಧ ಪರಿಹಾರವನ್ನು ವಿಳಂಬವಿಲ್ಲದೇ ಅತಿ ಶೀಘ್ರವಾಗಿ ಕಡಿಮೆ ಖರ್ಚಿನಲ್ಲಿ ಪಡೆಯಲು ಇರುತ್ತದೆ.

ಬೆಳಗಾವಿ ಗ್ರಾಹಕ ವೇದಿಕೆಯು ದಾಖಲಾದ ವ್ಯಾಜ್ಯಗಳ ಪರಿಹಾರ ನೀಡುವಲ್ಲಿ ೬೫% ರಷ್ಟು ಇತ್ಯರ್ಥಗಳು ಗ್ರಾಹಕ ಪರವಾಗಿ ಕೊಟ್ಟಿದೆ. ೩೫% ರಷ್ಟು ಗ್ರಾಹಕರ ವಿರುದ್ಧ ಪರಿಹಾರ ನೀಡಿದೆ. ಪರಿಹಾರದ ದಾರಿಯನ್ನು ವೇದಿಕೆ ಕುಲಂಕಷವಾಗಿ ಪರಿಶೀಲಿಸಿ ನ್ಯಾಯವನ್ನು ಸರಿಯಾಗಿ ನೀಡುತ್ತ ಬರುತ್ತಿದೆ. ೧೯೮೯ ರಿಂದ ೨೦೦೯ ರ ವರೆಗೆ ತಾಂತ್ರಿಕ ವ್ಯಾಜ್ಯಗಳ ಅಡಿಯಲ್ಲಿ ೧೭೧ ವ್ಯಾಜ್ಯಗಳನ್ನು ಪ್ರಯೋಗಶಾಲೆಗೆ ಕಳುಹಿಸಿ ಗ್ರಾಹಕರ ಸರಿಯಾದ ಪರಿಹಾರ ನೀಡುವ ನಿಟ್ಟಿನಲ್ಲಿ ಕಾರ್ಯತತ್ಪರವಾಗಿದೆ. ಗ್ರಾಹಕ ವೇದಿಕೆ ೪೪% ವ್ಯಾಜ್ಯಗಳನ್ನು ೯೦ ದಿನಗಳೊಳಗೆ ಪರಿಹರಿಸಿದರೆ ೪೦% ವ್ಯಾಜ್ಯಗಳನ್ನು ೧೫೦ ಕ್ಕಿಂತ ಹೆಚ್ಚು ದಿನಗಳ ಅವಧಿ ತೆಗೆದುಕೊಂಡು ಪರಿಹರಿಸಿದೆ. ಗ್ರಾಹಕ ವೇದಿಕೆ ವ್ಯಾಜ್ಯಗಳನ್ನು ತೀವ್ರಗತಿಯಲ್ಲಿ ಪರಿಹರಿಸುವ ಕಾರ್ಯಗಳನ್ನು ಹಮ್ಮಿಕೊಳ್ಳಬೇಕು. ೧೫.೦೩.೨೦೦೩ ರಲ್ಲಿ ಮೂರನೇ ಬಾರಿ ತಿದ್ದುಪಡಿ ಮಾಡಲ್ಪಟ್ಟ ಗ್ರಾಹಕ ಕಾಯ್ದೆ ೧೯೮೬ ರ ಪ್ರಕಾರ ಇತ್ಯರ್ಥ ಮಾಡಲು ತೆಗೆದುಕೊಳ್ಳವ ಅವಧಿಯನ್ನು ಕಡಿಮೆ ಮಾಡಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಪರಿಹರಿಸುವಲ್ಲಿ ಶ್ರಮ ಪಟ್ಟಿದೆ.

ಕಲಂ ೨೫ ಗ್ರಾಹಕ ಸಂರಕ್ಷಣಾ ಅಧಿನಿಯಮದ ಅನ್ವಯ ಬೆಳಗಾವಿ ಗ್ರಾಹಕ ವೇದಿಕೆ, ಎದುರು ಪಕ್ಷದ ಆಸ್ತಿಯನ್ನು ಜಪ್ತು ಮಾಡಿ ಗ್ರಾಹಕರಿಗೆ ಪರಿಹಾರ ಕೊಡುವ ನಿಟ್ಟಿನಲ್ಲಿ ಸಹಾಯ ಹಸ್ತ ಚಾಚಿದೆ. ಕಲಂ ೨೭ ರ ಅದಿನಿಯಮದ ಪ್ರಕಾರ ಬೆಳಗಾವಿ ಗ್ರಾಹಕ ವೇದಿಕೆ, ವೇದಿಕೆಯ ಆದೇಶ ಮಾನ್ಯ ಮಾಡದ ಪಕ್ಷಕ್ಕೆ ದಂಡ ವಿಧಿಸಿ ಸಾವಿರಕ್ಕೂ ಹೆಚ್ಚು ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿದೆ. ಕಲಂ ೨೫ ಹಾಗು ೨೭ ರ ಅಡಿಯಲ್ಲಿ ಜಿಲ್ಲಾಧಿಕಾರಿ ರವಾನೆಯಾದ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ ಗ್ರಾಹಕರಿಗೆ ಸಹಾಯ ಮಾಡಿದೆ.

ಆದರೆ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಕಲಂ ೨೫ ಮತ್ತು ೨೭ ರ ಅಡಿಯಲ್ಲಿ ಇತ್ಯರ್ಥವಾಗದೆ ಉಳಿದು ೯೦ ದಿನಗಳಿಕ್ಕಿಂತ ೨ ವರ್ಷದ ವರೆಗೆ ಕಾಯ್ದಿರಿಸಿದ ವ್ಯಾಜ್ಯಗಳು ಇವೆ. ೧೯೮೯ ರಿಂದ ೨೦೦೯ ರವರೆಗೆ ಪ್ರತಿ ವರ್ಷದ ದಾಖಲಾದ ವ್ಯಾಜ್ಯಗಳು ಸರಿಸುಮಾರು ೮೦% ರಿಂದ ೯೦% ರಷ್ಟು ಇತ್ಯರ್ಥವಾದರೆ ೨೦೦೯ ರಲ್ಲಿ ವ್ಯಾಜ್ಯಗಳನ್ನು ಪರಿಹರಿಸುವಲ್ಲಿ ಸೋತಿದ್ದು, ಕಂಡುಬರುತ್ತಿದೆ.

ಬೆಳಗಾವಿ ಗ್ರಾಹಕ ವೇದಿಕೆ ದಾಖಲು ಮಾಡಿಕೊಂಡ ವ್ಯಾಜ್ಯಗಳು ಕುಟುಂಬದ ದೋಷಪೂರಿತ ಸರಕಿಗೆ ಸಂಬಂಧಿಸಿದುದಲ್ಲದೆ, ಬ್ಯಾಂಕು, ವಿಮಾ ಕಂಪನಿ, ರೇಲ್ವೆ, ಏರಲಾಯನ್ಸ್, ಪೋಸ್ಟ, ಟೆಲಿಕಾಂ, ರಸ್ತೆ ಸಾರಿಗೆ, ವಿದ್ಯುತ್ತ ಕಂಪನಿ ಇತ್ಯಾದಿ ಸಾಮಾನ್ಯ ವ್ಯಾಜ್ಯಗಳಲ್ಲಿದೆ. ವೈದ್ಯಕೀಯ

ಹಾಗು ಶಿಕ್ಷಣ ಸಂಬಂಧಿ ವ್ಯಾಜ್ಯಗಳನ್ನು ಪರಿಹರಿಸಲು ಪ್ರಯತ್ನಿಸಿದೆ. ಗ್ರಾಹಕ ವೇದಿಕೆಯಲ್ಲಿ ಸರಕಾರಿ ಹಾಗು ಸರಕಾರೇತರ ಹೌಸಿಂಗ ಬೋರ್ಡಿನ ವ್ಯಾಜ್ಯಗಳು ದಾಖಲಾಗಿವೆ. ವಿಧವೆಯರ ವ್ಯಾಜ್ಯಗಳನ್ನು ದಾಖಲಿಸಿಕೊಂಡು, ಗ್ರಾಹಕರಿಗೆ ಅನ್ಯಾಯವಾಗದಂತೆ ನೋಡಿಕೊಂಡಿದೆ.

ಬೆಳಗಾವಿ ಜಿಲ್ಲೆಯ ಜನಸಂಖ್ಯೆಗೆ ಹೋಲಿಸಿದರೆ, ಬೆಳಗಾವಿ ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳು ತುಂಬಾ ಕಡಿಮೆ, ಗ್ರಾಹಕರಿಗೆ ವೇದಿಕೆಯ ಇರುವ ಕುರಿತು ಅರಿವು ಇಲ್ಲ. ಗ್ರಾಹಕ ವೇದಿಕೆಯ ಉಪಯೋಗ ಜನಸಾಮಾನ್ಯರ ಉದ್ದೇಶವಾಗಬೇಕು ಗ್ರಾಹಕ ವೇದಿಕೆಯ ಮಾಹಿತಿ ಮಹತ್ವ ಎಲ್ಲರಿಗೂ ತಲುಪಬೇಕು.

**ಟಿಪ್ಪಣೆಗಳು :**


೧. ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆ(೨೦೦೭) – ಕಮ್ಮಟದ ಲೇಖನ "ಗ್ರಾಹಕ ವೇದಿಕೆಗಳು, ಅಸ್ತಿತ್ವ ನಡವಳಿಕೆ ಪರಿಹಾರ ಪಡೆಯುವ ವಿಧಾನಗಳು".

೨. ನಂದೀಮಠ ಓಂ ಪ್ರಕಾಶ (೨೦೦೭) – "ಕಂಜುಮರಿಸಂ, ಡೆವಲಪಮೆಂಟ ಆಂಡ್ ಕಂಜುಮರ್ಸ ಪ್ರೊಟೆಕ್ಷನ್" ಜಿ.ಕೆ. ಲಾ ಕಾಲೇಜು, ಹುಬ್ಬಳ್ಳಿ.

೩. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಬೆಂಗಳೂರು (೨೦೦೭) "ಗ್ರಾಹಕ ಹಿತರಕ್ಷಣಾ ಕೈಪಿಡಿ ೧೯೮೬" ಶ್ವೇತಾದ್ರಿ ಮುದ್ರಣ ಚಾಮರಾಜನಗರ.

೪. ಅಖಿಲ ಭಾರತ ಗ್ರಾಹಕ ಪಂಚಾಯತ್ (೨೦೦೭)– "ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬" ರ ಕೈಪಿಡಿ .

೫. ಬುಲಚಂದಾನಿ(೨೦೦೮) – "ಬಿಜಿನೇಸ್ ಲಾ ಫಾರ್ ಮ್ಯಾನೇಜಮೆಂಟ", ಹಿಮಾಲಯ ಪಬ್ಲಿಷಿಂಗ ಹೌಸ ನವ ದೆಹಲಿ ಪು.ಸಂ–೩೪೯

೬. ಬಸವಾ ಕೆ.ಡಿ. (೨೦೦೬) – "ಬಿಸಿನೇಸ್ ಲಾ" ವಿದ್ಯಾವಾಹಿನಿ ಪ್ರಕಾಶನ ಹುಬ್ಬಳ್ಳಿ.

೭. ಬುಲಚಂದಾನಿ (೨೦೦೮) – "ಬಿಜಿನೇಸ್ ಲಾ ಫಾರ್ ಮ್ಯಾನೇಜಮೆಂಟ", ಹಿಮಾಲಯ ಪಬ್ಲಿಷಿಂಗ ಹೌಸ ನವ ದೆಹಲಿ ಪು.ಸಂ –೪೫೨

೮. ರಾಷ್ಟ್ರೀಯ ಆಯೋಗ – ಅಂತರ್ಜಾಲದ ವರದಿ. ೩೧.೧೨.೨೦೦೭

೯. ಬೆಳಗಾವಿ ಗ್ರಾಹಕ ವೇದಿಕೆ – ಮಾಹಿತಿ (೧೮೮೯ ರಿಂದ ೨೦೦೯)

ಎ. ಪ್ರೋಫಾರ್ಮ ನಂ. ೧

ಬಿ. ಪ್ರೋಫಾರ್ಮ ನಂ. ೨

ಸಿ. ಫಾರ್ಮೆಟ್ ನಂ. ೩

ಡಿ. ಫಾರ್ಮೆಟ್ ನಂ ೪

ಇ. ಮಂತ್ಲಿ ಸ್ಟೆಟ್‌ಮೆಂಟ್


*************

# ಅಧ್ಯಾಯ -೫

## ಗ್ರಾಹಕ ಸಂರಕ್ಷಣೆಯಲ್ಲಿ ಸರಕಾರಗಳ ಪಾತ್ರ

ಭಾಗ ೧- ೫.೧ ಪ್ರಸ್ತಾವನೆ

೫.೨ ಗ್ರಾಹಕ ಮಾರ್ಗದರ್ಶಿ ಕೇಂದ್ರ

೫.೩ ರಾಜ್ಯ ಗ್ರಾಹಕರ ಕಲ್ಯಾಣ ನಿಧಿ ಸಮೀತಿ

೫.೪ ರಾಷ್ಟ್ರೀಯ ಗ್ರಾಹಕ ರಕ್ಷಣಾ ಪರಿಷತ್

೫.೫ ರಾಜ್ಯ ಗ್ರಾಹಕರ ರಕ್ಷಣಾ ಪರಿಷತ್

೫.೬ ಜಿಲ್ಲಾ ಗ್ರಾಹಕರ ರಕ್ಷಣಾ ಪರಿಷತ್

೫.೭ ಶಾಲಾ ಗ್ರಾಹಕರ ಕ್ಲಬ್

೫.೮ ಗ್ರಾಹಕರ ಅದಾಲತ್

೫.೯ ಆಹಾರ ಖಾತರಿ ಸಮಿತಿ

೫.೧೦ ಆಹಾರ ಜಾಗೃತಿ ಸಮಿತಿ

ಭಾಗ -೨ ೫.೧೧ ಸರಕಾರಿ ಇಲಾಖೆಗಳ ಕಾರ್ಯ ವಿಶ್ಲೇಷಣೆ

## ಅಧ್ಯಾಯ – ೫

# ಗ್ರಾಹಕ ಸಂರಕ್ಷಣೆ – ಸರ್ಕಾರಗಳ ಪಾತ್ರ

### ೫.೧ ಪ್ರಸ್ತಾವನೆ

ಪ್ರಾಮಾಣಿಕ ವ್ಯಾಪಾರದ ಗೈರುಹಾಜರಿಯಲ್ಲಿ ಗ್ರಾಹಕ ಶಾಸನದ ಅವಶ್ಯಕತೆ,ಬೆಳವಣಿಗೆ ಬೇಕಾಗುತ್ತದೆ. ದೇಶ ಸ್ವತಂತ್ರವಾಗುವ ಪೂರ್ವದಲ್ಲಿ ಜನರಲ್ಲಿ ತಪ್ಪು ತಿಳುವಳಿಕೆ ಇತ್ತು.ವ್ಯಾಪಾರ ಉಚ್ಚಸ್ಥಾಯಿಯಲ್ಲಿರಬೇಕಾದರೆ ವ್ಯಾಪಾರದಲ್ಲಿರುವ ಜನರು ಮೋಸಗಾರರಾಗಿರಬೇಕು. ನಂತರದ ದಿನಗಳಲ್ಲಿ ಈ ಒಂದು ಕಾಲ್ಪನಿಕ ಅನಿಸಿಕೆ ತಪ್ಪೆಂದು ರುಜುವಾತು ಆಗತೊಡಗಿತು. ವರ್ತಮಾನದಲ್ಲಿ ವ್ಯಾಪಾರದಲ್ಲಿ, ಅದರಲ್ಲೂ ವಿದೇಶಿ ವ್ಯಾಪಾರದಲ್ಲಿ "ಪ್ರಾಮಾಣಿಕತೆಯೇ ನಿಜವಾದ ನೀತಿ" ಎನ್ನುವ ಮಟ್ಟಕ್ಕೆ ಬಂದಿದೆ. ಆದರೂ ವ್ಯಾಪಾರದಲ್ಲಿ ಚಾಣಾಕ್ಷ ವ್ಯಾಪಾರಸ್ಥರು ಮೋಸ ಮತ್ತು ವಂಚನೆಗಳಿಗೆ ಹಲವು ವಿಧಾನಗಳನ್ನು ಅನುಸರಿಸಿ, ಜನರನ್ನು ತೊಂದರೆಗೆ ಸಿಲಿಕಿಸುವುದನ್ನು ನಾವು ನೋಡುತ್ತೇವೆ.

ನಮ್ಮ ಸೇವೆಗೆ ಅವಕಾಶ ಮಾಡಿಕೊಡುವ ಗ್ರಾಹಕರು, ನಮ್ಮ ಪಾಲಿಗೆ ದೇವರೆಂದು ಮಹಾತ್ಮಾ ಗಾಂಧೀಜಿಯವರು ಹೇಳಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಜಗತ್ತು ಗ್ರಾಹಕನ ಕುರಿತು ಎಚ್ಚರಗೊಳ್ಳುವ ಹಿಂದೆಯೆ ಗಾಂಧೀಜಿ ಗ್ರಾಹಕನ ಬಗ್ಗೆ ಉಚ್ಚರಿಸಿದ್ದರು. ಗ್ರಾಹಕ ಈಗ ಪಡೆದಿರುವ ಹಕ್ಕುಗಳನ್ನು ಬೆಳೆಸಲು ಬೇಕಾದ ಧೈರ್ಯ ಅವನಲ್ಲಿರಲಿಲ್ಲ. ಅದಕ್ಕಾಗಿ ಗ್ರಾಮಮಟ್ಟದಿಂದ ಗ್ರಾಹಕರನ್ನು ಎಚ್ಚರಿಸುವ ಕಾರ್ಯ ನಡೆಯಬೇಕಾಗಿದೆ. ಈ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರಗಳು ಹಾಗೂ ರಾಜ್ಯ ಸರ್ಕಾರಗಳು "ಗ್ರಾಹಕ ಕಲ್ಯಾಣ ನಿಧಿಯನ್ನು ಸ್ಥಾಪಿಸಿವೆ". ಗ್ರಾಹಕ ಹಿತರಕ್ಷಣೆಗೆ, ಗ್ರಾಹಕ ಸಂಘಟನೆಗಳನ್ನು ಬಲಪಡಿಸಲು, ಸರ್ಕಾರ ಅವುಗಳಿಗೆ ಅನುದಾನ ನೀಡಬೇಕೆಂದು ಶಾಸನ ಸಲಹೆ ಮಾಡಿದೆ. ಗ್ರಾಹಕ ಪರಿಹಾರಕ್ಕಾಗಿ ಗ್ರಾಹಕ ಕೋರ್ಟುಗಳನ್ನು ಕೇಂದ್ರದಲ್ಲಿ, ರಾಜ್ಯದಲ್ಲಿ, ಹಾಗೂ ಪ್ರತಿ ಜಿಲ್ಲೆಗೊಂದರಂತೆ ತೆರೆಯಲಾಗಿದೆ. ಗ್ರಾಹಕ ಸಂಘ ಸಂಸ್ಥೆಗಳನ್ನು ಬಲಪಡಿಸಲು ಗ್ರಾಹಕ ಶಾಸನಗಳನ್ನು ಮಾಡಿದ್ದಾರೆ.[೧]

ಗ್ರಾಹಕ ಹಿತರಕ್ಷಣಾ ಕಾಯ್ದೆ ೧೯೮೬ ಜಾರಿಗೆ ಬರುವುದಕ್ಕೆ ಮೊದಲೆ ೧೯೮೦ ರಲ್ಲಿ ನಮ್ಮ ಕರ್ನಾಟಕ ರಾಜ್ಯದಲ್ಲಿ ಹಲವು ಸೇವಾ ಸಂಸ್ಥೆಗಳು ಒಳ್ಳೆಯ ಕೆಲಸ ಮಾಡಿ ಇತಿಹಾಸ ನಿರ್ಮಿಸಿದವು. ಇಪ್ಪತ್ತು ವರ್ಷದ ಹಿಂದೆ ಗ್ರಾಹಕ ಚಳುವಳಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಸರ್ಕಾರದ ಕಡೆಯಿಂದಲೂ ಅದಕ್ಕೆ ಬೆಂಬಲವಿತ್ತು. ದೇಶದ ಅಭಿವೃದ್ಧಿ ಪಥದಲ್ಲಿ ಖಾಸಗೀಕರಣ ಹಾಗೂ ಜಾಗತೀಕರಣಗಳು ದೇಶದ ತುಂಬೆಲ್ಲಾ ಪಸರಿಸಿವೆ. ಇದರಿಂದ ಗ್ರಾಹಕನಿಗೆ ದೊರೆಯುತ್ತಿರುವ ಸೌಲಭ್ಯಗಳಲ್ಲಿ ಹಲವಾರು ಹೊಸ ಸೇವೆಗಳು ಸೇರಿಕೊಂಡಿವೆ. ಭಾರತದಾದ್ಯಂತ ಮುಂದುವರೆಯುತ್ತಿರುವ ದೇಶದಲ್ಲಿ ಜನರ ತಿಳಿವಳಿಕೆಯ ಕೊರತೆಯಿಂದ ಗ್ರಾಹಕ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾನೆ. ಈಗಿನ ವರ್ತಮಾನದಲ್ಲೂ ಕೂಡ ಗ್ರಾಹಕ ವಸ್ತುಗಳನ್ನು ಕೊಂಡುಕೊಳ್ಳುವಾಗ "ಒಂದು ಸಲ ಮಾರಾಟಮಾಡಿದ ವಸ್ತುಗಳನ್ನು ಹಿಂದಕ್ಕೆ ಪಡೆಯಲಾಗುವುದಿಲ್ಲ" ಎನ್ನುವ ಚೀಟಿಯನ್ನು ಪಡೆಯುತ್ತಾನೆ. ಇದು ಕಾನೂನುಬಾಹಿರ, ಅಧರ್ಮ ಹಾಗೂ ಒಂದೇ ಕಡೆಯಿಂದ ತೆಗೆದುಕೊಂಡ ನಿರ್ಣಯ. ಅಭಿವೃದ್ಧಿಶೀಲ ದೇಶಗಳಲ್ಲಿ ಗ್ರಾಹಕ ವಸ್ತುಗಳ ಜೊತೆ "ಒಂದು ವೇಳೆ ನಮ್ಮ ವಸ್ತು ನಿಮಗೆ ತೃಪ್ತಿ ಕೊಡದಿದ್ದರೆ, ನಿಖರವಾದ ಅವಧಿಯಲ್ಲಿ ನಿಮ್ಮ ದುಡ್ಡನ್ನು ಮರಳಿಸಲಾಗುವುದು ಎನ್ನುವ ಆಶ್ವಾಸನೆಯನ್ನು ಪಡೆಯುತ್ತಾನೆ. ಈ ಒಂದು ನಿದರ್ಶನ ಗ್ರಾಹಕನ ಅರಿವನ್ನು ತೋರಿಸುತ್ತದೆ.[೨]

**ಗ್ರಾಹಕನ ಹಿತರಕ್ಷಣೆಗೆ ಗ್ರಾಹಕನನ್ನು ಸಂರಕ್ಷಿಸಲು ನಾವು ಮೂರು ದಾರಿಗಳನ್ನು ಕಂಡುಕೊಳ್ಳಬಹುದು:**

೧. ಆತ್ಮ ಸಂಯಮ: ಮಾರುಕಟ್ಟೆಯ ಜನರು ಅಥವಾ ವ್ಯಾಪಾರಸ್ಥರು ತಮ್ಮನ್ನು ತಾವು ನಿಯಂತ್ರಿಸಿಕೊಂಡು, ಸ್ವಯಂ ಶಿಸ್ತು, ವ್ಯಾಪಾರಿ ಧರ್ಮವನ್ನು ಪಾಲಿಸುವುದರಿಂದ ಗ್ರಾಹಕರ ಹಿತ ಸಂರಕ್ಷಿಸಬಹುದು, ಈ ದಾರಿ ಬಹಳ ಕಷ್ಟ ಸಾಧ್ಯ.

೨. ಗ್ರಾಹಕರೇ ಎಚ್ಚತ್ತುಕೊಳ್ಳಬೇಕು. ಗ್ರಾಹಕರಲ್ಲಿ ಸಂಘಟನೆಯ ಮನೋಭಾವ ಬೆಳೆಯಬೇಕು. ಗ್ರಾಹಕರು, ಗ್ರಾಹಕ ಶಿಕ್ಷಣಕ್ಕೆ ಮಹತ್ವಕೊಡಬೇಕು. ಇದರಿಂದ ಗ್ರಾಹಕರು ಅನುಚಿತ ವ್ಯಾಪಾರ ಪದ್ಧತಿಗಳಿಂದ ತಪ್ಪಿಸಿಕೊಳ್ಳುತ್ತ, ತಮ್ಮನ್ನು ತಾವು ರಕ್ಷಿಸುವ ದಾರಿಗಳನ್ನು ಕಂಡುಕೊಳ್ಳಬೇಕು. ಆದರೆ ಭಾರತದಂತಹ ದೊಡ್ಡ ದೇಶದಲ್ಲಿ ಅಸಂಘಟಿತ ಗ್ರಾಹರೆ ಹೆಚ್ಚು ಆದ್ದರಿಂದ ಸರ್ಕಾರದ ಪಾತ್ರ ಭಾರತದಲ್ಲಿ ತುಂಬಾ ಅವಶ್ಯಕ. ಮಾರುಕಟ್ಟೆಯಲ್ಲಿ ಸರ್ಕಾರ ಮುತವರ್ಜಿಯಿಂದ ಕಾರ್ಯ ಹಮ್ಮಿಕೊಂಡು ಸಮಾನ ಹಕ್ಕು ಹಾಗೂ ಸಾಮಾಜಿಕ ನ್ಯಾಯವನ್ನು ಒದಗಿಸಿ ಕೊಡುವಲ್ಲಿ ಮಹತ್ವದ ಪಾತ್ರ ವಹಿಸಬೇಕು.

೩. ಸರ್ಕಾರಗಳು ಗ್ರಾಹಕ ಸಂರಕ್ಷಣೆಯಲ್ಲಿ ಮುಂದುವರೆದು ಹೊಸ ಶಾಸನಗಳನ್ನು ಮಾಡಿ ಅವುಗಳನ್ನು ಜಾರಿ ಮಾಡಬೇಕು. ಹಳೆಯ ಶಾಸನಗಳನ್ನು ಸುಧಾರಿಸಿ ಅನುಚಿತ ವ್ಯಾಪಾರ ಪದ್ಧತಿಗಳನ್ನು ತೆಗೆದು ಹಾಕುವ ಪ್ರಯತ್ನವನ್ನು ಮಾಡಬೇಕು.

ಜಾಗತೀಕರಣದ ಈ ದಶಕದಲ್ಲಿ ಗ್ರಾಹಕನಿಗೆ ಗ್ರಾಹಕತ್ವದ ಅರಿವು ತಿಳುವಳಿಕೆ ಹೆಚ್ಚುತ್ತಿದೆ. ಗ್ರಾಹಕನಿಗೆ ತನ್ನ ಹಕ್ಕು ಕರ್ತವ್ಯಗಳ ಕುರಿತು ಮಾಹಿತಿ ದೊರೆಯುತ್ತಿದೆ. ಮುಂದಿನ ದಿನಗಳಲ್ಲಿ ಗ್ರಾಹಕತ್ವದ ಅರಿವು ಗ್ರಾಹಕನಿಗೆ ಗಾಢವಾಗುತ್ತ ಹೋಗಬಹುದು. ಗ್ರಾಹಕನಿಗೆ ಸಂಬಂಧಿಸಿದ ಸರ್ಕಾರದ ಚಟುವಟಿಕೆಗಳು ಬೆಳೆಯುವುದನ್ನು ನಾವು ನೋಡುತ್ತಿದ್ದೇವೆ. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರ ತೆಗೆದುಕೊಳ್ಳುವ ನಿರ್ಣಯಗಳು ಹಾಗೂ ಕಾರ್ಯಚಟುವಟಿಕೆಗಳನ್ನು ಮೂರು ಭಾಗವಾಗಿ ವಿಂಗಡಿಸಬಹುದು.

೧. ಸಚಿವಾಲಯದ ಒತ್ತಾಸೆ.

೨. ಗ್ರಾಹಕ ಶಾಸನಗಳು.

೩. ನಿಯಂತ್ರಿತ ಅಭಿಕರಣ ಅಥವಾ ಏಜೆನ್ಸಿಗಳು.[೩]

ಗ್ರಾಹಕ ಶಾಸನಗಳು, ಮುಗ್ಧ ಮತ್ತು ಮಾಹಿತಿ ದೊರಕದ ಗ್ರಾಹಕರಿಗೆ ಅನುಚಿತ ವ್ಯಾಪಾರ ಪದ್ಧತಿಯ ವಿರುದ್ಧ ಶಾಸನಬದ್ಧ ಸಂರಕ್ಷಣೆಯನ್ನು ಒದಗಿಸಿ ಕೊಡುತ್ತವೆ. ಹಿಂದಿನ ದಿನಗಳಲ್ಲಿ ಮಾರುಕಟ್ಟೆಯ ಶಾಸನಗಳು ವ್ಯಾಪಾರಿಗಳ ಪರವಾಗಿದ್ದವೆ ಹೊರತಾಗಿ ಗ್ರಾಹಕರಿಗೆ ಅನುಕೂಲವಾಗಿರಲಿಲ್ಲ. ಈ ಶಾಸನಗಳು ಸ್ಪರ್ಧೆ ಹಾಗೂ ಸ್ಪರ್ಧಾತ್ಮಕ ಮಾರುಕಟ್ಟೆಯನ್ನು ರಕ್ಷಿಸುವ ಕೆಲಸವನ್ನು ಕೈಗೊಳ್ಳುತ್ತಿದ್ದವು. ೧೯೮೫ ಕ್ಕಿಂತ ಮೊದಲು ಗ್ರಾಹಕ ಬೆಲೆ ಏರಿಕೆಯ ಹೊಡೆತವನ್ನು ಅನುಭವಿಸುತ್ತಿದ್ದ ಆ ಅವಧಿಯಲ್ಲಿ ಗ್ರಾಹಕ ಅನುಭವಿಸುತ್ತಿದ್ದ ತೊಂದರೆಗಳನ್ನು ಅರಿತು ಸರ್ಕಾರ ಅನುಚಿತ ವ್ಯಾಪಾರಿ ಪದ್ಧತಿಯ ವಿರುದ್ಧ ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಕೆಲಸ ಮಾಡಲಾರಂಭಿಸಿತು. ಇದರಿಂದ ಸದ್ಯದ ಸ್ಥಿತಿಯಲ್ಲಿ ಹಲವಾರು ಶಾಸನಗಳು ಗ್ರಾಹಕರ ಪರವಾಗಿ ಜಾರಿಯಾಗುವುದನ್ನು ನೋಡುತ್ತಿದ್ದೇವೆ. ಗ್ರಾಹಕ ಶಾಸನ, ಗ್ರಾಹಕ ಹಕ್ಕುಗಳನ್ನು ಮನಗಂಡು ಗ್ರಾಹಕರಿಗೆ ನ್ಯಾಯ ಒದಗಿಸುವ ಕೆಲಸ ಮಾಡುತ್ತದೆ. ಈ ಎಲ್ಲ ಗ್ರಾಹಕ ಹಕ್ಕುಗಳನ್ನು ಕಾಪಾಡಲು ಸರ್ಕಾರದ ಏಜೆನ್ಸಿಗಳು ತಮ್ಮ ಕಾರ್ಯಗಳನ್ನು ವಿಸ್ತರಿಸತೊಡಗಿವೆ.

**೫.೨ ಗ್ರಾಹಕ ಮಾರ್ಗದರ್ಶಿ ಕೇಂದ್ರ**

ಆಹಾರ, ನಾಗರಿಕ, ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಕೇಂದ್ರ ಕಛೇರಿಯಲ್ಲಿ ಈ ಕೋಶವನ್ನು ತೆರೆಯಲಾಗಿದೆ. ಈ ಕೋಶದಲ್ಲಿ ಗ್ರಾಹಕರ ಹಕ್ಕುಗಳ ಬಗ್ಗೆ

ತಿಳುವಳಿಕೆ, ಕಾನೂನಿನಲ್ಲಿ ಗ್ರಾಹಕರುಗಳಿಗೆ ಸಿಗುವ ಸೌಲಭ್ಯಗಳ ಬಗ್ಗೆ ಮಾಹಿತಿ ಹಾಗೂ ಇತರೆ ಮಾರ್ಗದರ್ಶನಗಳನ್ನು ನೀಡಲಾಗುತ್ತದೆ. ಪ್ರತಿಯೊಂದು ರಾಜ್ಯದ ಕಛೇರಿಯಲ್ಲಿಯೂ ಈ ಕೋಶಗಳನ್ನು ತೆಗೆಯಲಾಗಿದೆ. ಹಾಗೆಯೇ ಪ್ರತಿಯೊಂದು ಕೇಂದ್ರಾಡಳಿತ ಪ್ರದೇಶಗಳಲ್ಲಿಯೂ ಈ ಕೋಶಗಳನ್ನು ತೆರೆಯಲಾಗಿದೆ. ಈ ಎಲ್ಲ ಕೋಶಗಳು ಗ್ರಾಹಕ ಸಂರಕ್ಷಣೆಯ ಪಾಲಿಸಿಗಳನ್ನು ಪ್ರತಿಬಂಧಗಳನ್ನು ತಯಾರಿಸುವಲ್ಲಿ ಸಹಾಯ ಮಾಡುತ್ತವೆ. ಈ ಗ್ರಾಹಕ ಮಾರ್ಗದರ್ಶಿ ಕೋಶಗಳಿಗೆ ಸಹಕಾರ್ಯದರ್ಶಿಗಳು ಮುಖ್ಯಸ್ಥರಾಗಿರುತ್ತಾರೆ.

"ಉಚಿತ ವ್ಯಾಪಾರಿ ಪದ್ಧತಿಯ ಪರಿಷತ್", ಸರ್ಕಾರವನ್ನು ಒತ್ತಾಯಿಸಿ, ಕೇಂದ್ರದಲ್ಲಿ ಈ ಕೋಶವನ್ನು ತೆರೆಯಲು ಒತ್ತಾಯಿಸಿದ್ದರಿಂದ ಕೇಂದ್ರದ ಜೊತೆಗೆ ರಾಜ್ಯಗಳಲ್ಲೂ ಕೂಡ ಕೋಶಗಳು ತೆರೆಯಲ್ಪಟ್ಟವು. ಈ ಕೋಶಗಳು ಪ್ರಧಾನಮಂತ್ರಿಗಳ ೨೦ ಅಂಶಗಳ ಕಾರ್ಯಕ್ರಮಗಳನ್ನು ಬಲಪಡಿಸಲು ಸಹಾಯ ಮಾಡತೊಡಗಿದವು. ಗ್ರಾಹಕಮಾರ್ಗದರ್ಶಿ ಕೋಶಗಳು ಗ್ರಾಹಕ ಸಂರಕ್ಷಣೆ ಮಾಡುವಲ್ಲಿ ಹಾಗೂ ಗ್ರಾಹಕ ಚಳುವಳಿಗಳಿಗೆ ಒತ್ತಾಸೆಯಾಗಿ ನಿಲ್ಲತೊಡಗಿದವು. ೧೯೮೩ ನವೆಂಬರನಲ್ಲಿ ರಾಷ್ಟ್ರೀಯ ಗ್ರಾಹಕ ಸಂರಕ್ಷಣ ಪರಿಷತ್ತು ಕೂಡ ಸರ್ಕಾರಕ್ಕೆ ಗ್ರಾಹಕ ಸಂರಕ್ಷಣಾ ನಿಯಮವನ್ನು ತೆರೆಯಲು ಒತ್ತಾಯಿಸಿತು. ಇದರಿಂದ ಕೇಂದ್ರದಲ್ಲಿ ಹಾಗೂ ರಾಜ್ಯಗಳಲ್ಲಿ ಗ್ರಾಹಕರ ಹಿತವನ್ನು ಕಾಯುವ ಸೇವಕನಾಗಿ ಕಾರ್ಯ ನಿರ್ವಹಿಸಲು ಕೋಶಗಳನ್ನು ತೆರೆಯಲಾಯಿತು. ಈ ಕೋಶಗಳು ಪರಿಣಾಮಕಾರಿಯಾಗಿ ಎಜೆನ್ಸಿ ರೂಪದಲ್ಲಿ ಕಾರ್ಯ ನಿರ್ವಹಿಸುತ್ತ, ಗ್ರಾಹಕರ ವಿಷಯಗಳಿಗೆ ಉತ್ಸಾಹ ತೋರಿಸಿ, ಪರಿಹರಿಸುವ ನಿಟ್ಟಿನಲ್ಲಿ ಅವುಗಳ ಕೆಲಸ ಶ್ಲಾಘನೀಯ.

"ಸದ್ಯದ ಪರಿಸ್ಥಿತಿಯಲ್ಲಿ ಗ್ರಾಹಕರ ಕಾರ್ಯಕಲಾಪಗಳು ಮಂತ್ರಾಲಯಗಳಿಗೆ ಹರಿದು ಹೋಗಿವೆ. ಮತ್ತು ಗ್ರಾಹಕ ಸಂರಕ್ಷಣಾ ಕಾಯ್ದೆಗಳಿಗೆ ಹರಿದು ಹೋಗಿ ಗ್ರಾಹಕ ಸಂರಕ್ಷಣ ಕಾಯ್ದೆಗಳನ್ನು ಬಿಡುಗಡೆ ಮಾಡಲಾಗಿದೆ. ಆದ್ದರಿಂದ ಮಾರ್ಗದರ್ಶಿ ಕೋಶಗಳ ವಿಭಾಗ ಗ್ರಾಹಕ ಸನದಿಗೆ ಸೀಮಿತವಾಗಿದೆ.

ಗ್ರಾಹಕ ಮಾರ್ಗದರ್ಶಿ ಕೋಶಗಳನ್ನು ಹಮ್ಮಿಕೊಳ್ಳುವ ಉದ್ದೇಶಗಳನ್ನು ಕೆಳಗಿನಂತೆ ವಿಶ್ಲೇಷಿಸಬಹುದು.

೧. ಗ್ರಾಹಕರ ಹಿತ ಸಂರಕ್ಷಣೆ ಮಾಡುವುದು.

೨. ಉಚಿತ ವ್ಯಾಪಾರಿ ಪದ್ಧತಿಯ ಕುರಿತು ನಿಶ್ಚಿತತೆ.

೩. ಗ್ರಾಹಕರ ಸಂರಕ್ಷಣಾ ಶಾಸನಗಳನ್ನು ಸರಳಿಕರಿಸುವುದು, ಪ್ರವರ್ತನೆ ಹಾಗೂ ಅಭಿವೃದ್ಧಿ ಪಡಿಸುವುದು, ನಿರ್ವಹಿಸುವುದು.

೪. ಗ್ರಾಹಕ ದೂರುಗಳನ್ನು ಹಾಗೂ ದಾವೆಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸುವ ಪ್ರಕ್ರಿಯೆಗಳನ್ನು ಕಂಡುಹಿಡಿಯುವದು.

ಗ್ರಾಹಕ ಮಾರ್ಗದರ್ಶಿ ಕೋಶ ಕಾರ್ಯ ನಿರ್ವಹಿಸುವಲ್ಲಿ ಕೆಳಗಿನ ಕೆಲಸಗಳನ್ನು ಮಾಡಬೇಕಾಗುತ್ತದೆ.

೧. **ಗ್ರಾಹಕ ಸಂರಕ್ಷಣೆ:** ಈ ಕೋಶದ ಮೂಲ ಕಾರ್ಯ ಗ್ರಾಹಕರನ್ನು ರಕ್ಷಿಸುವುದು. ಈ ಹಾದಿಯಲ್ಲಿ ಕೋಶ ಗ್ರಾಹಕರನ್ನು ರಕ್ಷಿಸಿ ಅವರ ಹಿತವನ್ನು ಕಾಪಾಡಬೇಕು ಗ್ರಾಹಕರ ದೂರುಗಳನ್ನು ಸ್ವೀಕರಿಸಿ ವಿಚಾರಣೆ ಕೈಗೊಂಡು ನ್ಯಾಯಬದ್ಧ ದೂರುಗಳನ್ನು ಪರಿಹರಿಸಬೇಕು. ಗ್ರಾಹಕರ ಹಿತಕ್ಕೆ ಧಕ್ಕೆಯಾಗುವಾಗ ಅಂಥಹ ವಿಷಯಗಳನ್ನು ವಿಚಾರಣೆಗೆ ಒಳಪಡಿಸಬಹುದು. ಗ್ರಾಹಕರಿಗೆ ಗ್ರಾಹಕ ಸಂಬಂಧಿಸಿದಂತೆ ನಡೆಯುವ ಕಾರ್ಯಕ್ರಮಗಳಲ್ಲಿ ತಪ್ಪದೆ ಭಾಗವಹಿಸುವಂತೆ ಗ್ರಾಹಕರಿಗೆ ಸಲಹೆ ನೀಡುವುದು, ಗ್ರಾಹಕರ ಶಾಸನಗಳನ್ನು ಅಭಿವೃದ್ಧಿಪಡಿಸಿ, ತೊಂದರೆ ಅನುಭವಿಸಿದ ಗ್ರಾಹಕರಿಗೆ ನ್ಯಾಯ ದೊರಕುವಂತೆ ಮಾಡುವುದು. ಮಂತ್ರಾಲಯದ ಜನರಿಗೆ ಗ್ರಾಹಕ ವಿಷಯಗಳ ಕುರಿತು ಸಲಹೆ ಕೊಡುವದು ಗ್ರಾಹಕರ ಸರಕು ಹಾಗೂ ಸೇವೆಗಳಿಗೆ ವಿಧಿಬದ್ದ ಮಾಪನಗಳ ಕುರಿತು ಸಲಹೆ ನೀಡುವುದು, ಅಧಿಕಾರಿಗಳು ಹಾಗೂ ಗ್ರಾಹಕರ ನಡುವೆ ಯಾವಾಗಲು ಸಂಪರ್ಕ ಏರ್ಪಡಿಸುವುದು, ಅದನ್ನು ಪ್ರವರ್ಧಿಸುವುದು ಹೀಗೆ ಈ ಕೋಶದ ಕೆಲಸ ಕಾರ್ಯಗಳಿಂದ ನ್ಯಾಯ ದೊರಕುವ ಭರವಸೆಯನ್ನು ಸರ್ಕಾರಗಳು ಗ್ರಾಹಕರಿಗೆ ನೀಡಬಹುದು.

೨. **ಗ್ರಾಹಕರ ಶಾಸನಗಳು:** ಗ್ರಾಹಕ ಮಾರ್ಗದರ್ಶಿಕೋಶ ಗ್ರಾಹಕ ಸಂರಕ್ಷಣಾ ಶಾಸನಗಳನ್ನು ಅಭಿವೃದ್ಧಿಗೊಳಿಸುವುದು ಮೇಲ್ವಿಚಾರಣೆ ಮಾಡುವುದು, ಸರಳೀಕರಿಸುವುದು ಹಾಗೂ ಹೊಂದಾಣಿಕೆಯಾಗುವಂತೆ ನೋಡಿಕೊಳ್ಳುತ್ತದೆ. ಗ್ರಾಹಕರ ಹಿತವನ್ನು ಕಾಪಾಡುವುದಕ್ಕೆ ಶಾಸನಗಳನ್ನು ಬದಲಾಯಿಸುವುದು ಹಾಗೂ ಹೊಸ ಶಾಸನಗಳನ್ನು ಜಾರಿ ಮಾಡಲು ಸರ್ಕಾರಕ್ಕೆ ಸಹಾಯ ಮಾಡುತ್ತದೆ. ಶಾಸನಗಳನ್ನು ಆದೇಶಿಸುವಾಗ ಗ್ರಾಹಕರನ್ನು ಆ ಕೆಲಸಕ್ಕೆ ಆಹ್ವಾನಿಸುವುದು.

೩. ಉಚಿತ ವ್ಯಾಪಾರಿ ಪದ್ಧತಿಗಳು: ವಾಣಿಜ್ಯ ವ್ಯವಹಾರ ನೋಡಿಕೊಳ್ಳುವ ಜನರು ಸ್ವಯಂ ಪ್ರತಿಬಂಧಕ ಕಾಯ್ದೆಗಳನ್ನು ಹಮ್ಮಿಕೊಂಡು ಉಚಿತ ವ್ಯಾಪಾರಿ ಪದ್ದತಿಯನ್ನು ಅಭಿವೃದ್ಧಿಪಡಿಸಲು ಈ ಕೋಶಗಳು ಸಹಾಯ ಮಾಡುತ್ತವೆ. ಉತ್ಪಾದಕರನ್ನು ಹಾಗೂ ಇತರ ವ್ಯಾಪಾರಿ ಜನರನ್ನು ಸಂಪರ್ಕಿಸಿ, ಗ್ರಾಹಕರ ಹಿತಕ್ಕೆ ದಕ್ಕೆಯಾಗುವಂತಹ ವಿಷಯಗಳನ್ನು ಅವರಿಗೆ ತಿಳಿಸುವುದು. ಕಲಬೆರಿಕೆ, ಕೆಳಮಟ್ಟದ ವಸ್ತುಗಳನ್ನು ತೂಕ ಮತ್ತು ಅಳತೆಗಳನ್ನು ತಪ್ಪುದಾರಿಗೆಳೆಯುವ ಜಾಹೀರಾತುಗಳನ್ನು, ಪರೀಕ್ಷಿಸುವುದನ್ನೂ ಕೂಡ ಈ ಗ್ರಾಹಕ ಕೋಶಗಳು ಮಾಡುತ್ತವೆ. ಉಚಿತ ವ್ಯಾಪಾರಿ ಪದ್ಧತಿಯ ಸಂಹಿತೆಗಳನ್ನು ತಯಾರಿಸುವುದು.

ಗ್ರಾಹಕ ಮಾರ್ಗದರ್ಶಿ ಕೋಶವನ್ನು ಕೇಂದ್ರದಲ್ಲಿ, ರಾಜ್ಯದಲ್ಲಿ ಹಾಗೂ ಜಿಲ್ಲೆಗಳಲ್ಲಿ ತೆರೆಯಲಾಗಿದೆಯಾದರೂ, ಅವುಗಳ ಇರುವ ಮಾಹಿತಿಯಾಗಲಿ, ಅವು ಮಾಡುವ ಕೆಲಸಗಳಾಗಲಿ ಸಾಮಾನ್ಯ ಗ್ರಾಹಕರಿಗೆ ಗೊತ್ತಿರುವುದು ಬಹಳ ವಿರಳ. ಆಹಾರ ನಾಗರಿಕ ಸರಬರಾಜು ಇಲಾಖೆಗೆ, ಗ್ರಾಹಕರ ವ್ಯವಹಾರಗಳನ್ನು ಹೊಂದಿಸಿದುದರಿಂದ, ಆ ಇಲಾಖೆಯ ಅಡಿಯಲ್ಲಿ ಕೆಲಸ ಮಾಡುವ ಈ ಗ್ರಾಹಕ ಮಾರ್ಗದರ್ಶಿ ಕೋಶವನ್ನು, ಆ ಇಲಾಖೆಯಲ್ಲಿ ನಿರ್ಲಕ್ಷಿಸುವ ಸಂಭವವೆ ಹೆಚ್ಚು ಕೋಶಗಳು ಹಮ್ಮಿಕೊಳ್ಳುವ ಕಾರ್ಯಗಳು ಕೇವಲ ಪೇಪರಗಳಲ್ಲಿ ಉಳಿಯುವ ಸಾಧ್ಯತೆಯೆ ಹೆಚ್ಚು .ಸಂಶೋಧನೆಯ ಅಂಗವಾಗಿ ಸಾಮಾನ್ಯ ಗ್ರಾಹಕರನ್ನು ಹಾಗೂ ಮೊಕದ್ದಮೆ ಹೂಡಿದ ಗ್ರಾಹಕರನ್ನು ಸಂದರ್ಶಿಸಿದಾಗ ಅವರಿಗೆ ಈ ಕೋಶಗಳು ಆಹಾರ ನಾಗರಿಕ ಸರಬರಾಜು ಇಲಾಖೆಯಲ್ಲಿ ಇಂಥಹ ವ್ಯವಸ್ಥೆ ಇರುವುದೇ ಗೊತ್ತಿಲ್ಲ.[೪]

**೫.೩ ರಾಜ್ಯ ಗ್ರಾಹಕರ ಕಲ್ಯಾಣ ನಿಧಿ ಸಮಿತಿ :**

ರಾಜ್ಯದಲ್ಲಿ ಕರ್ನಾಟಕ ರಾಜ್ಯ ಗ್ರಾಹಕ ಕಲ್ಯಾಣ ನಿದಿ ನಿಯಮಗಳು ೨೦೦೫ ನ್ನು ರಚಿಸಿ ಹೊರಡಿಸಲಾಗಿದೆ. ಸದರಿ ನಿಯಮಗಳಂತೆ ರಾಜ್ಯ ಗ್ರಾಹಕರ ಕಲ್ಯಾಣ ನಿಧಿ ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯ ಶಿಫಾರಸ್ಸಿನಂತೆ ವಿವಿಧ ಗ್ರಾಹಕ ಸಂಸ್ಥೆಗಳಿಗೆ ಗ್ರಾಹಕರ ಚಟುವಟಿಕೆಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತದೆ.[೫]

**೫.೪ ರಾಷ್ಟ್ರೀಯ ಗ್ರಾಹಕ ರಕ್ಷಣಾ ಪರಿಷತ್: ಕಲಂ ೪ :**

**ಸ್ಥಾಪನೆ:** ಕಲಂ ೪ ರ ಅನ್ವಯ ಕೇಂದ್ರ ಸರ್ಕಾರ ತನ್ನ ಪರಿಷತ್ ಅಧಿಸೂಚನೆಯನ್ನು ಹೊರಡಿಸಿ ಗೊತ್ತುಪಡಿಸಲಾದ ದಿನಾಂಕದಿಂದ ಕೇಂದ್ರ ಗ್ರಾಹಕ ರಕ್ಷಣಾ ಮಂಡಳಿಯನ್ನು ಸ್ಥಾಪಿಸಲಾಗಿದೆ. ಮತ್ತು ಅದು ಯಾವ ದಿನಾಂಕದಿಂದ ಜಾರಿಯಲ್ಲಿ ಬರುವುದೆಂದು ಅದಿಸೂಚನೆಯಲ್ಲಿ ಇದೆ. ಪರಿಷತ್ತು ಕೇಂದ್ರಿಯ ಗ್ರಾಹಕ ರಕ್ಷಣಾ ಮಂಡಳಿ ಅಥವಾ ಪರೀಷತ್ ಎಂಬ ಹೆಸರಿನಿಂದ ಸ್ಥಾಪಿಸಲ್ಪಟ್ಟಿದೆ.

**ಸದಸ್ಯತ್ವ :** ಕೇಂದ್ರ ಪರೀಷತ್ ಕೆಳಗಿನ ಸದಸ್ಯರನ್ನು ಹೊಂದಿರುತ್ತವೆ.

೧. ರಾಷ್ಟ್ರೀಯ ಗ್ರಾಹಕರ ರಕ್ಷಣಾ ಪರಿಷತ್ ಅಧ್ಯಕ್ಷರಾಗಿ ಕೇಂದ್ರ ಸರ್ಕಾರದಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ರಕ್ಷಣಾ ಇಲಾಖೆಯ ಮಂತ್ರಿಗಳು.

೨. ಅಂತಹ ಆಸಕ್ತಿಯನ್ನು ಹೊಂದಿದ ಇತರ ಸರ್ಕಾರೇತರ ಇಲ್ಲವೇ ಸರ್ಕಾರಿ ಸದಸ್ಯರು ಗೊತ್ತು ಪಡಿಸಿದ ಸಂಖ್ಯೆಯಲ್ಲಿ ಇತರ ಸದಸ್ಯರು ಇರತಕ್ಕದು.

ಗ್ರಾಹಕ ರಕ್ಷಣಾ ನಿಯಮಗಳು ೧೯೮೭ ನಿಯಮ ೩ರ ಅನ್ವಯ ಪರೀಷತ್ ೧೫೦ ಸದಸ್ಯರಗಳನ್ನು ಹೊಂದಿರಬೇಕು ಅವರು ಯಾರೇಂದರೆ:

೧. ಕೇಂದ್ರ ಸರ್ಕಾರದ ನಾಗರಿಕ ಪೂರೈಕೆ ಇಲಾಖೆಯ ಪ್ರಭಾವದಲ್ಲಿರುವ ಮಂತ್ರಿಯ ಸಚಿವರು ಕೇಂದ್ರ ಮಂಡಳಿಯ ಚೇರಮನರಾಗಿರುತ್ತಾರೆ.

೨. ರಾಜ್ಯ ಸರ್ಕಾರ ಅಥವಾ (ಸ್ವತಂತ್ರ್ಯ ಪ್ರಭಾರ ಹೊಂದಿರದಿದ್ದಲ್ಲಿ) ನಾಗರಿಕ ಪೂರೈಕೆ ಇಲಾಖೆಯಲ್ಲಿ ಉಪಮಂತ್ರಿ ಕೇಂದ್ರ ಮಂಡಳಿಯ ಉಪಚೇರ್‌ಮನ್ ಆಗಬೇಕಾಗುತ್ತದೆ.

೩. ರಾಜ್ಯ ಸರ್ಕಾರದ ಆಹಾರ ಮತ್ತು ನಾಗರಿಕ ಪೂರೈಕೆಯ ಮಂತ್ರಿಗಳು ಇಲ್ಲವೆ ಗ್ರಾಹಕರ ಹಿತ ಚಿಂತನ ಕುರಿತು ಇರುವ ರಾಜ್ಯ ಮಂತ್ರಿಗಳು.

೪. ಎಂಟು ಮಂದಿ ಸಂಸದೀಯ ಸದಸ್ಯರು, ಅದರಲ್ಲಿ ಐದು ಜನ ಲೋಕ ಸಭೆಯ ಸದಸ್ಯರು ಹಾಗೂ ಮೂರು ಜನ ರಾಜ್ಯ ಸಭೆಯ ಸದಸ್ಯರು ಇರತಕ್ಕದ್ದು.

೫. ಅನುಸೂಚಿತ ಜಾತಿ (ಪರಿಶಿಷ್ಟ ಜಾತಿ) ಹಾಗೂ ಅನುಸೂಚಿತ ಜನಾಂಗದ ಪ್ರತಿನಿಧಿ.

೬. ಇಪ್ಪತ್ತಕ್ಕೆ ಮೀರದಂತೆ ಕೇಂದ್ರ ಸರ್ಕಾರದ ವಿವಿಧ ಇಲಾಖೆಯ ಮತ್ತು ಗ್ರಾಹಕ ಹಿತರಕ್ಷಣೆಗೆ ಸಂಬಂಧಪಟ್ಟ ಸ್ವಾಯತ್ತಿನ ಕಾರ್ಯಗಳ ಪ್ರತಿನಿಧಿಗಳು.

೭. ೩೫ ಕ್ಕೂ ಕಡಿಮೆ ಇಲ್ಲದ ಗ್ರಾಹಕ ಸಂಘಗಳ ಸದಸ್ಯರು ಅಥವಾ ಗ್ರಾಹಕರು.

೮. ಹತ್ತು ಜನಕ್ಕೆ ಕಡಿಮೆ ಇಲ್ಲದ ಮಹಿಳಾ ಪ್ರತಿನಿಧಿಗಳು.

೯. ಇಪ್ಪತ್ತಕ್ಕೆ ಮೀರದ ಒಕ್ಕಲಿಗರು ವ್ಯಾಪಾರಸ್ಥರು ಮತ್ತು ಉದ್ದಿಮೆದಾರರು.

೧೦. ಹದಿನೈದಕ್ಕೆ ಮಿಕ್ಕದಂತೆ ಗ್ರಾಹಕ ಹಿತಾಸಕ್ತಿಯನ್ನು ಪ್ರತಿನಿಧಿಸಬಲ್ಲ ವ್ಯಕ್ತಿಗಳು.

೧೧. ನಾಗರಿಕ ಪೂರೈಕೆ ಇಲಾಖೆಯ ಕಾರ್ಯದರ್ಶಿ ಈ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

**ಮಂಡಳಿಯ ಕಾಲಾವಧಿ:**

ಮಂಡಳಿಯ ಕಾಲಾವಧಿ ಮೂರು ವರ್ಷದ್ದು ಇರುತ್ತದೆ. ಈ ಮಂಡಳಿಯ ಸದಸ್ಯರು ಹುದ್ದೆಯನ್ನು ತ್ಯಜಿಸುವುದಾದರೆ ರಾಜೀನಾಮೆಯನ್ನು ಲಿಖಿತರೂಪವಾಗಿ ತನ್ನ ಸಹಿ ಮಾಡಿ ಸದಸ್ಯತ್ವದ ಹುದ್ದೆಗೆ ರಾಜೀನಾಮೆಯನ್ನು ಚೇರಮನರಿಗೆ ಸಲ್ಲಿಸಬೇಕು. ಅಥವಾ ತೆರವಾದ ರಾಜೀನಾಮೆಯನ್ನು ಚೇರಮನರಿಗೆ ಸಲ್ಲಿಸಬೇಕು. ಅಥವಾ ತೆರವಾದ ಸ್ಥಳವನ್ನು ಕೇಂದ್ರ ಸರ್ಕಾರವು ಅದೇ ಮಾರ್ಗದಲ್ಲಿಂದ ಬೇರೆ ವ್ಯಕ್ತಿಯನ್ನು ತುಂಬಬೇಕು ಹಾಗೂ ನೇಮಕವಾದ ಆ ವ್ಯಕ್ತಿಯ ಅಧಿಕಾರದ ಅವಧಿ ಮಂಡಳಿಯ ಉಳಿದ ಅವಧಿಗೆ ಮಾತ್ರ ಇರುತ್ತದೆ.

**ಕೇಂದ್ರ ಗ್ರಾಹಕ ಪರಿಷತ್ ಪ್ರಕ್ರಿಯೆ:**

ಗ್ರಾಹಕ ರಕ್ಷಣಾ ಅಧಿನಿಯಮ ೫(೨) ಹಾಗೂ ಗ್ರಾಹಕ ಸಂರಕ್ಷಣೆ ಕಾಯ್ದೆ ೧೯೮೬ ರ ಕಲಂ ೪ ರ ಅನ್ವಯ ಕೇಂದ್ರ ಮಂಡಳಿಯ ತನ್ನ ಕಾರ್ಯನಿರ್ವಹಣೆಗಾಗಿ ಪ್ರಕ್ರಿಯೆಗಳನ್ನು ಹಮ್ಮಿಕೊಳ್ಳಬೇಕು ಅದರ ವ್ಯವಹಾರವು ಈ ಕೆಳಗಿನಂತೆ ಇರುತ್ತದೆ.

೧. ಕೇಂದ್ರ ಮಂಡಳಿಯ ಅಧ್ಯಕ್ಷರು ಸಭಾಪತಿಯಾಗಿರತಕ್ಕದ್ದು ಅಧ್ಯಕ್ಷರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಸಭೆಯ ಸಭಾಪತಿ ಸ್ಥಾನವನ್ನು ಅಲಂಕರಿಸಿ ಮತ್ತು ಉಪಾಧ್ಯಕ್ಷರ ಅನುಪಸ್ಥಿತಿಯಲ್ಲಿ ಆ ಸಭೆಯ ಸಭಾಪತಿ ಎಂಬ ಇಬ್ಬರು ಸದಸ್ಯರನ್ನು ಆರಿಸತಕ್ಕದ್ದು.

೨. ಕೇಂದ್ರ ಮಂಡಳಿಯ ಪ್ರತಿಯೊಂದು ಸಭೆಯನ್ನು ಕರೆಯುವ ಹತ್ತು ದಿವಸ ಮುಂಚಿತವಾಗಿ ಲಿಖಿತವಾದ ನೋಟಿಸನ್ನು ಕೊಡಬೇಕು.ಈ ನೋಟಿಸನಲ್ಲಿ ಸಭೆಯು ನಡೆಯುವ ದಿನಾಂಕ ಹಾಗೂ ನೋಟಿಸು ಕೊಟ್ಟ ದಿನಾಂಕದಿಂದ ಅವಧಿ ಹತ್ತು ದಿವಸಗಳಿಗಿಂತ ಕಡಿಮೆ ಇರಬಾರದು.

೩. ಕೇಂದ್ರ ಮಂಡಳಿಯ ಸಭೆಯ ಪ್ರತಿಯೊಂದು ತಿಳುವಳಿಕೆ ಪತ್ರವು ಸಭೆಯ ಸ್ಥಳ ದಿನ ಹಾಗೂ ಸಮಯವನ್ನು ನಮೂದಿಸಿರತಕ್ಕದ್ದು ಹಾಗೂ ಅಲ್ಲಿ ನಡೆಯುವ ಕಾರ್ಯಕಲಾಪಗಳ ವಿವರಗಳನ್ನು ಒಳಗೊಂಡಿರಬೇಕು.

೪. ಕೇಂದ್ರ ಮಂಡಳಿಯ ಯಾವುದೇ ವ್ಯವಹಾರವು ಕೇವಲ ಸ್ಥಾನ ಖಾಲಿ ಇದ್ದ ಮಾತ್ರಕ್ಕೆ ಅಥವಾ ಮಂಡಳಿಯ ರಚನೆಯಲ್ಲಿ ದೋಷವಿದ್ದರೆ ಎಂಬ ಕಾರಣದಿಂದ ಮಂಡಳಿಯು ಮಾಡಿದ ಯಾವುದೆ ವ್ಯವಹರಣೆ ಕಾನೂನಿನ ಅಸಿಂಧು ಆಗಲಾರದು.

೫. ಗ್ರಾಹಕ ರಕ್ಷಣಾ ಅಧಿನಿಯಮದ ಅಡಿಯಲ್ಲಿ ಕೇಂದ್ರ ಮಂಡಳಿಯು ತನ್ನ ಕಾರ್ಯಕಲಾಪಗಳನ್ನು ನೆರವೇರಿಸುವುದರ ಸಲುವಾಗಿ ಅವಶ್ಯವೆನಿಸಿದ ಕೆಲವು ಕಾರ್ಯ ಘಟಕಗಳನ್ನು ಮಾಡಿ ಇಂತಹ ಕಾರ್ಯಘಟಕಗಳಿಗೆ ವಹಿಸಿಕೊಟ್ಟು ಕಾರ್ಯ ಮಾಡಬೇಕು. ಅಂತಹ ಘಟಕಗಳು ತೆಗೆದುಕೊಂಡ ನಿರ್ಣಯವನ್ನು ಕೇಂದ್ರ ಮಂಡಳಿಯ ಅವಗಾಹನೆಗಾಗಿ ಇಡಬೇಕಾಗುತ್ತದೆ.

೬. ಕೇಂದ್ರ ಮಂಡಳಿಯ ಸರ್ಕಾರೇತರ ಸದಸ್ಯರಿಗೆ ಅಥವಾ ಯಾವುದೆ ಕಾರ್ಯಘಟಕದ ಸಭೆಗಳಿಗೆ ಹೋಗಿ ಬರಲು ಪ್ರಥಮ ದರ್ಜೆ ರೈಲಿನ ದರ ಹಾಗೂ ದಿನದ ಭತ್ಯೆಗಳನ್ನು ಕೊಡಬೇಕಾಗುತ್ತದೆ.

೭. ಕೇಂದ್ರ ಮಂಡಳಿಯ ಠರಾವು ಕೇಂದ್ರ ಅನುಮೋದನೆಯ ಪ್ರಕಾರ ಇರಬೇಕಾಗುತ್ತದೆ.

**ರಾಷ್ಟ್ರೀಯ ಮಂಡಳಿಯ ಸ್ಥಳ:**

ಗ್ರಾಹಕ ರಕ್ಷಣಾ ಅಧಿನಿಯಮ ೧೯೮೭ ನಿಯಮ ೫ ರ ಅನ್ವಯ ರಾಷ್ಟ್ರೀಯ ಮಂಡಳಿಯ ಸ್ಥಳ ದೆಹಲಿಯ ಸಂಘ ಕ್ಷೇತ್ರದಲ್ಲಿ ಇರಬೇಕಾಗುತ್ತದೆ.

**ರಾಷ್ಟ್ರೀಯ ಮಂಡಳಿಯ ಕೆಲಸದ ದಿನಗಳು ಮತ್ತು ಕಾರ್ಯಕಲಾಪದ ಸಮಯ:**

ನಿಯಮ ೬ರ ಅನ್ವಯ ರಾಷ್ಟ್ರೀಯ ಮಂಡಳಿಯ ಕೆಲಸದ ದಿನ ಹಾಗೂ ಕಾರ್ಯಾಲಯದ ಸಮಯವು ಕೇಂದ್ರ ಸರ್ಕಾರದ ಕೆಲಸದ ದಿನ ಮತ್ತು ಕಛೇರಿಯ ಸಮಯದಂತೆ ಇರತಕ್ಕದು.

**ಮೋಹರು ಮತ್ತು ಲಾಂಛನ:**

ನಿಯಮ ೭ ರ ಅನ್ವಯ ಮೋಹರು ಮತ್ತು ಲಾಂಛನ ಕೇಂದ್ರ ಸರ್ಕಾರವು ನಿಗದಿಪಡಿಸಿದಂತೆ ಇರಬೇಕು. ರಾಷ್ಟ್ರೀಯ ಮಂಡಳದ ಉದ್ದೇಶಗಳನ್ನು ಕೆಳಗಿನಂತೆ ವಿವರಿಸಬಹುದು.

ನಿಯಮ ೬ರ ಅನ್ವಯ ರಾಷ್ಟ್ರೀಯ ಮಂಡಳಿ ಗ್ರಾಹಕರ ಹಕ್ಕುಗಳನ್ನು ರಕ್ಷಿಸುವುವಾಗ ಅವುಗಳನ್ನು ಅಭಿವೃದ್ದಿ ಪಡಿಸುವಾಗ, ಈ ಕೆಳಗಿನ ಉದ್ದೇಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

೧. ಗ್ರಾಹಕರ ಜೀವಕ್ಕೆ ಹಾನಿ ತರುವಂತಹ ಮಾರುಕಟ್ಟೆಯ ವಸ್ತುಗಳನ್ನು ಹಾಗೂ ಸೇವೆಯ ವಿರುದ್ಧ ಗ್ರಾಹರಿಗೆ ರಕ್ಷಣೆ ಕೊಡಿಸಬೇಕು.

೨. ಅನುಚಿತ ವ್ಯಾಪಾರಿ ಪದ್ಧತಿಯಿಂದ ಮಾರಾಟವಾಗುವ ಸರಕು ಮತ್ತು ಸೇವೆಗಳ ಗುಣಮಟ್ಟ, ತೂಕ, ಬೆಲೆ ಮುಂತಾದವುಗಳ ಮಾಹಿತಿಯನ್ನು ಗ್ರಾಹರಿಗೆ ನೀಡಬೇಕು.

೩. ವಿವಿಧ ತರಹದ ಸರಕು ಹಾಗು ಸೇವೆಯ ಸ್ಪರ್ಧಾತ್ಮಕ ಬೆಲೆಗಳ ಕುರಿತು ಮಾಹಿತಿಯನ್ನು ತೆಗೆದುಕೊಡುವುದಾಗಿ ಗ್ರಾಹಕರಿಗೆ ಭರವಸೆ ನೀಡಬೇಕು.

೪. ಗ್ರಾಹಕ ವೇದಿಕೆಯಲ್ಲಿ ಗ್ರಾಹಕರ ಹಿತಾಸಕ್ತಿಗೆ ಅತ್ಯಂತ ಮಹತ್ವ ಕೊಡುವಂತೆ, ದಾವೆಯನ್ನು ಸ್ವೀಕರಿಸುವಂತೆ ಮಾಡಬೇಕು.

೫. ಅನುಚಿತ ವ್ಯಾಪಾರಿ ಪದ್ಧತಿಯ ಪ್ರತಿಬಂಧಕ ವ್ಯಾಪಾರಿ ಪದ್ಧತಿ ಹಾಗು ಜಾಣತನದ ಶೋಷಣೆಯ ವಿರುದ್ಧ ಗ್ರಾಹರಿಗೆ ಪರಿಹಾರ ಕೊಡಿಸಲು ಸಹಾಯ ಮಾಡುವುದು.

೬. ಗ್ರಾಹರಿಗೆ ಗ್ರಾಹಕ ಶಿಕ್ಷಣದ ಹಕ್ಕನ್ನು ಒದಗಿಸುವುದು.[೬]

**೫.೫ ರಾಜ್ಯ ಗ್ರಾಹಕರ ರಕ್ಷಣಾ ಪರಿಷತ್:**

**ಸ್ಥಾಪನೆ:** ಗ್ರಾಹಕ ರಕ್ಷಣಾ ಅಧಿನಿಯಮ ಕಲಂ೭ ರ ಅನ್ವಯ ರಾಜ್ಯ ಸರ್ಕಾರ ಒಂದು ರಕ್ಷಣಾ ಮಂಡಳಿಯನ್ನು ಸ್ಥಾಪಿಸಿದ ಬಗ್ಗೆ ಅಧಿಸೂಚನೆಯ ಮೂಲಕ ಅಂತಹ ಅಧಿಸೂಚನೆಯಲ್ಲಿ ನಮೂದಿಸಲಾದ ದಿನಾಂಕದಂದು "ಗ್ರಾಹಕರ ರಕ್ಷಣಾ ಪರಿಷತ್ತು", ಎಂಬ ಹೆಸರಿನಿಂದ ಸ್ಥಾಪಿಸಲಾಗುವುದು. ಅದನ್ನು ರಾಜ್ಯ "ಗ್ರಾಹಕರ ರಕ್ಷಣಾ ಪರಿಷತ್" ಎಂದು ಕರೆಯಲಾಗುವುದು.

**ಸದಸ್ಯತ್ವ** : ರಾಜ್ಯ ರಕ್ಷಣಾ ಪರಿಷತ್ತು ಈ ಕೆಳಗೆ ಕಾಣಿಸಿದ ಸದಸ್ಯರನ್ನು ಒಳಗೊಂಡಿರಬೇಕು.

೧. ರಾಜ್ಯ ಸರ್ಕಾರದಲ್ಲಿರುವ ಗ್ರಾಹಕ ಇಲಾಖೆಯನ್ನು ನೋಡಿಕೊಳ್ಳುವ ಮಂತ್ರಿಯು ರಾಜ್ಯ ರಕ್ಷಣಾ ಪರಿಷತ್ತಿನ ಅಧ್ಯಕ್ಷರಾಗಿರಬೇಕು.

೨. ರಾಜ್ಯ ಸರ್ಕಾರವು ನಿಗದಿಪಡಿಸಿದ ಹತ್ತಕ್ಕೆ ಮೀರದ ಬೇರೆ ಇಲಾಖೆಗಳ ಹಾಗೂ ಇಲಾಖೇತರ ಸದಸ್ಯರು.

೩. ಕೇಂದ್ರ ಸರ್ಕಾರವು ನಿಗದಿಪಡಿಸಿದ ಹತ್ತಕ್ಕೆ ಮೀರದ ಬೇರೆ ಇಲಾಖೆಗಳ ಹಾಗೂ ಇಲಾಖೇತರ ಸದಸ್ಯರು.

ರಾಜ್ಯ ರಕ್ಷಣಾ ಪರಿಷತ್ತು ಪ್ರತಿವರ್ಷ ಎರಡು ಸಲ ಸಭೆಗಳನ್ನು ಕರೆಯಬೇಕು. ರಾಜ್ಯ ಪರಿಷತ್ತಿನ ಅಧ್ಯಕ್ಷರಿಗೆ ಸೂಕ್ತವೆನಿಸಿದ ಸಮಯ ಹಾಗೂ ಸ್ಥಳದಲ್ಲಿ ಯಾವತ್ತೂ ಕಾರ್ಯಕಲಾಪ ವ್ಯವಹಾರ ಪ್ರಕ್ರಿಯೆ ನಡೆಸಬೇಕಾಗುತ್ತದೆ.

**ರಾಜ್ಯ ಪರಿಷತ್ತಿನ ಉದ್ದೇಶಗಳು:** ಕಲಂ ೮ ರ ಅನ್ವಯ ರಾಜ್ಯ ಪರಿಷತ್ತು ಕೆಳಗಿನ ಉದ್ದೇಶಗಳನ್ನು ಹೊಂದಿರಬೇಕು.

೧. ರಾಜ್ಯ ಪರಿಷತ್ ಗ್ರಾಹಕರ ಜೀವಕ್ಕೆ ಹಾನಿ ತರುವಂತಹ ಮಾರಾಟದ ವಸ್ತುಗಳ ಹಾಗೂ ಸೇವೆಯ ವಿರುದ್ಧ ಗ್ರಾಹರಿಗೆ ರಕ್ಷಣೆ ಕೊಡಿಸಬೇಕು.

೨. ಅನುಚಿತ ವ್ಯಾಪಾರಿ ಪದ್ಧತಿಯಿಂದ ಮಾರಾಟವಾಗುವ ಸರಕು ಮತ್ತು ಸೇವೆಗಳ ಗುಣಮಟ್ಟ, ತೂಕ, ಬೆಲೆ ಮುಂತಾದವುಗಳ ಮಾಹಿತಿಯನ್ನು ಗ್ರಾಹರಿಗೆ ಕೊಡಬೇಕು.

೩. ವಿವಿಧ ಮಾರುಕಟ್ಟೆಯ ವಸ್ತುಗಳು ಹಾಗು ಸೇವೆಯ ಸ್ಪರ್ಧಾತ್ಮಕ ಬೆಲೆಗಳ ಕುರಿತು ಮಾಹಿತಿಯನ್ನು ಕೊಡುವುದಾಗಿ ಗ್ರಾಹಕರಿಗೆ ಭರವಸೆ ನೀಡಬೇಕು.

೪. ಗ್ರಾಹಕರ ಹಿತಾಸಕ್ತಿಗೆ ಮಹತ್ವ ಕೊಟ್ಟು ಅವರ ವ್ಯಾಜ್ಯಗಳನ್ನು ಸ್ವೀಕರಿಸುವಂತೆ ಗ್ರಾಹಕ ವೇದಿಕೆಗಳಿಗೆ ಮನವರಿಕೆ ಮಾಡಿಕೊಡಬೇಕು.

೫. ಅನುಚಿತ ವ್ಯಾಪಾರಿ ಪದ್ಧತಿ, ಪ್ರತಿಬಂಧಕ ವ್ಯಾಪಾರಿ ಪದ್ಧತಿಯ ಹಾಗೂ ಜಾಣತನದ ಶೋಷಣೆಯ ವಿರುದ್ಧ ಗ್ರಾಹಕರಿಗೆ ಪರಿಹಾರ ಕೊಡಿಸಲು ಪ್ರಯತ್ನಿಸಬೇಕು.

೬. ಗ್ರಾಹಕರಿಗೆ ಗ್ರಾಹಕ ಶಿಕ್ಷಣದ ಹಕ್ಕನ್ನು ಕೊಡಿಸಲು ಪ್ರಯತ್ನಿಸಬೇಕು.[೭]

**೫.೬ ಜಿಲ್ಲಾ ಗ್ರಾಹಕರ ರಕ್ಷಣಾ ಪರಿಷತ್:**

**ಸ್ಥಾಪನೆ :** ತಿದ್ದುಪಡಿ ಗ್ರಾಹಕ ಸಂರಕ್ಷಣಾ ಕಾಯ್ದೆ ೨೦೦೨ ಕಲಂ ೮–ಂ ದ ಅನ್ವಯ ರಾಜ್ಯ ಸರ್ಕಾರವು ಪ್ರತಿ ಜಿಲ್ಲೆಯಲ್ಲಿಯೂ ರಕ್ಷಣಾ ಮಂಡಳಿಯನ್ನು ಸ್ಥಾಪಿಸಿದ ಕುರಿತು ಅಧಿಸೂಚನೆಯ ಮೂಲಕ ಅಂತಹ ಅಧಿಸೂಚನೆಯಲ್ಲಿ ನಮೂದಿಸಲಾದ ದಿನಾಂಕದಂದು "ಗ್ರಾಹಕ ರಕ್ಷಣಾ ಪರಿಷತ್ತ" ಎಂದು ಕರೆಯಲಾಗುವುದು.

**ಸದಸ್ಯತ್ವ:** ಜಿಲ್ಲಾ ಗ್ರಾಹಕ ಸಂರಕ್ಷಣಾ ಪರಿಷತ್ತು ಈ ಕೆಳಗೆ ಕಾಣಿಸಿದ ಸದಸ್ಯರನ್ನು ಒಳಗೊಂಡಿರಬೇಕು.

೧. ಕಲೆಕ್ಟರ್ ಅಥವಾ ಜಿಲ್ಲಾಧಿಕಾರಿ ಪರಿಷತ್‌ನ್ ಅಧ್ಯಕ್ಷರು ಆಗಿರಬೇಕು.

೨. ಆಸಕ್ತಿ ಹೊಂದಿದ ಸರ್ಕಾರೇತರ ಇಲ್ಲವೇ ಸರ್ಕಾರಿ ಸದಸ್ಯರು ಗೊತ್ತುಪಡಿಸಿದ ಸಂಖ್ಯೆಯಲ್ಲಿ ಇತರ ಸದಸ್ಯರು ಇರಬೇಕು. ಜಿಲ್ಲಾ ಗ್ರಾಹಕ ರಕ್ಷಣಾ ಪರಿಷತ್ತು ಪ್ರತಿವರ್ಷ ಎರಡು ಸಲ ಸಭೆಗಳನ್ನು ಕರೆಯಬೇಕು. ಜಿಲ್ಲಾ ಪರಿಷತ್ತಿನ ಅಧ್ಯಕ್ಷರಿಗೆ ಸೂಕ್ತವೆನಿಸಿದ ಸಮಯ ಹಾಗೂ ಸ್ಥಳದಲ್ಲಿ ಕಾರ್ಯಕಲಾಪ ಹಾಗೂ ವ್ಯವಹಾರ ಪ್ರಕ್ರಿಯೆ ನಡೆಸಬೇಕಾಗುತ್ತದೆ.

**ಜಿಲ್ಲಾ ಪರಿಷತ್ತಿನ ಉದ್ದೇಶಗಳು:**

ಕಲಂ ೮–ಬಿ ಗ್ರಾಹಕರ ಸಂರಕ್ಷಣಾ (ತಿದ್ದುಪಡಿ) ಅಧಿನಿಯಮ ೨೦೦೨ ರ ಅನ್ವಯ ಜಿಲ್ಲಾ ಪರಿಷತ್ ಉದ್ದೇಶಗಳು.

೧. ಗ್ರಾಹಕರಿಗೆ ತೊಂದರೆಯಾಗುವಂತಹ ಮಾರಾಟದ ವಸ್ತುಗಳ ಹಾಗೂ ಸೇವೆಯ ವಿರುದ್ಧ ಗ್ರಾಹಕರಿಗೆ ರಕ್ಷಣೆ ಕೊಡಿಸುವುದು.

೨. ಅನುಚಿತ ವ್ಯಾಪಾರ ಪದ್ಧತಿಯಲ್ಲಿ ಮಾರಾಟವಾಗುವ ವಸ್ತು ಮತ್ತು ಸೇವೆಗಳ ಗುಣಮಟ್ಟ ತೂಕ, ಬೆಲೆ ಮುಂತಾದವುಗಳ ಮಾಹಿತಿಯನ್ನು ಗ್ರಾಹಕರಿಗೆ ತಿಳಿಸಬೇಕು.

೩. ಬೇರೆ ಬೇರೆ ಮಾರುಕಟ್ಟೆಯ ವಸ್ತುಗಳ ಹಾಗು ಸೇವೆಯ ಸ್ಪರ್ಧಾತ್ಮಕ ಬೆಲೆಗಳ ಕುರಿತು ಮಾಹಿತಿಯನ್ನು ಒದಗಿಸುವ ವ್ಯವಸ್ಥೆಯನ್ನು ಮಾಡಬೇಕು.

೪. ಗಾಹಕರ ದೂರನ್ನು ಸ್ವೀಕರಿಸಲು ವೇದಿಕೆಯ ಮೊರೆ ಹೋಗಬೇಕು.

೫. ಅನುಚಿತ ವ್ಯಾಪಾರಿ ಪದ್ಧತಿ, ಪ್ರತಿಬಂಧಕ ವ್ಯಾಪಾರಿ ಪದ್ಧತಿಯ ಹಾಗೂ ವ್ಯಾಪಾರಸ್ಥರ ಜಾಣತನದ ಶೋಷಣೆಯ ವಿರುದ್ಧ ಗ್ರಾಹಕರಿಗೆ ಪರಿಹಾರ ಕೊಡಿಸಲು ಪ್ರಯತ್ನಿಸಬೇಕು.

೬. ಗ್ರಾಹಕ ಶಿಕ್ಷಣದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.[೮]

ಗ್ರಾಹಕ ಈಗ ಪಡೆದಿರುವ ಹಕ್ಕುಗಳನ್ನು ಬಳಸಲು ಬೇಕಾದ ಧೈರ್ಯ ಅವನಲ್ಲಿಲ್ಲ ಅದಕ್ಕಾಗಿ ಗ್ರಾಮ ಮಟ್ಟದಿಂದ ಗ್ರಾಹಕರನ್ನು ಎಚ್ಚರಿಸುವ ಕಾರ್ಯ ನಡೆಯಬೇಕಾಗಿದೆ. ಈ ಉದ್ದೇಶಕ್ಕಾಗಿಯೇ ಕೇಂದ್ರ ಗ್ರಾಹಕ ಕಲ್ಯಾಣ ನಿಧಿಯನ್ನು ಸ್ಥಾಪಿಸಿದೆ. ಈ ಮೂಲಕ ಜಾಗೃತಿಗಾಗಿ ಗ್ರಾಹಕ ಸಂಘಟನೆಗಳಿಗೆ ಅನುದಾನ ನೀಡಬೇಕೆಂದು ಶಾಸನ ಸಲಹೆ ಮಾಡಿದೆ. ಇದರೊಂದಿಗೆ ಗ್ರಾಹಕ ಪರಿಹಾರಕ್ಕಾಗಿ ಗ್ರಾಹಕ ಕೋರ್ಟುಗಳನ್ನು, ಜಿಲ್ಲಾ, ರಾಜ್ಯ, ಕೇಂದ್ರದ ಮಟ್ಟದಲ್ಲಿ ತೆರೆಯಬೇಕು. ಅಲ್ಲಿಗೆ ದಾಖಲಾದ ದೂರು ಅರ್ಜಿಗಳು, ೯೦ ದಿನಗೊಳಗಾಗಿ ಇತ್ಯರ್ಥವಾಗಬೇಕು. ಗ್ರಾಹಕನು ತನ್ನ ವಾದ ಮಂಡಿಸಲು ವಕೀಲರನ್ನು ನೇಮಿಸಿಕೊಳ್ಳುವ ಅಗತ್ಯವಿಲ್ಲ ತಾನೇ ವಾದವನ್ನು ಮಂಡಿಸಬಹುದು.

ಕೇಂದ್ರದಲ್ಲಿ ಗ್ರಾಹಕ ವ್ಯವಹಾರಕ್ಕೆ ಪ್ರತ್ಯೇಕ ಖಾತೆಯಿಲ್ಲ. ಅದು ಸಾರ್ವಜನಿಕ ಆಹಾರ ವಿತರಣೆಯ ಇಲಾಖೆಯೊಂದಿಗೆ ಸೇರಿದೆ. ರಾಜ್ಯದಲ್ಲಿ ಅದು ಸಾರ್ವಜನಿಕ ಆಹಾರ ವಿತರಣೆಯ ಇಲಾಖೆಯೊಂದಿಗೆ ಹೆಚ್ಚುವರಿಯಾಗಿ ಸೇರಿಕೊಂಡಿದೆ. ಎಲ್ಲಾ ಸಚಿವರಿಗೂ, ಅಧಿಕಾರಿಗಳಿಗೂ ಹೆಚ್ಚಿನ ಆಸಕ್ತಿಯಿರುವುದು ಗ್ರಾಹಕ ವ್ಯವಹಾರಗಳಲ್ಲಿ ಅಲ್ಲ, ಸಾರ್ವಜನಿಕ ಆಹಾರ ವಿತರಣೆಯಲ್ಲಿ ಮಾತ್ರ.

ಜನರು ವೇದಿಕೆಗೆ ದುಂಬಾಲು ಬಿದ್ದಾಗ ಗ್ರಾಹಕ ವ್ಯವಹಾರಗಳ ಇಲಾಖೆಯಲ್ಲಿ ಬಾಕಿ ಇರುವ ಕೆಲಸದ ಬಗ್ಗೆ ಮಾಹಿತಿಯನ್ನು ವೇದಿಕೆ ನೀಡಿದರೂ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ನಿಷ್ಕ್ರೀಯತೆ ಸರಿಹೋಗಿಲ್ಲ. ಕರ್ನಾಟಕ ರಾಜ್ಯದಲ್ಲಿ ರಾಜ್ಯ ಗ್ರಾಹಕ ರಕ್ಷಣಾ ಪರಿಷತ್ತು ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ. ನಮ್ಮ ರಾಜ್ಯಕ್ಕೆ ಕೇಂದ್ರ ಗ್ರಾಹಕ ಇಲಾಖೆಯಿಂದ ಅನುದಾನ ನಿರಂತರವಾಗಿ ಬರುತ್ತಿಲ್ಲ.[೯]

**೫.೭ ಶಾಲಾ ಗ್ರಾಹಕರ ಕ್ಲಬ್:**

ವಿದ್ಯಾರ್ಥಿಗಳು ಮತ್ತು ಶಿಕ್ಷಕರಲ್ಲಿ ಗ್ರಾಹಕರಿಗೆ ಸಂಬಂಧಿಸಿದ ವಿಷಯಗಳ ಅರಿವು ಮತ್ತು ಜಾಗೃತಿ ಮಂಡಿಸಲು ಪ್ರೌಢ ಶಾಲೆಗಳ ಹಂತದಲ್ಲಿ ಶಾಲಾ ಗ್ರಾಹಕ ಕ್ಲಬ್‌ಗಳನ್ನು ಪ್ರಾರಂಭಿಸಲಾಗಿದೆ. ಗ್ರಾಹಕ, ಗ್ರಾಹಕತ್ವ, ಗ್ರಾಹಕ ಚಳುವಳಿ, ಮತ್ತು ಗ್ರಾಹಕ ನ್ಯಾಯ ಸೇರಿದಂತೆ ಗ್ರಾಹಕ ವಿಷಯಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ವಿದ್ಯಾರ್ಥಿಗಳಿಗೆ ತಿಳುವಳಿಕೆ ದೊರೆಯಬೇಕು. ಆ ಮೂಲಕ ವಿದ್ಯಾರ್ಥಿಗಳು ಮುಂದೆ ಉತ್ತಮ ಗ್ರಾಹಕರಾಗಿ ಉತ್ತಮ ನಾಗರಿಕರಾಗಿ ಬದುಕಲು ಸಾಧ್ಯ. ಹಾಗೆಯೆ ಉತ್ತಮ ಗ್ರಾಹಕ ಸಮುದಾಯ ಸ್ಥಾಪನೆಗೆ

ನಾಂದಿಯಾಗಲಿದೆ. ಈ ಹಿನ್ನಲೆಯಲ್ಲಿ ಕೇಂದ್ರ ಸರ್ಕಾರದ ಆದೇಶದಂತೆ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ಗ್ರಾಹಕರ ಕ್ಲಬ್‌ಗಳನ್ನು ತೆರೆಯಲಾಗಿದೆ. ಶೈಕ್ಷಣಿಕ ದೃಷ್ಟಿಯಿಂದ ಶಾಲಾ ಗ್ರಾಹಕ ಕ್ಲಬ್‌ಗಳನ್ನು ತೆರೆಯುವ ಉದ್ದೇಶಗಳನ್ನು ಹಾಕಿಕೊಟ್ಟಿದೆ.

೧. ವಿದ್ಯಾರ್ಥಿಗಳಲ್ಲಿ ಗ್ರಾಹಕತ್ವದ ಅರಿವು ಮೂಡಿಸುವುದು.
೨. ವಿದ್ಯಾರ್ಥಿಗಳು ಗ್ರಾಹಕ ಚಟುವಟಿಕೆಯಲ್ಲಿ ಭಾಗವಹಿಸುವಂತೆ ಸಿದ್ದಪಡಿಸುವುದು.
೩. ಶಿಕ್ಷಕರು ಗ್ರಾಹಕ ವಿಷಯಗಳನ್ನು ಅರಿಯುವಂತೆ ಮಾಡುವುದು.
೪. ಶಾಲೆ ಗ್ರಾಹಕ ಶಿಕ್ಷಣದ ತಳಹದಿಯಾಗುವಂತೆ ಮಾಡುವುದು.
೫. ಗ್ರಾಹಕ ಕಾಯ್ದೆಯ ಅರಿವು ಮೂಡಿಸುವುದು.
೬. ಗ್ರಾಹಕ ಹಕ್ಕುಗಳ ತಿಳುವಳಿಕೆ ಮಾಡುವುದು.
೭. ಗ್ರಾಹಕ ಜವಾಬ್ದಾರಿಗಳಿಗೆ ಅರಿವು ಮೂಡಿಸುವುದು.
೮. ಗ್ರಾಹಕ ವಿವಾದಗಳ ಪರಿಹಾರ ಮಾರ್ಗ ತಿಳಿಸುವದು.
೯. ಗ್ರಾಹಕ ವಿಷಯಗಳನ್ನು ವ್ಯವಸ್ಥಿತವಾಗಿ ಪಠ್ಯ ಭಾಗವಾಗಿ ಅಧ್ಯಯನಿಸುವುದು.
೧೦. ಗ್ರಾಹಕ, ಗ್ರಾಹಕತ್ವ, ಗ್ರಾಹಕ ಚಳುವಳಿಗೆ ಶಕ್ತಿ ನೀಡುವದು.

**ಶಾಲಾ ಗ್ರಾಹಕ ಕ್ಲಬ್‌ಗಳ ಕಾರ್ಯಗಳು:**

ಶಾಲೆಗಳಲ್ಲಿ ಗ್ರಾಹಕ ಕ್ಲಬ್‌ಗಳನ್ನು ತೆರೆದಿರುವುದು ಹೊಸ ಮತ್ತು ವೈಶಿಷ್ಟ ಪೂರ್ಣ ಯೋಜನೆಯಾಗಿದೆ. ಶಾಲಾ ಗ್ರಾಹಕ ಕ್ಲಬ್‌ಗಳ ಮೂಲಕ ಇಡಿ ಶಾಲೆಯೇ ಗ್ರಾಹಕ ವಿಷಯಗಳ ಬಗ್ಗೆ ಚಿಂತನ ಮಂಥನ ಮಾಡಲು ಅವಕಾಶ ದೊರೆತಂತೆ ಆಗಿರುತ್ತದೆ ಇತಿಹಾಸದಲ್ಲಿ ಶಾಲಾಗ್ರಾಹಕ ಕ್ಲಬ್ ಯೋಜನೆಯಂತಹ ಕಾರ್ಯಕ್ರಮ ಅಪರೂಪ ಎನ್ನಬಹುದು ಮೇಲ್ನೋಟಕ್ಕೆ ಅನೌಪಚಾರಿಕ ಕಾರ್ಯಕ್ರಮವಾದರೂ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಇದು ಉತ್ತಮ ಕಾರ್ಯಯೋಜನೆ ಆಗಿದೆ. ಸರ್ಕಾರ ಶಾಲಾಕ್ಲಬ್‌ಗಳಿಗೆ ಆರ್ಥಿಕ ನೇರವು ನೀಡುತ್ತಿರುವುದುರಿಂದ ಕಾರ್ಯಕ್ರಮ ನಡೆಸಲು ಅನುಕೂಲವಾಗಿದೆ. ಶಾಲಾ ಗ್ರಾಹಕ ಕ್ಲಬ್‌ಗಳು ಕೈಗೊಳ್ಳಬಹುದಾದ ಗ್ರಾಹಕ ಕಾರ್ಯಕ್ರಮಗಳ ಬಗ್ಗೆ ಅಪಾರ ಗಮನ ಹರಿಸಿ ಮಾರ್ಗಸೂಚಿಗಳನ್ನು ಕೊಡಲಾಗಿದೆ. ಗ್ರಾಹಕ ವಿಷಯಗಳನ್ನು ಶೈಕ್ಷಣಿಕವಾಗಿ ಕಲಿಸುವುದರ ಜೊತೆಗೆ ಅನ್ವಯಿಕ ಕಾರ್ಯಕ್ರಮಗಳನ್ನು ಮಾಡುವುದು. ಭವಿಷ್ಯದ ದೃಷ್ಟಿಯಿಂದ ಅತ್ಯುತ್ತಮ ಶಾಲಾ ಗ್ರಾಹಕ ಕ್ಲಬ್‌ಗಳಲ್ಲಿ ಕೈಗೊಳ್ಳಹುದಾದ ಕಾರ್ಯಕ್ರಮಗಳನ್ನು ಆರು ಭಾಗಗಳಾಗಿ ವಿಂಗಡಿಸಲಾಗಿದೆ.

೧. ಗ್ರಾಹಕ ವಿಷಯಗಳ ಶೈಕ್ಷಣಿಕ ಅಧ್ಯಯನದ ಮನನ.

೨. ಅನ್ವಯಿಕ ಕಾರ್ಯಕ್ರಮಗಳು.

೩. ಗ್ರಾಹಕ ಸಮಾವೇಶಗಳು.

೪. ಗ್ರಾಹಕ ದಿನಾಚರಣೆಗಳು.

೫. ಗ್ರಾಹಕ ಶೈಕ್ಷಣಿಕ ಪ್ರವಾಸ.

೬. ಗ್ರಾಮೀಣ ಗ್ರಾಹಕ ಜಾಗೃತಿ.

**೧. ಗ್ರಾಹಕ ವಿಷಯಗಳ ಶೈಕ್ಷಣಿಕ ಅಧ್ಯಯನ ಮನನ:**

ಗ್ರಾಹಕ ವಿಷಯಗಳನ್ನು ಈ ಹಂತದಲ್ಲಿ ಪಠ್ಯವಾಗಿ ಔಪಚಾರಿಕವಾಗಿ ಅಧ್ಯಯನದಲ್ಲಿ ಕಷ್ಟ. ಆದರೆ ಗ್ರಾಹಕ ಪರ ವಿಷಯಗಳನ್ನು ಅನೌಪಚಾರಿಕವಾಗಿಯೇ ಅಕಾಡೆಮಿಕ್ ಆಗಿ ಚಿಂತಸಲು ಅಥವಾ ಮನನ ಮಾಡಲು ಸಾಧ್ಯವಿದೆ. ಆದ್ದರಿಂದ ಶಿಕ್ಷಕರು ಮುತುವರ್ಜಿ ವಹಿಸಿ ಅವಕಾಶ ಮಾಡಿಕೊಂಡು ಮಕ್ಕಳಿಗೆ ಗ್ರಾಹಕ ವಿಷಯಗಳ ಬೋಧನೆ, ಚರ್ಚೆ, ತರಬೇತಿ ನೀಡಲು ಮುಂದಾಗಬೇಕು. ಶೈಕ್ಷಣಿಕವಾಗಿ ಗ್ರಾಹಕ ವಿಷಯಗಳನ್ನು ಬೋಧಿಸಲು ಕೆಳಕಂಡ ಕಾರ್ಯಯೋಜನೆಗಳನ್ನು ಅಳವಡಿಸಬಹುದು.

೧. ಗ್ರಾಹಕ ವಿಷಯಗಳ ಸಾಹಿತ್ಯ ಖರೀದಿ.

೨. ಗ್ರಾಹಕ ವಿಷಯಗಳ ಉಪನ್ಯಾಸ.

೩. ಗ್ರಾಹಕ ವಿಷಯಗಳ ಕಾರ್ಯಾಗಾರ.

೪. ಗ್ರಾಹಕ ವಿಷಯಗಳ ಚರ್ಚೆ, ವಿಚಾರ ಸಂಕಿರಣ.

೫. ಗ್ರಾಹಕ ವಿಷಯಗಳ ಪ್ರಬಂಧ ಲೇಖನ.

೬. ಗ್ರಾಹಕ ಕಾಯ್ದೆ ನಿಯಮಗಳ ಅಧ್ಯಯನ.

**೨. ಅನ್ವಯಿಕ ಕಾರ್ಯಕ್ರಮಗಳು:**

ಗ್ರಾಹಕ ವಿಷಯಗಳ ಪ್ರಾಯೋಗಿಕ ಕಾರ್ಯಕ್ರಮಗಳನ್ನು ನಡೆಸುವುದು ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಉತ್ತಮ ಪ್ರಭಾವ ಬೀರುತ್ತದೆ. ಪುಸ್ತಕ ಓದಿನಿಂದ ದೊರಕದ ಜ್ಞಾನ ಪ್ರಯೋಗಿಕ ಹಾಗೂ ಅನ್ವಯಿಕ ಕಾರ್ಯಕ್ರಮದಿಂದ ಸಿಗುತ್ತದೆ. ಆದ ಕಾರಣ ಈ ಕೆಳಗಿನ ಪ್ರಮುಖ ಕಾರ್ಯಕ್ರಮಗಳನ್ನು ಶಾಲೆಗಳಲ್ಲಿ ಹಮ್ಮಿಕೊಳ್ಳಬೇಕು.

೧. ಗ್ರಾಹಕ ಸಾಹಿತ್ಯ ರಚಿಸುವುದು.

೨. ನೃತ್ಯ, ನಾಟಕ, ಪ್ರಹಸನ ಮತ್ತು ಪ್ರದರ್ಶನ.

೩. ಚಿತ್ರ, ಭಿತ್ತಿ ಚಿತ್ರ ರಚನೆ.

೪. ಶಾಲಾ ಗ್ರಾಹಕ ಪತ್ರಿಕೆ ಮ್ಯಾಗಜಿನ್ ಪ್ರಕಟಣೆ.

೫. ವಸ್ತು ಪ್ರದರ್ಶನ.

೬. ಉತ್ತಮ ಸರಕು ಸೇವೆಗಳ ಮಾದರಿ ತಯಾರಿಕೆ.

೭. ಕಲಬೆರಕೆ ಪತ್ತೆ ಪ್ರಯೋಗ ನಡೆಸುವುದು.

೮. ಗ್ರಾಹಕ ಮಾದರಿ ನ್ಯಾಯಾಲಯ ನಡೆಸುವುದು.

**೩ ಗ್ರಾಹಕ ಸಮಾವೇಶಗಳು:**

ಶಾಲಾ ಗ್ರಾಹಕ ಕ್ಲಬ್‌ಗಳ ಹಂತದಲ್ಲೂ ಗ್ರಾಹಕ ಸಮಾವೇಶಗಳನ್ನು ನಡೆಸುವ ಮೂಲಕ ವಿದ್ಯಾರ್ಥಿಗಳು ಸಾಮೂಹಿಕವಾಗಿ ಗ್ರಾಹಕ ವಿಷಯಗಳನ್ನು ಅರಿಯಲು, ಚರ್ಚಿಸಲು ಮತ್ತು ವಿನಿಮಯ ಮಾಡಿಕೊಡಲು ಸಾಧ್ಯವಿದೆ. ಇಂಥ ಸಮಾವೇಶಗಳು ಶಾಲಾಮಟ್ಟದಲ್ಲಿ,ಅಂತರ ಶಾಲೆ ಅಥವಾ ತಾಲೂಕಾ ಹಾಗೂ ಜಿಲ್ಲಾ ಮಟ್ಟದಲ್ಲಿ ನಡೆಸಬಹುದು. ಸಮಾವೇಶಗಳು ನಿಯಮಿತವಾಗಿ ವಾರ್ಷಿಕ ಅಥವಾ ಅರ್ಧವಾರ್ಷಿಕವಾಗಿ ನಡೆದರೆ ವಿದ್ಯಾರ್ಥಿಗಳಿಗೆ ಈ ಬಗ್ಗೆ ಪೂರ್ವ ಚಿಂತನೆಗೆ ಅವಕಾಶವಿರುತ್ತದೆ. ಜೊತೆಗೆ ವಿಷಯಾಧಾರಿತ ಸಮಾವೇಶಗಳನ್ನು ನಡೆಸಬೇಕು. ಗ್ರಾಹಕ ಹಕ್ಕುಗಳು, ಗ್ರಾಹಕ ನ್ಯಾಯ, ಗ್ರಾಹಕ ಶಿಕ್ಷಣದಲ್ಲಿ ವಿದ್ಯಾರ್ಥಿಗಳ ಪಾತ್ರ, ಕಲಬೆರೆಕೆ, ಗ್ರಾಹಕರಿಗೆ ಆಗುವ ವಂಚನೆ, ಗ್ರಾಹಕ ಕಾನೂನುಗಳು ಮುಂತಾದ ವಿಷಯಗಳನ್ನು ಆಯ್ಕೆ ಮಾಡಿ ಸಮಾವೇಶ ನಡೆಸುತ್ತಾರೆ.

**೪) ಗ್ರಾಹಕ ದಿನಾಚರಣೆ :** ಮಾರ್ಚ ೧೫, ವಿಶ್ವ ಗಾಹಕ ದಿನಾಚರಣೆ ಹಾಗೂ ಡಿಸೆಂಬರ ೨೪ ರಾಷ್ಟ್ರೀಯ ಗ್ರಾಹಕ ದಿನಾಚಾರಣೆ ಆಚರಿಸುತ್ತಾರೆ. ಜೊತೆಗೆ ಶಾಲೆಗಳಲ್ಲಿ ಸಾಂಸ್ಕೃತಿಕ ವೇದಿಕೆಗಳ ಉದ್ಘಾಟನೆ ಮತ್ತು ಸಮಾರೋಪ ಕಾರ್ಯಕ್ರಮ ನಡೆಸುವಂತೆ ಗ್ರಾಹಕ ಕ್ಲಬ್‌ಗಳ ವಾರ್ಷಿಕ ಕಾರ್ಯಕ್ರಮಗಳ ಉದ್ಘಾಟನೆ ಮತ್ತು ಸಮಾರೋಪ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು. ಈ ಸಮಾರಂಭಗಳಿಗೆ ಪರಿಣಿತ ಅಧಿಕಾರಿ/ಉಪನ್ಯಾಸಕರನ್ನು ಆಹ್ವಾನಿಸಿ ಉಪನ್ಯಾಸ ಕೊಡಿಸುತ್ತಾರೆ. ಜೊತೆಗೆ ಶಾಲಾ ಕ್ಲಬ್‌ನ ವಾರ್ಷಿಕ ಕಾರ್ಯಕ್ರಮಗಳ ಬಗ್ಗೆ ವರದಿ ತಯಾರಿಸಲು ಮತ್ತು ವಿದ್ಯಾರ್ಥಿಗಳು ಅನೇಕ ಚಟುವಟಿಕೆ ನಡೆಸಲು ಅವಕಾಶ ದೊರೆಯುತ್ತದೆ. ಈ ಕಾರ್ಯಕ್ರಮದ ಮೂಲಕ ಶಾಲೆಗಳಲ್ಲಿ ಗ್ರಾಹಕ ವಿಷಯಗಳ ನಿರಂತರ ಚಟುವಟಿಕೆ ನಡೆಸಲಾಗುತ್ತದೆ. ಜೊತೆಗೆ ಶಾಲಾ ಗ್ರಾಹಕ ಚಟುವಟಿಕೆಗಳಿಗೆ ವೇಳಾಪಟ್ಟಿ ತಯಾರಿಸಲಾಗುವುದು, ಜೊತೆಗೆ ವಿಶ್ವ ಮಾನವ ಹಕ್ಕು ದಿನಾಚರಣೆ ಶಾಲೆಗಳಲ್ಲಿ ಆಚರಿಸುವುದರ ಮೂಲಕ ಆಯಾ ವಿಷಯಗಳ ಕುರಿತು ಅರಿಯುವಂತಾಗುತ್ತದೆ.

**೫. ಗ್ರಾಹಕ ಶೈಕ್ಷಣಿಕ ಪ್ರವಾಸ:**

ಶಾಲಾ ಗ್ರಾಹಕ ಕ್ಲಬ್‌ಗಳಿಗೆ ನೀಡಿರುವ ಅನುದಾನ ಅಥವಾ ಶಾಲಾ ಅನುದಾನ ಮೂಲಕ ಈ ವಿದ್ಯಾರ್ಥಿಗಳಿಗೆ ಗ್ರಾಹಕ ಶೈಕ್ಷಣಿಕ ಪ್ರವಾಸ ಏರ್ಪಡಿಸಬಹುದು. ಪ್ರಸಿದ್ಧ ಪ್ರವಾಸಿ ಕೇಂದ್ರಗಳು ಕಾರ್ಖಾನೆಗಳು, ವ್ಯಾಪಾರಿ ಕೇಂದ್ರಗಳು, ಪ್ರಸಿದ್ಧ ನಗರ, ಗ್ರಾಮಗಳಿಗೆ, ಪ್ರವಾಸ ಏರ್ಪಡಿಸುವುದು. ಇದರಿಂದ ಉತ್ಪಾದನೆ, ವ್ಯಾಪಾರ ಸೌಲಭ್ಯ ಮುಂತಾದವುಗಳ ಕುರಿತು ಮಕ್ಕಳಿಗೆ ತಿಳಿಸಬಹುದು. ವಸ್ತುಗಳ ಗುಣಮಟ್ಟ, ಬೆಲೆ ಮುಂತಾದವುಗಳು ಅರಿವಿಗೆ ಬರುತ್ತದೆ. ಈ ರೀತಿಯ ಪ್ರವಾಸದಿಂದ ವಿದ್ಯಾರ್ಥಿಗಳು ಪ್ರವಾಸೋದ್ಯಮ, ಉತ್ಪಾದನೆ, ವ್ಯಾಪಾರ ವಹಿವಾಟು, ಖರೀದಿ ಮುಂತಾದವುಗಳನ್ನು ತೌಲನಿಕ ಅದ್ಯಯನ ಮಾಡಲು ಸಾಧ್ಯವಾಗುತ್ತದೆ.

**೬. ಗ್ರಾಮೀಣ ಗ್ರಾಹಕ ಜಾಗೃತಿ:**

ಶಾಲಾ ಗ್ರಾಹಕ ಕ್ಲಬ್‌ಗಳು ಮಾಡಬಹುದಾದ ಬಹುದೊಡ್ಡ ಕೆಲಸವೆಂದರೆ ಗ್ರಾಮೀಣ ಜನತೆಗೆ ಗ್ರಾಹಕ ವಿಷಯಗಳ ಬಗ್ಗೆ ಜಾಗೃತಿ ಮೂಡಿಸುವುದಾಗಿದೆ. ಈ ಉದ್ದೇಶಕ್ಕಾಗಿ ಶಾಲೆಗಳು ಗ್ರಾಮಗಳಿಗೆ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬಹುದು.

೧. ಗ್ರಾಮ ಸಂದರ್ಶನ ಮಾಡುವುದು.

೨. ಕರಪತ್ರ ಹಾಗು ಬಿತ್ತಿ ಪತ್ರ ಹಂಚುವುದು.

೩. ಗ್ರಾಹಕ ಸಭೆ ನಡೆಸುವುದು.

೪. ಗ್ರಾಹಕ ಪಂಚಾಯತಿ ಕಾರ್ಯಕ್ರಮ.

೫. ಪ್ರಾತ್ಯಕ್ಷಿಕ/ವಸ್ತು ಪ್ರದರ್ಶನ ಏರ್ಪಡಿಸುವುದು.

೬. ಬೀದಿ ನಾಟಕಗಳನ್ನು ಏರ್ಪಡಿಸುವುದು.

೭. ಜಾಗೃತಿ ಗೀತೆಗಳ ಗಾಯನ ಹಾಗು ನೃತ್ಯ.

೮. ಜನರೊಂದಿಗೆ ವಿಚಾರ ವಿನಿಮಯ ಮಾಡುವುದು.

೯. ಕಾನೂನಿನ ಅರಿವು ಮೂಡಿಸುವುದು.

**ಗ್ರಾಹಕ ಕ್ಲಬ್‌ಗಳಿಗೆ ನೆರವು:**

೧. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಯೋಜನೆಯಂತೆ ಈಗ ಶಾಲೆಗಳಲ್ಲಿ ಸ್ಥಾಪಿಸಿರುವ ಶಾಲಾ ಗ್ರಾಹಕ ಕ್ಲಬ್‌ಗಳು ನಿಯಮಿತವಾಗಿ ಮತ್ತು ನಿರಂತರವಾಗಿ ಕಾರ್ಯಕ್ರಮ ರೂಪಿಸಿ ಅನುಷ್ಠಾನಗೊಳಿಸಲು ೨೦೦೭-೦೮ ನೇ ಸಾಲಿನ ಪ್ರತಿ ಶಾಲಾ ಕ್ಲಬ್‌ಗಳಿಗೆ ರೂ ೧೦,೦೦೦

ಗಳಷ್ಟು ನೆರವು ನೀಡಲಾಗಿದೆ. ಇದರ ಜೊತೆಗೆ ಶಾಲಾಗ್ರಾಹಕ ಕ್ಲಬ್‌ಗಳ ಮಾರ್ಗಸೂಚಿಗಳಂತೆ ವಿದ್ಯಾರ್ಥಿಗಳಿಂದ ಸದಸ್ಯತ್ವ ಶುಲ್ಕವನ್ನು ರೂ ೧.೦೦ ರಂತೆ ಪಡೆದು ಆರ್ಥಿಕ ಸಾಮರ್ಥ್ಯ ಹೆಚ್ಚಿಸಿಕೊಳ್ಳಬಹುದು.

೨. ಜೊತೆಗೆ ಶಾಲಾ ಕ್ಲಬ್‌ಗಳು ಉತ್ತಮವಾಗಿ ಕೆಲಸ ನಿರ್ವಹಿಸಲು ನೆರವಾಗಲು ಗ್ರಾಹಕ ಚಿಂತನೆಯಲ್ಲಿ ತೊಡಗಿರುವ ಸ್ವಯಂ ಸೇವಾಸಂಸ್ಥೆಯನ್ನು "ನೋಡಲ್ ಏಜೆನ್ಸಿಯಾಗಿ" ನೇಮಿಸಿಕೊಳ್ಳಬಹುದು. ಈ ಏಜೆನ್ಸಿಯು ಶಾಲಾ ಕ್ಲಬ್‌ಗಳಿಗೆ ಮಾರ್ಗದರ್ಶನ ನೀಡುವುದರ ಜೊತೆಗೆ ಕ್ಲಬ್‌ಗಳ ಕಾರ್ಯನಿರ್ವಹಣೆ, ಅನುದಾನ ಬಳಕೆ ಲೆಕ್ಕಪತ್ರ ನಿರ್ವಹಣೆ ಮುಂತಾದವುಗಳನ್ನು ಪರಿಶೀಲಿಸಲಾಗುವುದು. ಈ ಏಜೆನ್ಸಿ ಸಮನ್ವಯ ಅಥವಾ ನೋಡಲ್ ಏಜೆನ್ಸಿಯಾಗಿ ಸರ್ಕಾರ ಮತ್ತು ಕ್ಲಬ್‌ಗಳ ನಡುವೆ ಕೆಲಸ ನಿರ್ವಹಿಸಲಿದೆ.

೩. ಉತ್ತಮವಾಗಿ ಕೆಲಸ ನಿರ್ವಹಿಸುತ್ತಿರುವ ಶಾಲಾ ಕ್ಲಬ್‌ಗಳಿಗೆ ವಿಶೇಷ ನೆರವು ಹಾಗು ಬಹುಮಾನಗಳನ್ನು ವಿತರಿಸಲಾಗುವುದು.

೪. ಈ ರೀತಿಯಾಗಿ ತಮ್ಮ ಕಾರ್ಯ ಚಟುವಟಿಕೆ ಮೂಲಕ ಶಾಲಾ ಕ್ಲಬ್‌ಗಳು ಸಂಪನ್ಮೂಲ ಕ್ರೋಢೀಕರಿಸಿ, ಕಾರ್ಯಕ್ರಮ ರೂಪಿಸಿಕೊಂಡು ಪರಿಣಾಮಕಾರಿಯಾಗಿ ಮತ್ತು ಪಾರದರ್ಶಕವಾಗಿ ಕೆಲಸ ನಿರ್ವಹಿಸಲು ಸುಲಭವಾಗುತ್ತದೆ.[೧೦]

ಕೇಂದ್ರ ಸರ್ಕಾರ ಎಲ್ಲ ಪ್ರೌಢಶಾಲೆಗಳಲ್ಲಿ ಗ್ರಾಹಕ ಕ್ಲಬ್‌ಗಳನ್ನು ತೆರೆದು ತಳಮಟ್ಟದಲ್ಲಿ ಗ್ರಾಹಕ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕೆ ೨೦೦೩-೦೪ ರಲ್ಲಿ ಆಯುಕ್ತರ ಕಛೇರಿ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಬೆಂಗಳೂರು ಇವರು ಎಲ್ಲ ಜಿಲ್ಲೆಗಳ ಇಲಾಖೆಗೆ ಸುತ್ತೋಲೆ ಹೊರಡಿಸಿತ್ತು. ತಮಿಳುನಾಡಿನಲ್ಲಿ ಸ್ವಲ್ಪಮಟ್ಟಿನ ಆಸಕ್ತಿ ಅಲ್ಲಿನ ರಾಜ್ಯ ಸರ್ಕಾರ ತೋರಿದೆ. ಅಲ್ಲಿನ ಹೆಚ್ಚಿನ ಎಲ್ಲಾ ಪ್ರೌಢಶಾಲೆಗಳಲ್ಲೂ ಗ್ರಾಹಕ ಕ್ಲಬ್‌ಗಳನ್ನು ತೆರೆದು ತಳಮಟ್ಟದಲ್ಲಿ ಗ್ರಾಹಕ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಮಾಡಲಾಗಿದೆ.[೧೧]

**೫.೮ ಗ್ರಾಹಕರ ಅದಾಲತ್:**

ಗ್ರಾಹಕರ ಅದಾಲತ್‌ಗಳ ಮುಲಕ ಗ್ರಾಹಕರು ಗ್ರಾಹಕರ ವಿವಾದಗಳನ್ನು ಬಗೆಹರಿಸಿಕೊಳ್ಳಲು ಸಾಧ್ಯವಾಗುತ್ತದೆ. ಮುಖ್ಯವಾಗಿ ಗ್ರಾಮಿಣ ಪ್ರದೇಶದ ಗ್ರಾಹಕರಿಗೆ ಲಭ್ಯವಿರುವ ಹಕ್ಕುಗಳು ಮತ್ತು ಜವಾಬ್ದಾರಿಗಳ ಕುರಿತು ತಿಳುವಳಿಕೆ ನೀಡಲು ಈ ಅದಾಲತ್‌ಗಳನ್ನು ಹಮ್ಮಿಕೊಳ್ಳಲಾಗುವುದು. ಗ್ರಾಹಕರ ಬಗ್ಗೆ ಅವರ ಹಕ್ಕುಗಳ ಕುರಿತು ಆಸಕ್ತಿ ಇರುವ ಸ್ವಯಂ ಸೇವಾ ಸಂಸ್ಥೆಗಳು ಈ ಅದಾಲತ್‌ಗಳನ್ನು ಹಮ್ಮಿಕೊಳ್ಳುತ್ತವೆ. ಸ್ವಯಂ ಸೇವಾ ಸಂಸ್ಥೆಗಳ ಜೊತೆ ರಾಜ್ಯ ಸರ್ಕಾರದ ವಿವಿಧ

ಇಲಾಖೆಗಳು ಕೈ ಜೋಡಿಸುತ್ತವೆ. ಆದ್ದರಿಂದ ಈ ಗ್ರಾಹಕ, ಅದಾಲತ್‌ಗಳನ್ನು, ಗ್ರಾಹಕ ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಸರ್ಕಾರದ ವಿವಿಧ ಇಲಾಖೆಗಳು ನಡೆಸಿಕೊಡುತ್ತವೆ. ಗ್ರಾಹಕರ ಅದಾಲತ್‌ಗಳನ್ನು

೧. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಗ್ರಾಹಕ ಅದಾಲತ್.

೨. ತಾಲೂಕಾ ಮಟ್ಟದಲ್ಲಿ ತಾಲುಕು ಗ್ರಾಹಕ ಅದಾಲತ್.

೩. ಹೋಬಳಿ ಮಟ್ಟದಲ್ಲಿ ಹೋಬಳಿ ಗ್ರಾಹಕ ಅದಾಲತ್.

೪. ಗ್ರಾಮ ಮಟ್ಟದಲ್ಲಿ ಗ್ರಾಮ ಗ್ರಾಹಕ ಅದಾಲತ್‌ಗಳನ್ನು ಹಮ್ಮಿಕೊಳ್ಳಲಾಗುತ್ತದೆ.

ಗ್ರಾಹಕರ ಅದಾಲತ್‌ನಲ್ಲಿ ಸಾಮಾನ್ಯವಾಗಿ ಈ ಕೆಳಗಿನ ದೂರುಗಳನ್ನು ಸ್ವೀಕರಿಸುತ್ತಾರೆ. ನಂತರ ತ್ವರಿತಗತಿಯಲ್ಲಿ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲಾಗುತ್ತದೆ.[೨]

೧. ಯಾವುದೇ ವಸ್ತುಗಳ ಖರೀದಿಯಲ್ಲಿನ ದೋಷ ಮತ್ತು ಸೇವೆಗಳಲ್ಲಿನ ಕೊರತೆಗಳ ಬಗ್ಗೆ ಸಂಬಂಧಿಸಿದ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ದೂರು ಸಲ್ಲಿಸಿ ಪರಿಹಾರ ಪಡೆದುಕೊಳ್ಳಬಹುದು.

೨. ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸುತ್ತಿರುವ ಪಡಿತರ ಪದಾರ್ಥಗಳನ್ನು ಸರ್ಕಾರ ನಿಗದಿಪಡಿಸಿದ ಪ್ರಮಾಣ ಮತ್ತು ದರಗಳಲ್ಲಿಯೇ ಗ್ರಾಹಕರು ಪಡೆಯುತ್ತಾರೆ. ವ್ಯತ್ಯಾಸವಾದರೆ ಗ್ರಾಮಾಂತರ ಪ್ರದೇಶದಲ್ಲಿ ತಾಲೂಕಾ ತಹಸಿಲ್ದಾರರು ಇಲ್ಲವೆ ಜಿಲ್ಲೆಗಳ ಉಪನಿರ್ದೇಶಕರ ಕಛೇರಿಯನ್ನು ಸಂಪರ್ಕಿಸುತ್ತಾರೆ. ಪಡಿತರ ಪ್ರದೇಶದಲ್ಲಿ ವ್ಯತ್ಯಾಸವಾದರೆ ಸಂಬಂಧಿಸಿದ ವಲಯ ಉಪನಿರ್ದೇಶಕರಿಗೆ ದೂರು ಸಲ್ಲಿಸಿ ಪರಿಹಾರ ಪಡೆಯುತ್ತಾರೆ.

೩. ಕಲಬೆರಕೆ ಪೆಟ್ರೋಲ್ ಮತ್ತು ಡಿಸೇಲ್‌ಗಳ ಸರಬರಾಜು, ಅಡಿಗೆಯ ಅನಿಲದ ದುರ್ಬಳಕೆ ಹಾಗು ಕಾಳಸಂತೆಯಲ್ಲಿ ನೀಲಿ ಸೀಮೆಎಣ್ಣೆಯ ಮಾರಾಟವು ಕಾನೂನು ಬಾಹಿರ ಹಾಗೂ ದಂಡನಾರ್ಹ. ಇಂತಹ ಪ್ರಕರಣ ಕಂಡುಬಂದಲ್ಲಿ ಸಂಬಂಧಿಸಿದ ವಲಯದ ಇಲಾಖಾ ಉಪ ನಿರ್ದೇಶಕರಿಗೆ ದೂರು ಸಲ್ಲಿಸುವ ಮೂಲಕ ಸಹಕರಿಸಿ ಗ್ರಾಹಕರು ಪರಿಹಾರ ಪಡೆಯುತ್ತಾರೆ.

೪. ಅಡಿಗೆ ಅನಿಲ ಕೊಳ್ಳುವ ಮುನ್ನ ಸಿಲೆಂಡರ್‌ನ ಮುದ್ರೆ ಭದ್ರವಾಗಿರುವುದನ್ನು ಗ್ರಾಹಕರು ಖಚಿತಪಡಿಸಿಕೊಳ್ಳಬೇಕು. ಗೃಹ ಬಳಕೆ ಅನಿಲ ಸಿಲೆಂಡರ್‌ಗಳನ್ನು ಇತರೆ ಉದ್ದೇಶಗಳಿಗೆ ಬಳಸಿಕೊಳ್ಳುವುದು ಕಾನೂನು ಬಾಹಿರ ಹಾಗು ದಂಡನಾರ್ಹ.

೫. ಗ್ರಾಹಕರು ಅಡುಗೆ ಅನಿಲದ ಸಿಲಿಂಡರ್‌ಗಳನ್ನು ಅನಿಲ ವಿತರಕರ ಕಛೇರಿ ಅಥವಾ ಗೋದಾಮುಗಳಿಂದ ನೇರವಾಗಿ ಪಡೆಯಲಿಚ್ಛಿಸಿ ಇಂಡೆಮ್ನಿಟಿ ಬಾಂಡನಲ್ಲಿ ಪ್ರತಿ ಸಿಲೆಂಡರ್‌ಗೆ ರೂ ೮ ರಿಯಾಯತಿಗೆ ಅರ್ಹರಾಗಿರುತ್ತಾರೆ.

೬. ಖಾದ್ಯ ತೈಲಗಳ ಕಲಬರೆಕೆ ಹಾಗು ತೂಕದಲ್ಲಿನ ಮೋಸವನ್ನು ತಡೆಗಟ್ಟುವ ಉದ್ದೇಶದಿಂದ ಸರ್ಕಾರ ನಿಗದಿಪಡಿಸಿರುವ ವಿವಿಧ ಖಾದ್ಯ ತೈಲಗಳನ್ನು ಬಿಡಿಯಾಗಿ ಮಾರಾಟ ಮಾಡದೆ ಪ್ಯಾಕ್ ಮಾಡಿ ಪೊಟ್ಟಣಗಳಲ್ಲಿ ಮಾರಾಟ ಮಾಡುವುದು ಕಾನೂನಿನಲ್ಲಿ ಕಡ್ಡಾಯಗೊಳಿಸಿದೆ. ಅಂಥಹ ದೂರುಗಳನ್ನು ಗ್ರಾಹಕ ಅದಾಲತ್‌ನಲ್ಲಿ ಪರಿಹಾರ ಪಡೆಯಬಹುದು.

೭. ಪ್ಯಾಕ್ ಮಾಡಿದ ಯಾವುದೇ ಪದಾರ್ಥಗಳ ಮೇಲೆ ನಿಖರವಾದ ತೂಕ ಮತ್ತು ಗರಿಷ್ಠ ಮಾರಾಟ ಬೆಲೆ ಮುದ್ರಿಸುವುದು ಕಡ್ಡಾಯ ಮುದ್ರಿತ ಬೆಲೆಯನ್ನು ಮಾತ್ರ ಪಾವತಿಸಿ ಲೋಪ ಕಂಡುಬಂದಲ್ಲಿ ಗ್ರಾಹಕ ಅದಾಲತ್‌ನಲ್ಲಿ ದೂರು ಸಲ್ಲಿಸಿ ಪರಿಹಾರ ಪಡೆಯಬಹುದು.

ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಪ್ರಮುಖವಾಗಿ ಮುಂದೆ ಬಂದು ಹಮ್ಮಿಕೊಳ್ಳುವ ಈ ಗ್ರಾಹಕ ಅದಾಲತ್ ಕುರಿತು ಸಾಮಾನ್ಯ ಗ್ರಾಹರಿಗೆ ಗೊತ್ತಿಲ್ಲ. ತಮ್ಮದೆ ಕೆಲಸ ಕಾರ್ಯಗಳಲ್ಲಿ ಒತ್ತಡದಲ್ಲಿರುವ ಇಲಾಖೆ ಜಿಲ್ಲಾ ಮಟ್ಟದಲ್ಲಾಗಲಿ ತಾಲೂಕು ಮಟ್ಟದಲ್ಲಾಗಲಿ ಹೋಬಳಿ ಮಟ್ಟದಲ್ಲಾಗಲಿ, ಗ್ರಾಮ ಮಟ್ಟದಲ್ಲಾಗಲಿ ಈ ಅದಾಲತ್ ಕರ್ನಾಟಕದಲ್ಲಿ ಹಮ್ಮಿಕೊಳ್ಳುತ್ತಿಲ್ಲ. ಸಾಮಾನ್ಯ ಗ್ರಾಹಕರಿಗೆ ಗ್ರಾಹಕ ಅದಾಲತ್‌ನಿಂದ ಸಿಗುವ ತ್ವರಿತಗತಿಯ ಪರಿಹಾರ ಕರ್ನಾಟಕ ರಾಜ್ಯದಲ್ಲಿ ದೊರಕುವುದಿಲ್ಲ.[೧೩]

**೫.೯ ಆಹಾರ ಖಾತರಿ ಸಮಿತಿ:**

ಗ್ರಾಮೀಣ ಪ್ರದೇಶಗಳ ಪಡಿತರ ವಿತರಣಾ ವ್ಯವಸ್ಥೆಯನ್ನು ಗ್ರಾಮಪಂಚಾಯತಿಗಳು ಮೇಲ್ವಿಚಾರಣೆ ಮಾಡಿ ಸಾರ್ವಜನಿಕರಿಗೆ ನ್ಯಾಯ ದೊರಕಿಸಿಕೊಡಲು ಆಹಾರ ಖಾತರಿ ಸಮಿತಿ ರಚಿಸಲಾಗಿದೆ. ಈ ಖಾತರಿ ಸಮೀತಿಯಲ್ಲಿ ಐದು ಜನರು ಸದಸ್ಯರಾಗಿರುತ್ತಾರೆ. ಇದು ಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ನ್ಯಾಯ ಬೆಲೆ ಅಂಗಡಿಗಳ ಕಾರ್ಯನಿರ್ವಹಣೆ ಬಗ್ಗೆ ಪರಿಶೀಲಿಸುವ ಮತ್ತು ಪಡಿತರ ಚೀಟಿದಾರರಿಗೆ ಸರ್ಕಾರ ಬಯಸುವ ರೀತಿಯಲ್ಲಿ ಪಡಿತರ ಪದಾರ್ಥಗಳು ದೊರಕುವಂತೆ ಕೆಲಸ ಮಾಡುತ್ತದೆ.

ಆಹಾರ ಖಾತರಿ ಸಮಿತಿಯಡಿ ಒಂದು ಉಪ ಸಮೀತಿಯನ್ನು ರಚಿಸಲಾಗುತ್ತದೆ. ಈ ಸಮೀತಿಯಲ್ಲಿ ಕೆಳಕಂಡ ಸದಸ್ಯರು ಕಾರ್ಯನಿರ್ವಹಿಸುತ್ತಾರೆ.

೧. ಗ್ರಾಮ ಪಂಚಾಯತಿಯ ಸಾಮಾಜಿಕ ನ್ಯಾಯ ಸಮೀತಿಯ ಅಧ್ಯಕ್ಷರೆ ಈ ಸಮೀತಿಯ ಅಧ್ಯಕ್ಷರಾಗಿರುತ್ತಾರೆ.

೨. ಗ್ರಾಮ ಪಂಚಾಯತಿಯ ಪರಿಶಿಷ್ಟ ಜಾತಿಯ ಒಬ್ಬ ಸದಸ್ಯರು.

೩. ಗ್ರಾಮ ಪಂಚಾಯ್ತಿಯ ಪರಿಶಿಷ್ಟ ಪಂಗಡದ ಒಬ್ಬ ಸದಸ್ಯರು.

೪. ಗ್ರಾಮ ಪಂಚಾಯ್ತಿಯ ಒಬ್ಬ ಮಹಿಳಾ ಸದಸ್ಯರು.

೫. ಗ್ರಾಮ ಪಂಚಾಯ್ತಿಯ ಕಾರ್ಯದರ್ಶಿಗಳು ಇದಕ್ಕೆ ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.

ಗ್ರಾಮ ಪಂಚಾಯ್ತಿಯ ಅವಧಿಯು ಕೊನೆಗೊಂಡಾಗ ಈ ಸಮೀತಿಯ ಅವಧಿಯು ಮುಗಿಯುತ್ತದೆ.

ಗ್ರಾಮ ಪಂಚಾಯ್ತಿಯ ಪರಿಧಿಯಲ್ಲಿರುವ ನ್ಯಾಯಬೆಲೆ ಅಂಗಡಿ ಮೇಲ್ವಿಚಾರಣೆ ಮತ್ತು ನಿರ್ವಹಣೆಯ ಜವಾಬ್ದಾರಿಯು ಈ ಸಮೀತಿಯದಾಗಿರುತ್ತದೆ.

**ಖಾತರಿ ಸಮಿತಿಯ ಜವಾಬ್ದಾರಿಗಳು :**

೧. ನ್ಯಾಯಬೆಲೆ ಅಂಗಡಿಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆ.

೨. ನ್ಯಾಯಬೆಲೆ ಅಂಗಡಿಗಳಿಗೆ ಪ್ರತಿ ತಿಂಗಳು ಸರಬರಾಜು ಆಗುವ ಪಡಿತರ ಪದಾರ್ಥಗಳ ಪ್ರಮಾಣ ಪರಿಶೀಲನೆ.

೩. ಪಡಿತರ ಪದಾರ್ಥಗಳ ಗುಣಮಟ್ಟ ಪರಿಶೀಲನೆ.

೪. ಸರ್ಕಾರ ನಿಗದಿಪಡಿಸಿರುವ ಪ್ರಮಾಣದಲ್ಲಿ ಪಡಿತರ ವಿತರಣೆಗೆ ಕ್ರಮವಹಿಸುವುದು.

೫. ನಿಗಧಿ ಪಡಿಸಿರುವ ದರದಲ್ಲಿ ಪಡಿತರ ಪದಾರ್ಥಗಳನ್ನು ವಿತರಣೆ ಮಾಡುವುದು.

೬. ನಿಗಧಿಪಡಿಸಿರುವ ವೇಳೆಯಲ್ಲಿ ವಿತರಣೆ ಮಾಡುವಂತೆ ತಿಳಿಸುವುದು.

೭. ತೂಕ ಮತ್ತು ಅಳತೆಯಲ್ಲಿ ಆಗುವ ಅನ್ಯಾಯ ತಪ್ಪಿಸುವುದು.

೮. ಪಡಿತರ ಚೀಟಿದಾರರ ಅಹವಾಲುಗಳನ್ನು ಆಲಿಸಿ ನ್ಯಾಯ ದೊರಕಿಸುವುದು.

೯. ಅನರ್ಹರು ಹೊಂದಿರುವ ಬಿಪಿಎಲ್ ಕಾರ್ಡುಗಳ ಬಗ್ಗೆ ವರದಿ ಮಾಡುವುದು.

೧೦. ನ್ಯಾಯ ಬೆಲೆ ಅಂಗಡಿಗಳು ಹೊಂದಿರುವ ನಕಲಿ ಕಾರ್ಡುಗಳ ಬಗ್ಗೆ ವರದಿ ನೀಡುವುದು.[೧೪]

**೫.೧೦ ಆಹಾರ ಜಾಗೃತಿ ಸಮಿತಿ:**

ನ್ಯಾಯ ಬೆಲೆ ಅಂಗಡಿಗಳ ಮೇಲ್ವಿಚಾರಣೆ ಮತ್ತು ಪಡಿತರ ಗ್ರಾಹಕರ ಹಿತರಕ್ಷಣೆ ಮಾಡಲು ಆಹಾರ ಖಾತರಿ ಸಮಿತಿಗಳ ಜೊತೆ ಆಹಾರ ಜಾಗೃತಿ ಸಮಿತಿಯನ್ನು ರಚಿಸಲಾಗಿದೆ. ಪ್ರತಿ ನ್ಯಾಯ ಬೆಲೆ ಅಂಗಡಿಯ ಕಾರ್ಯನಿರ್ವಹಣೆಯ ಬಗ್ಗೆ ಪರಾಮರ್ಶೆ ಮಾಡಲು ಸಮೀತಿಗೆ ಅಧಿಕಾರವಿದೆ. ಗ್ರಾಮ ಮಟ್ಟದಲ್ಲಿ ಜಾಗೃತ ಸಮಿತಿಗಳು ಕಾರ್ಯ ನಿರ್ವಹಿಸಿದಲ್ಲಿ ವಿತರಣಾ ವ್ಯವಸ್ಥೆ ಫಲಕಾರಿಯಾಗುತ್ತದೆ.

ಭಾರತ ಸರ್ಕಾರವು ಹೊರಡಿಸಿದ ಮಾರ್ಗಸೂಚಿಗಳಂತೆ ಪ್ರತಿ ನ್ಯಾಯ ಬೆಲೆ ಅಂಗಡಿಗೆ ಈ ಕೆಳಗಂಡ ೭ ಜನ ಪಡಿತರ ಚೀಟಿದಾರರನ್ನು ಸದಸ್ಯನ್ನಾಗಿಸಿಕೊಂಡು ಒಂದು ಜಾಗೃತಿ ಸಮಿತಿಯನ್ನು ರಚಿಸುತ್ತಾರೆ.

೧. ಬಿ.ಪಿ.ಎಲ್ ಮತ್ತು ಅಂತ್ಯೋದಯ ಅನ್ನ ಯೋಜನೆ ಪಡಿತರ ಚೀಟಿಯ ೫ ಮಹಿಳಾ ಸದಸ್ಯರನ್ನು ಹೊಂದಿರತಕ್ಕದ್ದು ಇದರಲ್ಲಿ ಒಬ್ಬರು ಪರಿಶಿಷ್ಟ ಜಾತಿ ಹಾಗು ಒಬ್ಬರು ಪರಿಶಿಷ್ಟ ಪಂಗಡ ಮತ್ತು ಇಬ್ಬರು ಹಿಂದುಳಿದ ವರ್ಗದ ಸದಸ್ಯರು ಹಾಗು ಒಬ್ಬರು ಸಾಮಾನ್ಯ ವರ್ಗದವರು.

೨. ಸ್ಥಳೀಯವಾಗಿ ಚುನಾಯಿತ ಸದಸ್ಯರೊಬ್ಬರು.

೩. ಒಬ್ಬರು ಸಾಮಾಜಿಕ ಕಾರ್ಯಕರ್ತರು ಅಥವಾ ಸ್ಥಳಿಯ ಸ್ವಸಹಾಯ ಮಹಿಳಾ ಸ್ವಶಕ್ತಿ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀ ಶಕ್ತಿ ಗುಂಪಿನ ಮುಖ್ಯಸ್ಥರು ಅಥವಾ ಸದಸ್ಯರು. ಜಾಗೃತ ಸಮೀತಿಗಳು ಕನಿಷ್ಟ ೨ ತಿಂಗಳಿಗೊಮ್ಮೆ ಸಭೆ ಸೇರಿ ಈ ಕೆಳಕಂಡ ವಿಷಯಗಳ ಬಗ್ಗೆ ಪರಿಶೀಲನೆ ನಡೆಸಬೇಕಾಗುತ್ತದೆ.

೧ ನ್ಯಾಯ ಬೆಲೆ ಅಂಗಡಿಯವರು ನಿಗದಿತ ವೇಳೆಯಲ್ಲಿ ಬಾಗಿಲನ್ನು ತೆರೆದು ಪಡಿತರ ವಿತರಣೆ ಕಾರ್ಯವನ್ನು ನಿರ್ವಹಿಸುತ್ತಿರುವರೇ? ನಿಗದಿಪಡಿಸಿರುವ ಸಮಯದಂತೆ ಕಾರ್ಯ ನಿರ್ವಹಿಸುತ್ತಿರುವರೇ?.

೨ ನ್ಯಾಯ ಬೆಲೆ ಅಂಗಡಿ ಮಾಲೀಕರು ಪಡಿತರವನ್ನು ಸರಿಯಾಗಿ ಹಂಚುತ್ತಿದ್ದಾರೋ? ಇಲ್ಲವೋ.?

೩ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲಾಗುತ್ತಿರುವ ಆಹಾರದಾನ್ಯಗಳ ಗುಣಮಟ್ಟವು ತೃಪ್ತಿಕರವಾಗಿದೆಯೇ.?

೪ ನ್ಯಾಯ ಬೆಲೆ ಅಂಗಡಿಯವರು ಉಪಯೋಗಿಸುತ್ತಿರುವ ತೂಕ ಮತ್ತು ಅಳತೆಯ ಬೊಟ್ಟುಗಳನ್ನು ಅಳತೆ ಮತ್ತು ತೂಕ ಮಾಪನ ಇಲಾಖೆಯಿಂದ ದೃಢೀಕರಿಸಿಕೊಳ್ಳಲಾಗಿದೆಯೇ.?

೫ ನ್ಯಾಯ ಬೆಲೆ ಅಂಗಡಿ ವ್ಯಾಪ್ತಿಯ ಪಡಿತರ ಚೀಟಿದಾರರು ಪಡಿತರವನ್ನು ಪಡೆದುಕೊಳ್ಳುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳೇನಾದರೂ ಇದ್ದರೆ ಅಂತಹ ಸಮಸ್ಯೆಗಳ ಬಗ್ಗೆಯು ಪರಿಶೀಲಿಸುತ್ತಾರೆ.

೬ ನ್ಯಾಯ ಬೆಲೆ ಅಂಗಡಿಯವರು ಎಲ್ಲಾ ಮಾಹಿತಿಗಳನ್ನೊಳಗೊಂಡಂತೆ ಲಭ್ಯವಿರುವ ದಾಸ್ತಾನಿನ ದರ ಮತ್ತು ವಿತರಣಾ ಪ್ರಮಾಣ ಸೂಚಿಸುವ ವಿವರಗಳುಳ್ಳ ಫಲಕವನ್ನು ಹಾಗೂ ಪಡಿತರ ವಿತರಣೆಯ ಸಮಯವನ್ನು ಪ್ರದರ್ಶಿಸಿರುವರೆ.?

೭ ನ್ಯಾಯ ಬೆಲೆ ಅಂಗಡಿಗಳಲ್ಲಿನ ಲೋಪದೋಷಗಳು ಏನಾದರೂ ಇದ್ದಲ್ಲಿ ಅದರ ವರದಿಯನ್ನು ಸಮಿತಿಯ ಸದಸ್ಯರು ತಹಶೀಲ್ದಾರರಿಗೆ ಸಲ್ಲಿಸಲಾಗುತ್ತದೆ.

೮ ಸಮೀತಿಯು ನಡವಳಿ ಪುಸ್ತಕವನ್ನು ನಿರ್ವಹಿಸಬೇಕಾಗುತ್ತದೆ. ಸಮೀತಿ ಸಭೆ ನಡೆದ ಒಂದು ವಾರದೊಳಗೆ ಸಂಬಂಧಪಟ್ಟ ತಹಶಿಲ್ದಾರರಿಗೆ ವರದಿಯನ್ನು ಸಲ್ಲಿಸಬೇಕು.

೯ ಜಾಗೃತ ಸಮೀತಿಗಳ ಸಭೆಯನ್ನು ನಡೆಸಲು ನ್ಯಾಯಬೆಲೆ ಅಂಗಡಿಗಳ ಮಾಲಿಕರು ಎಲ್ಲಾ ರೀತಿಯ ಸಹಕಾರಗಳನ್ನು ನೀಡಬೇಕಾಗುತ್ತದೆ.[೧೫]

ಪ್ರಸ್ತುತ ರಾಜ್ಯದಲ್ಲಿ ೧೧,೯೯,೭೦೦ ಅಂತ್ಯೋದಯ ಅನ್ನ ಯೋಜನೆ ಫಲಾನುಭವಿಗಳಿಗೆ ತಿಂಗಳಿಗೆ ರೂ ೩ ಪ್ರತಿ ಕೆ.ಜಿ.ಯಂತೆ ಅಕ್ಕಿಯನ್ನು, ರೂ ೨ ಪ್ರತಿ ಕೆ.ಜಿ.ಯಂತೆ, ರೂ ೬ ಪ್ರತಿ ಕೆ.ಜಿಯಂತೆ ಗೋಧಿಯನ್ನು ಹಂಚಲಾಗುತ್ತದೆ.

೭೨.೪೫ ಲಕ್ಷ ಬಿ.ಪಿ.ಎಲ್. ಫಲಾನುಭವಿಗಳು ಇದ್ದು, ಇವರು ಇವರಿಗೂ ಅಕ್ಕಿಯನ್ನು ಗೋಧಿಯನ್ನು ವಿತರಿಸಲಾಗುತ್ತದೆ. ಇದರಿಂದಾಗಿ ರಾಜ್ಯ ಸರ್ಕಾರವು ೭೫೦ ಕೋಟಿ ರೂಪಾಯಿಗಳನ್ನು ಸಹಾಯ ಧನ ರೂಪದಲ್ಲಿ ಭರಿಸುತ್ತದೆ. ಇಷ್ಟೊಂದು ಪ್ರಮಾಣದ ಸಹಾಯಧನ ಯುಕ್ತ ಆಹಾರಧಾನ್ಯ ನೈಜ ಫಲಾನುಭವಿಗಳಿಗೆ ಸರ್ಕಾರ ನಿಗಧಿಪಡಿಸಿದ ದರದಲ್ಲಿ, ನಿಗಧಿಪಡಿಸಿದ ಪ್ರಮಾಣದಲ್ಲಿ, ತಲುಪಿಸುವ ವ್ಯವಸ್ಥೆಯ ಅಂತಿಮ ಹಂತ ನ್ಯಾಯಬೆಲೆ ಅಂಗಡಿಗಳದ್ದಾಗಿರುತ್ತದೆ. ಪ್ರಸ್ತುತ ೨೦೫೫೫ ನ್ಯಾಯಬೆಲೆ ಅಂಗಡಿಗಳಿದ್ದು ಇವುಗಳಿಗೆ ಬಹುತೇಕ ಅಂಗಡಿಗಳಿಗೆ ಜಾಗೃತ ಸಮೀತಿಗಳನ್ನು ರಚಿಸಲಾಗಿದೆ. ಇವುಗಳಲ್ಲಿ ೫೦೬೬ ಸಮೀತಿಗಳು ರಚಿಸಲಾಗಿದೆ. ಇವುಗಳಲ್ಲಿ ಎಲ್ಲ ಗ್ರಾಹಕ ಜಾಗೃತ ಸಮಿತಿಗಳು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸದೆ ಇರುವುದರಿಂದ ಗ್ರಾಮ ಪಂಚಾಯತಿಯು ಆಹಾರ ಭದ್ರತಾ ಸಮೀತಿಗಳು ಮೇಲ್ವಿಚಾರಣೆ ನಡೆಸಬೇಕಾದ ಅಗತ್ಯವಿರುತ್ತದೆ.

ರಾಜ್ಯದಲ್ಲಿ ೫೪೬೧ ಗ್ರಾಮ ಪಂಚಾಯತಿಗಳಿದ್ದು ೪೯೧೯ ಆಹಾರ ಭದ್ರತಾ ಸಮೀತಿಗಳು ರಚಿತವಾಗಿರುತ್ತವೆ. ಇವುಗಳಲ್ಲಿ ಅಗಸ್ಟ ೨೦೦೭ ರಲ್ಲಿ ೨೭೫ ಸಮೀತಿಗಳು ಸಪ್ಟೆಂಬರನಲ್ಲಿ ೪೨೫ ಸಮಿತಿಗಳು ಸಭೆ ನಡೆಸಿರುತ್ತವೆ. ಆದುದರಿಂದ ತಮ್ಮ ವ್ಯಾಪ್ತಿಯಲ್ಲಿನ ಗ್ರಾಮ ಪಂಚಾಯತಿಗಳ ಸಾಮಾಜಿಕ ನ್ಯಾಯ ಸಮೀತಿಯು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಂತೆ ಮಾಡಲು ಮತ್ತು ಆಹಾರ ಭದ್ರತಾ ಸಮೀತಿ ಸಭೆಗಳನ್ನು ನಿಯಮಿತವಾಗಿ ನಡೆಸಲು ಕ್ರಮ ಕೈಗೊಳ್ಳಬೇಕು. ಈ ಮಹತ್ವದ ಕಾರ್ಯದಲ್ಲಿ ಗ್ರಾಮಪಂಚಾಯತಿಗಳ ಜವಾಬ್ದಾರಿ ಹೆಚ್ಚಿನದಾಗಿದ್ದು, ಕಡು ಬಡವರಿಗೆ ತಲಿಪಿಸುವ ಆಹಾರಧಾನ್ಯ ಲೋಪವಾಗದಂತೆ ತಲುಪಿಸುವ ವ್ಯವಸ್ಥೆ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.[೧೬]

**೫.೧೧ ಸರಕಾರಿ ಇಲಾಖೆಗಳ ಕಾರ್ಯ ವಿಶ್ಲೇಷಣೆ:**

**೧. ಕಾನೂನು ಮಾಪನಶಾಸ್ತ್ರ ಇಲಾಖೆ:**

ಕರ್ನಾಟಕದಲ್ಲಿ ಹದಿನಾಲ್ಕು ಸೆಕೆಂಡರಿ ಸ್ಟ್ಯಾಂಡರ್ಡ ಲ್ಯಾಬೋರೆಟರಿಗಳಲ್ಲಿ, ಸೆಕೆಂಡರಿ ಸ್ಟ್ಯಾಂಡರ್ಡ ಮಾನಕಗಳನ್ನು ಇಟ್ಟು ನಿರ್ವಹಣೆ ಮಾಡಲಾಗುತ್ತದೆ. ರಾಜ್ಯದ ಕಾನೂನು ಮಾಪನ ಶಾಸ್ತ್ರ ನಿರೀಕ್ಷಕರು ಸಹಾಯಕ ನಿಯಂತ್ರಕರ ಕಛೇರಿಗಳಲ್ಲಿ ವರ್ಕಿಂಗ ಸ್ಟ್ಯಾಂಡರ್ಡಗಳನ್ನು ಪ್ರಯೋಗಶಾಲೆಗಳಲ್ಲಿ ಇಟ್ಟು ಜೋಪಾನ ಮಾಡಲಾಗಿದೆ. ಗ್ರಾಹಕರು ವ್ಯವಹರಿಸುವ ಅವಶ್ಯ ದೈನಂದಿನ ವ್ಯವಹಾರ ವಹಿವಾಟಿನಲ್ಲಿ ಉಪಯೋಗಿಸಲ್ಪಡುವ ತೂಕ ಅಳತೆಗಳ ನಿಖರತೆಯನ್ನು ವರ್ಕಿಂಗ ಸ್ಟ್ಯಾಂಡರ್ಡ ಮಾನಕಗಳಿಂದ ಸಿಂಧುತ್ವವನ್ನು ಧೃಡ ಪಡಿಸುವ ಸಲುವಾಗಿ ಸರ್ಕಾರಿ ಮುದ್ರೆ ಮಾಡಲಾಗುತ್ತದೆ.

ವರ್ಕಿಂಗ ಸ್ಟ್ಯಾಂಡರ್ಡಗಳ ನಿಖರತೆಯನ್ನು ಪ್ರತಿ ವರ್ಷ ಸೆಕೆಂಡರಿ ಸ್ಟ್ಯಾಂಡರ್ಡ ಮಾನಕಗಳಿಂದ ಸತ್ಯಾರ್ಪನೆ ಮಾಡಿ ಮುದ್ರೆ ಮಾಡಲಾಗುತ್ತದೆ. ಸೆಕೆಂಡರಿ ಸ್ಟ್ಯಾಂಡರ್ಡ ಮಾನಕಗಳ ನಿಖರತೆಯನ್ನು ರೆಫರೆನ್ಸಸ ಸ್ಟ್ಯಾಂಡರ್ಡಮಾನಕಗಳಿಂದ ಪ್ರತಿ ೨ ವರ್ಷಕ್ಕೊಮ್ಮೆ ಸತ್ಯಾರ್ಪನೆ ಮಾಡಿಸಿ ಖಚಿತಪಡಿಸಿಕೊಳ್ಳಲಾಗುತ್ತದೆ.

ರೆಫರೆನ್ಸ ಸ್ಟ್ಯಾಂಡರ್ಡಗಳ ನಿಖರತೆಯನ್ನು ನಿಯಮಾನುಸಾರ ಪ್ರತಿ ೩ ವರ್ಷಕ್ಕೊಮ್ಮೆ ರಾಷ್ಟ್ರೀಯ ಪ್ರಮಾಣ ಬದ್ಧ ಮಾನಕಗಳೊಂದಿಗೆ ಹೋಲಿಸಿ ಸತ್ಯಾರ್ಪನೆ ಮಾಡಿಸಲಾಗುತ್ತದೆ.

ಈ ವ್ಯವಸ್ಥಿತ ಕಾರ್ಯಕ್ರಮದಲ್ಲಿ ಮೇಲಿನ ಸತ್ಯಾಪನಾ ಕಾರ್ಯಗಳು ಯಾವ ಹಂತದಲ್ಲೂ ಲೋಪವಾಗದಂತೆ ಅವ್ಯಹತವಾಗಿ ನಿರ್ವಹಿಸಲ್ಪಟ್ಟಲ್ಲಿ, ಗ್ರಾಹಕರ ನಿತ್ಯದ ಕೆಲಸಗಳಲ್ಲಿ ಉಪಯೋಗಿಸುವ ತೂಕ ಅಳತೆಗಳ ನಿಖರತೆಯು ಅಂತರಾಷ್ಟ್ರೀಯ ಮಾನಕಗಳ ನಿಖರತೆಯೊಂದಿಗೆ ಕರಾರುವಾಕ್ಕಾಗಿ ಹೊಂದಿಕೊಳ್ಳುತ್ತದೆ.

೧ ಮುದ್ರೆ ಹಾಕಿದ ತೂಕ ಮತ್ತು ಅಳತೆಗಳು ಸರಿಯಾಗಿರುವುದನ್ನು ಖಚಿತಪಡಿಸಿಕೊಳ್ಳುವುದು ಗ್ರಾಹಕರ ಕರ್ತವ್ಯ ಹಾಗೆಯೆ ಮುಗಿದು ಹೋದ ದಿನಾಂಕವನ್ನು ಪರಿಶೀಲಿಸಬೇಕು.

೨ ತೂಕಗಳು, ಅಳತೆಗಳು, ತೂಕದ ಸಾಧನಗಳನ್ನು ಕಾಣುವಂತೆ ಉಪಯೋಗಿಸಲು ಒತ್ತಾಯಿಸಬೇಕು ಆದರೆ ಎಷ್ಟರ ಮಟ್ಟಿಗೆ ಗ್ರಾಹಕ ಇದರಲ್ಲಿ ಯಶ ಸಾಧಿಸುವುದು ಸಂದೇಹ.

೩. ತಕ್ಕಡಿಯ ಸಮತೋಲನ ಖಚಿತಪಡಿಸಿಕೊಳ್ಳುವುದು, ಆಯಸ್ಕಾಂತದ ದುರುಪಯೋಗ, ಕೈಯಲ್ಲಿ ತಕ್ಕಡಿಯನ್ನು ಹಿಡಿದು ತೂಕ ಮಾಡುವುದು ಪದಾರ್ಥ ತೂಕ ಮಾಡುವಾಗ ಸರಿಯಾಗಿ ಇಡುವುದು (ಏಂ೨೩ಇಂ೨೩ರ್ಿ) ಮೆಟ್ರಿಕ್ ಪದ್ಧತಿಯನ್ನು ಉಪಯೋಗಿಸಿ ವ್ಯವಹಾರ

ನಡೆಸಬೇಕು ಕಲ್ಲು, ಇಟ್ಟಿಗೆ, ಮುಂತಾದವುಗಳಿಂದ ತೂಕ ಮಾಡುವುದನ್ನು ತಪ್ಪಿಸುವುದು ಮುಂತಾದವುಗಳನ್ನು ಸಾಮಾನ್ಯ ಗ್ರಾಹಕನಿಂದ ಅನುಸರಿಸುವುದು ಅಸಾಧ್ಯದ ಮಾತು.

೪ ಸಾಮಾನ್ಯ ಗ್ರಾಹಕನಿಗೆ ಮತ್ತು ಅಳತೆಗಳಿಗೆ ಸಂಬಂಧಿಸಿದ ದೂರುಗಳನ್ನು ಹತ್ತಿರದ ಇಲಾಖೆಯ ಕಛೇರಿಯಲ್ಲಿ ಕೊಡಬೇಕು ಎನ್ನುವುದು ಗೊತ್ತಿರುವುದಿಲ್ಲ.

ಸಾಮಾನ್ಯ ಗ್ರಾಹಕನಿಗೆ ಇಲಾಖೆಯ ಕುರಿತು ಸಮಗ್ರ ಮಾಹಿತಿ ಶಿಕ್ಷಣವನ್ನು ಕೊಡಬೇಕು.[೧೭]

**೨ ನಗರ ಪಾಲಿಕೆ ಹಾಗೂ ಮಹಾನಗರಪಾಲಿಕೆ:**

ನಗರಪಾಲಿಕೆ ಬಗ್ಗೆ ಗ್ರಾಹಕ ಸಂರಕ್ಷಣಾ ಕಾಯ್ದೆಯಲ್ಲಿ ಸ್ಥಳವಿಲ್ಲದಿದ್ದರೂ ತೆರಿಗೆಯನ್ನು ಕೊಡುವ ಗ್ರಾಹಕರು ಪಾಲಿಕೆಯ ಅಧಿಕಾರಿಗಳ ನಿರ್ಲಕ್ಷತೆ ಹಾಗು ಅವುಗಳ ವೈಫಲ್ಯದಿಂದ ಅವರನ್ನು ತರಾಟೆಗೆ ತೆಗೆದುಕೊಳ್ಳಬಹುದು, ಗ್ರಾಹಕ ವೇದಿಕೆಗಳಲ್ಲಿ ಅವರ ಕುರಿತು ದೂರು ದಾಖಲಿಸಿ, ಅವರ ಹೊಣೆಗಾರಿಕೆಯ ಬಗ್ಗೆ ಚುರುಕು ಮುಟ್ಟಿಸಬಹುದು.

ಕರ್ನಾಟಕದಲ್ಲಿ ಜನರಲ್ಲಿ ಜಾಗೃತಿಯಿಲ್ಲದ ಕಾರಣ, ನಗರ ಹಾಗೂ ಮಹಾನಗರ ಪಾಲಿಕೆ ಅಧಿಕಾರಿಗಳು ಲಂಗುಲಗಾಮಿಲ್ಲದೆ ಸ್ವೇಚ್ಛಾ ಪ್ರವೃತ್ತಿ ಮೇಲುಗೈ ಸಾಧಿಸಿದೆ. ತೆರಿಗೆದಾರರು ಆರಿಸಿ ಕಳುಹಿಸಿರುವ ಪ್ರತಿನಿಧಿಗಳು ಬೇಜವಾಬ್ದಾರಿಯಿಂದ ವರ್ತಿಸುತ್ತಾರೆ. ಇದನ್ನು ಜಾಗೃತ ನಾಗರೀಕರು ಖಂಡಿಸಿ ಅವರನ್ನು ಸರಿ ದಾರಿಗೆ ತಂದು ಕಾರ್ಯೋನ್ಮುಖರಾಗುವಂತೆ ಮಾಡಬೇಕು. ಆಗ ಪಾಲಿಕೆ ಜನ ಎಚ್ಚತ್ತುಕೊಳ್ಳಬಹುದು, ಜನರ ಸಮಸ್ಯೆಗೆ ಜನ ಜಾಗೃತಿ ಹಾಗೂ ಸಂಘಟನೆಯ ಮೂಲಕ ಪರಿಹಾರ ಸಿಗಬಹುದು.

**೩ ಭಾರತೀಯ ದೂರವಾಣಿ ನಿಗಮ :** ಬಿ.ಎಸ್.ಎನ್.ಎಲ್.ನ ಮೂಲಭೂತ ದೂರವಾಣಿ ಸೇವೆ ಬಿ–ಫೋನ ಗ್ರಾಮೀಣ ಪ್ರದೇಶದ ಗ್ರಾಹಕರ ಅಗತ್ಯತೆಗನುಗುಣವಾಗಿ ವಿವಿಧ ದರಗಳಲ್ಲಿ ಈ ಸೇವೆಯನ್ನು ನೀಡುತ್ತಾರೆ.

**ಉದ್ದೇಶಗಳು:**

ಭಾರತೀಯ ದೂರವಾಣಿ ನಿಗಮದ ಗ್ರಾಹಕರಿಗೆ ಸಂಬಂಧಿಸಿದ ಉದ್ದೇಶಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧ ಭಾರತೀಯ ದೂರವಾಣಿ ನಿಗಮದ ಉದ್ದೇಶಗಳು ಗ್ರಾಹಕನಿಗೆ ಮಿತವ್ಯಯವಾದ ಸುರಕ್ಷಿತ ಹಾಗು ದಕ್ಷ ಸೇವೆಯನ್ನು ಒದಗಿಸುವುದು.

೨ ನಿಗಮವು ತನ್ನ ನೌಕರರಲ್ಲಿ ಹೊಂದಿಕೆ ಮನೋಭಾವ ಗ್ರಾಹಕರಿಗೆ ಲಾಭದಾಯಕ ಹಾಗೂ ನಿಗಮದ ಉದ್ದೇಶಗಳ ಕುರಿತು ತಿಳುವಳಿಕೆ ಅರಿವು ಮೂಡಿಸುವ ಸನದನ್ನು ಹೊಂದಿದೆ.

೩ ನಿಗಮವು ತನ್ನ ಉದ್ದೇಶಗಳನ್ನು ಸಾಧಿಸುವ ನಿಟ್ಟಿನಲ್ಲಿ ತನ್ನದೆ ಆದ ಹಲವು ನಿಭಂದನೆಗಳನ್ನು ಹಾಕಿಕೊಂಡು ಗ್ರಾಹಕರಿಗೆ ಅತ್ಯುತ್ತಮವಾದ ಸೇವೆಯನ್ನು ಒದಗಿಸುತ್ತಿದೆ.

೪ ಗ್ರಾಹಕರಿಗೆ ತಮ್ಮ ಸಲಹೆ ಸೂಚನೆಗಳನ್ನು ನೀಡಲು ಹಾಗೂ ತಮ್ಮ ದೂರುಗಳನ್ನು ಪರಿಹರಿಸಿಕೊಳ್ಳಲು ನಿಗಮವು ಅನುವು ಮಾಡಿಕೊಟ್ಟಿದೆ.

೫ ನಿಗಮದ ಉದ್ದೇಶವು ಗ್ರಾಹಕರಿಗೆ ಮಾಹಿತಿಯನ್ನು ಒದಗಿಸುವುದು ಈ ಮಾಹಿತಿಯಲ್ಲಿ ಸೇವೆಗಳ ಕುರಿತು ವ್ಯಾಜ್ಯಗಳ ಪರಿಹಾರ ಒದಗಿಸುವ ನಿಟ್ಟಿನಲ್ಲಿ ಸಲಹೆಗಳನ್ನು ನೀಡುತ್ತದೆ.

**ನಿಗಮದ ಉದ್ದೇಶಗಳ ವಿಶ್ಲೇಷಣೆ:**

೧. ನಿಗಮವು ಉದ್ದೇಶಗಳನ್ನು ಪೂರೈಸುವ ದಾರಿಯಲ್ಲಿ ಸಾಫಲ್ಯತೆಯನ್ನು ಪಡೆಯುವತ್ತ ಎಡವಿದೆ ಎನ್ನಬಹುದು.

೨. ನಿಗಮದ ಸಿಬ್ಬಂದಿವರ್ಗವು, ನಿಗಮದ ಉದ್ದೇಶಗಳನ್ನು ಪೂರೈಸುವ ತಿಳುವಳಿಕೆ ಹೊಂದಿರುವುದು ತುಂಬಾ ಕಷ್ಟ.

೩. ನಿಗಮವು ಅನುವು ಮಾಡಿಕೊಟ್ಟ ನಿಭಂದನೆಗಳು ಗ್ರಾಹಕರಿಗೆ ತಲುಪುವದು ಅಸಾಧ್ಯ. ಏಕೆಂದರೆ ಭಾರತದ ೭೦% ಗ್ರಾಹಕರು ಹಳ್ಳಿಯ ಜನ ನಿಗಮದ ಸೇವೆಗಳ ಮಾಹಿತಿ ಅವರಿಗೆ ತಲುಪಲು ಹಾಗೂ ಅರಿವಿಗೆ ಬರಲು ಸಾಧ್ಯವಿಲ್ಲ.

೪. ಗ್ರಾಹಕರ ದೂರುಗಳಿಗೆ ಸ್ಪಂದಿಸಿ ಅವುಗಳಿಗೆ ಪರಿಹಾರ ಕೊಡುವ ಪರಿಪಾಟವನ್ನು ನಿಗಮವು ಹಮ್ಮಿಕೊಂಡಿದ್ದರೂ ಗ್ರಾಹಕರನ್ನು ತೃಪ್ತಿ ಪಡಿಸುವಲ್ಲಿ ಅದು ಸೋತಿದೆ ಎನ್ನಬಹುದು.

೫. ನಿಗಮದಲ್ಲಿ ಪರಿಹರಿಸಲಾಗದ ಗ್ರಾಹಕ ವ್ಯಾಜ್ಯಗಳನ್ನು ಗ್ರಾಹಕ ವೇದಿಕೆಗಳಿಗೆ ಕೊಂಡೊಯ್ದು ಪರಿಹರಿಸಿಕೊಳ್ಳುವ ದಾರಿಯನ್ನು ಗ್ರಾಹಕ ಕಂಡುಕೊಳ್ಳಬೇಕಾಗಿದೆ. ಗ್ರಾಹಕನಿಗೆ ಅದರ ಅರಿವು ಇರಬೇಕು. ಗ್ರಾಹಕ ಸಂಘಟನೆಗಾಗಿ ವೇದಿಕೆಗಳ ಉಪಯೋಗ ಪಡೆಯಬೇಕು.[೧೮]

**೪. ಸಾರಿಗೆ ಇಲಾಖೆ.**

ಸಾರಿಗೆ ಇಲಾಖೆಯನ್ನು ಸರ್ಕಾರದ ಆದೇಶ ಸಂಖ್ಯೆ ೨೩–೬೮೭೭–೬೮೬೫: ಆರ್.ಟಿ.೫೩:೫೪:೧೦, ೩.೩.೧೯೯೫ ರಲ್ಲಿ ರಚಿಸಲಾಗಿದೆ. ಮತ್ತು ಸರ್ಕಾರದ ಅಧಿಸೂಚನೆ ನಂ ಟಿ:೪೨೮೫:೯೮ ಎ ೨೩:೫೬:೫೭ ದಿನಾಂಕ ೨೭.೦೮.೧೯೫೬ ರಂದು ಹೊರಡಿಸಲಾದ ನಿಯಮ

೪೮೬೬ ಅಡಿಯಲ್ಲಿ ಮೋಟಾರು ವಾಹನ ಇಲಾಖೆ ಎಂದು ನಾಮಾಂಕಿತಗೊಳಿಸಲಾಯಿತು. ಆಮೇಲೆ ಸಾರಿಗೆ ಇಲಾಖೆಯೆಂದು ನಾಮಾಂಕಿತವಾಯಿತು.

ಸಾರಿಗೆಯು ಆರ್ಥಿಕ ಸುಭದ್ರತೆಯನ್ನು ಉಂಟುಮಾಡುವಲ್ಲಿ ಮತ್ತು ಯಾವುದೇ ಕೈಗಾರಿಕೆಯು ಅಥವಾ ವ್ಯಕ್ತಿಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುವ ಮೂಲಕ ನಮ್ಮ ರಾಷ್ಟ್ರದ ಈಗಿನ ಆರ್ಥಿಕ ಕ್ರಾಂತಿಯಲ್ಲಿ ಮಹತ್ವ ಸಂಪರ್ಕ ಕಲ್ಪಿಸುತ್ತದೆ. ಈ ಇಲಾಖೆ ಕೇವಲ ಸಾರ್ವಜನಿಕ ವಲಯದ ಸ್ವತ್ತಾಗಿರದೆ ಹೆಚ್ಚಿನ ಪ್ರಮಾಣದಲ್ಲಿ ಒಂದು ಪ್ರಬಲ ಖಾಸಗಿ ವಲಯವಾಗಿಯೂ ಸಹ ರೂಪುಗೊಳ್ಳುತ್ತಿದೆ. ಆದ್ದರಿಂದ ಇಲಾಖೆಯು ಮುಕ್ತರೂಪದ ಆಡಳಿತವನ್ನು ರೂಪಿಸಿಕೊಂಡು ಸಾರ್ವಜನಿಕವಾಗಿ ನಿರ್ದಿಷ್ಟವಾದ ವಾಹನ ಬಳಕೆದಾರರಿಗೆ ಉತ್ತಮ ಸೇವೆ ಸಲ್ಲಿಸುತ್ತಿದೆ.

ಇಲಾಖೆಯು ಮುಖ್ಯವಾಗಿ ಮೋಟಾರು ವಾಹನಗಳಿಂದ ತೆರಿಗೆ ವಸೂಲಿ ಮಾಡುತ್ತದೆ. ಹಾಗೂ ರಾಜ್ಯದಲ್ಲಿ ಉಪಯೋಗಿಸಲ್ಪಡುವ ವಾಹನಗಳ ಕಾಯ್ದೆಯಲ್ಲಿ ಅಳವಡಿಸಿರುವ ಕೆಲಸ ಕಾರ್ಯಗಳನ್ನು ಸೂಕ್ತವಾಗಿ ಜಾರಿಗೊಳಿಸುವ ಅಧಿಕಾರ ಹೊಂದಿದೆ. ಕರ್ನಾಟಕ ಸರಕಾರವು ರಾಜ್ಯದ ಸಾರಿಗೆ ಇಲಾಖೆಯಲ್ಲಿ ಕ್ರಿಯಾತ್ಮಕ ಮತ್ತು ಸೌಲಭ್ಯಪೂರಿತ ಆಡಳಿತವನ್ನು ನಡೆಸಲು, ಗುರಿಯನ್ನು ಹೊಂದಲಾಗಿರುತ್ತದೆ. ಈ ಕ್ರಮಗಳಿಂದ ಸಾರಿಗೆ ವ್ಯವಸ್ಥೆಯಲ್ಲಿ ನೂತನ ತಂತ್ರಜ್ಞಾನ ಅಳವಡಿಕೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಅವಿಷ್ಕಾರಕ, ಆಡಳಿತ, ಉತ್ತಮ ಸಾರ್ವಜನಿಕ ಸೇವೆ, ವಾಯುಮಾಲಿನ್ಯ ನಿಯಂತ್ರಣ, ರಸ್ತೆ ಸುರಕ್ಷತೆಯಲಿ ನೂತನ ಕ್ರಮಗಳ ಜಾರಿಗೆ ಅವಕಾಶವಿದ್ದು ಮತ್ತು ರಾಜ್ಯದ ಆರ್ಥಿಕ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರವಹಿಸುತ್ತದೆ. ರಾಜ್ಯ ಸಾರಿಗೆ ವ್ಯವಸ್ಥೆಯಲ್ಲಿ ಒಟ್ಟಾರೆ ಪರಿಣಾಮಕಾರಿಯಾಗಿ ಅಭಿವೃದ್ಧಿ ಹೊಂದಲು ಈ ಕ್ರಮಗಳನ್ನ ಯೋಜಿಸಿ ಕಾರ್ಯರೂಪಕ್ಕೆ ತರಲಾಗುತ್ತದೆ.

**ಸಾರಿಗೆ ಅದಾಲತ್:**

ಇಲಾಖೆಯ ಹಿರಿಯ ಅಧಿಕಾರಿಗಳ ಸಮ್ಮುಖದಲ್ಲಿ ಸಾರಿಗೆ ಅದಾಲತ್ ಅನ್ನು ಪ್ರತಿ ಮೂರು ತಿಂಗಳಿಗೊಮ್ಮೆ ನಿಗದಿತ ಸಮಯಕ್ಕೆ ನಡೆಸಲಾಗುತ್ತಿದ್ದು, ಈ ಕುರಿತು ಮುಂಚಿತವಾಗಿಯೇ ದಿನಪತ್ರಿಕೆ, ರೇಡಿಯೋ, ಮುಂತಾದ ಮಾಧ್ಯಮಗಳ ಮೂಲಕ ಪ್ರಚಾರ ಮಾಡಲಾಗುತ್ತದೆ. ಈ ಕಾರ್ಯಕ್ರಮದಲ್ಲಿ ಸಾರ್ವಜನಿಕರು, ವಿವಿಧ ಕ್ಷೇತ್ರಗಳ ಪ್ರತಿನಿಧಿಗಳು, ಪತ್ರಕರ್ತರು, ಇತರರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ತಮ್ಮ ಕುಂದುಕೊರತೆಗಳನ್ನು ತಿಳಿಸುತ್ತಿದ್ದು, ಇಲಾಖಾ ಸೇವೆಗಳ ಬಗ್ಗೆ ಸಲಹೆಗಳನ್ನು ನೀಡುತ್ತಾರೆ ಸಾರ್ವಜನಿಕರ ಸಮಸ್ಯೆಗಳನ್ನು ಆಲಿಸಿ ಸಾಧ್ಯವಾದದ್ದು ಮಟ್ಟಿಗೆ ಸ್ಥಳದಲ್ಲಿಯೇ ಸೂಕ್ತ

ಕ್ರಮ ಕೈಗೊಂಡು ಪರಿಹಾರ ಒದಗಿಸಲಾಗುತ್ತದೆ. ಈ ಸಾರಿಗೆ ಅದಾಲತ್ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯತ್ತಿದ್ದು, ಇದಕ್ಕೆ ಸಾರ್ವಜನಿಕರಿಂದ ಉತ್ತಮ ಪ್ರತಿಕ್ರಿಯೆ ಕಂಡು ಬರುತ್ತಿದೆ.

**ಗಣಕೀಕರಣ:**

ರಾಜ್ಯದ ಎಲ್ಲಾ ೫೪ ಪ್ರಾದೇಶಿಕ ಸಾರಿಗೆ ಕಛೇರಿಗಳ ಹಾಗೂ ಉಪ ಪ್ರಾದೇಶಿಕ ಸಾರಿಗೆ ಕಛೇರಿಗಳ ಗಣಕೀಕರಣವನ್ನು ಮತ್ತು ಸ್ಮಾರ್ಟಕಾರ್ಡು ಆಧಾರಿತ ನೋಂದಣಿ ಪತ್ರ ಹಾಗೂ ಡ್ರೈವಿಂಗ ಲೈಸನ್ಸ ವಿತರಣೆಯ ಯೋಜನೆಯನ್ನು ಸರ್ಕಾರಿ ಹಾಗೂ ಖಾಸಗಿ ಸಹಭಾಗಿತ್ವ ಯೋಜನೆಯ ಆಧಾರದ ಮೇಲೆ ಅನುಷ್ಠಾನಗೊಳಿಸುವ ಕಾರ್ಯವನ್ನು ಪ್ರಾರಂಭಿಸಲಾಗಿದೆ. ಈ ಸಂಬಂಧವಾಗಿ ಸರ್ಕಾರದಿಂದ ಅನುಮೋದನೆ ಪಡೆದು ಟೆಂಡರ್ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕಾರ್ಯವನ್ನು ನಿರ್ವಹಿಸಲು ಸಲಹೆಗಾರರನ್ನಾಗಿ ನೇಮಿಸಲಾಗುತ್ತದೆ.

ರಾಜ್ಯದಲ್ಲಿ ಈಗಾಗಲೇ ಸಾವಿರಾರು ಕಿ.ಮೀ.ಗಳ ಉದ್ದದ ರಾಷ್ಟ್ರೀಯ ಹೆದ್ದಾರಿಗಳಿದ್ದು, ಈ ರಸ್ತೆಗಳಲ್ಲಿ ವಾಹನ ಸಂಚಾರ ಮತ್ತು ದಟ್ಟಣೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದ್ದು ರಸ್ತೆ, ಅಪಘಾತಗಳು ಸಂಭವಿಸುತ್ತಿವೆ. ಇಂತಹ ಅಪಘಾತಗಳು ಸಂಭವಿಸಿದ ಸ್ಥಳಕ್ಕೆ ಸಮಯಕ್ಕೆ ಸರಿಯಾಗಿ ಭೇಟಿ ಮಾಡಿ, ಶೀಘ್ರವಾಗಿ ಕ್ರಮ ಕೈಗೊಳ್ಳಲು ಮತ್ತು ಗಾಯಗೊಂಡವರಿಗೆ ಸೂಕ್ತ ಚಿಕಿತ್ಸೆ ಬಹಳಷ್ಟು ಸಂದರ್ಭಗಳಲ್ಲಿ ಕಷ್ಟವಾಗುತ್ತದೆ. ಇಂತಹ ಕಾರ್ಯಗಳನ್ನು ವ್ಯವಸ್ಥಿತ ಕಾರ್ಯಪಡೆಯೊಂದಿಗೆ ನಡೆಸುವುದು ತೊಂದರೆದಾಯಕ. ಸಾರಿಗೆ ಇಲಾಖೆ, ಪೋಲಿಸ್ ಇಲಾಖೆ ಮತ್ತು ಆರೋಗ್ಯ ಇಲಾಖೆಗಳ ಸಹಯೋಗದೊಂದಿಗೆ ಕಾರ್ಯಾಚರಣೆ ಮಾಡಲು ಪಡೆಗಳನ್ನು ರಚಿಸಲು ಯೋಜನೆ ಕೈಗೊಳ್ಳಲಾಗಿದೆ.

ಅಪಘಾತದ ದುಷ್ಪರಿಣಾಮಗಳನ್ನು ಕಡಿಮೆ ಮಾಡುವ ದೃಷ್ಠಿಯಿಂದ ಸಾರಿಗೆ ವಾಹನಗಳಿಗೆ ವೇಗ ನಿಯಂತ್ರಣಗಳ ಅವಳಡಿಕೆಯನ್ನು ಕಡ್ಡಾಯಗೊಳಿಸಲಾಗಿದೆ.[೧೯]

**೫. ಆರೋಗ್ಯ ಇಲಾಖೆ:** ಹೆಚ್ಚುತ್ತಿರುವ ವೈದ್ಯಕೀಯ ನಿರ್ಲಕ್ಷದ ಪರಿಣಾಮವಾಗಿ ರೋಗಿಗಳು, ನಷ್ಟ, ನೋವು, ಮತ್ತು ಕೆಲವು ಸಂದರ್ಭಗಳಲ್ಲಿ ಸಾವನ್ನು ಅನುಭವಿಸಬೇಕಾಗಿದೆ. ಸರ್ಕಾರಿ ಅಥವಾ ಖಾಸಗಿ ಆಸ್ಪತ್ರೆಗಳು ಎಂಬ ಭೇದವಿಲ್ಲದೆ ರೋಗಿಗಳು ಸಂಕಟಕ್ಕೆ ಗುರಿಯಾಗುವ ಸಂದರ್ಭ ಏರ್ಪಟ್ಟಿದೆ. ವೈದ್ಯರ ಅಸಡ್ಡೆ, ಕರ್ತವ್ಯದಲ್ಲಿ ಅನಾಸಕ್ತಿಯ ಪರಿಣಾಮವಾಗಿ ರೋಗಿಗಳಿಗೆ ಸಮರ್ಪಕವಾದ ಸೇವೆ ದೊರೆಯದೆ, ತಮ್ಮ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ.

ವೈದ್ಯಕೀಯ ಕ್ಷೇತ್ರದಲ್ಲಿ ಕೆಲವು ಅನೈತಿಕ ವ್ಯವಹಾರಗಳು ನಡೆಯುತ್ತಿದ್ದು, ರೋಗಿಗಳು ತಮಗೆ ಅರಿವಿಲ್ಲದೆ ಶೋಷಣೆಗೆ ಒಳಗಾಗುತ್ತಿದ್ದಾರೆ. ಸರಿಯಾದ ಸಮಯದಲ್ಲಿ ಚಿಕಿತ್ಸೆ ಮಾಡದಿರುವುದು, ಅನಾವಶ್ಯಕ ಔಷಧವನ್ನು ನೀಡುವುದು, ರೋಗಿಗೆ ತಿಳಿಸದೇ ಅವರ ದೇಹದ ಭಾಗಗಳನ್ನು ತೆಗೆದು

ಹಾಕುವುದು ಮುಂತಾದವುಗಳ ಕುರಿತು ವರದಿಗಳು ಹೆಚ್ಚಾಗುತ್ತಿವೆ. ಈ ಹಿನ್ನಲೆಯಲ್ಲಿ ರೋಗಿಯಾಗಿ ಜನ ಸಾಮಾನ್ಯರು ಅವರ ಹಕ್ಕು ಮತ್ತು ಜವಾಬ್ದಾರಿಗಳ ಕುರಿತು ಅರಿತುಕೊಳ್ಳುವುದು ಅವಶ್ಯಕ.[೨೦]

**ರೋಗಿಗಳ ಹಕ್ಕುಗಳು:**

೧. ಪ್ರತಿಯೊಬ್ಬರಿಗೂ ಸಮರ್ಪಕವಾದ ಆರೋಗ್ಯ ಸೇವೆ ರೋಗ ನಿವಾರಣದ ಹಕ್ಕು.

೨. ಜಾತಿ, ಮತ , ಭಾಷೆ ಅಥವಾ ಲಿಂಗ ಬೇಧವಿಲ್ಲದೆ ರೋಗ ನಿವಾರಣಾ ಹಕ್ಕು.

೩. ಲಭ್ಯವಿರುವ ಕಡೆ, ರೋಗಿ ತಾನು ಇಷ್ಟಪಟ್ಟ ವೈದ್ಯರಿಂದ ಚಿಕಿತ್ಸೆ ಪಡೆಯಬಹುದು.

ಗ್ರಾಹಕ ಹಕ್ಕುಗಳು ಎಂದರೆ ಪ್ರತಿಯೊರ್ವ ನಾಗರಿಕನೂ ಸ್ವತಂತ್ರವಾಗಿ ಅನುಭವಿಸಬಹುದಾದ ಹಕ್ಕುಗಳು. ಭಾರತೀಯ ಸಂವಿಧಾನ ಮತ್ತು ಕಾಯಿದೆಗಳು ನೀಡಿರುವ ವಿಶೇಷ ಹಕ್ಕುಗಳು. ಹಕ್ಕುಗಳ ಕುರಿತು ಪ್ರತಿಯೊಬ್ಬ ನಾಗರಿಕನಿಗೂ ಗಮನ ಇರಬೇಕು. ವ್ಯಾಪಾರಿ ಉದ್ಯಮಿ, ಸೇವಾನಿರತ ಜನಸಾಮಾನ್ಯ, ಉದ್ಯೋಗಿ ಇರುವಂತೆಯೇ ಓರ್ವ ರೋಗಿ ಕೂಡಾ ಗ್ರಾಹಕ ನ್ಯಾಯ ವರ್ಗದಲ್ಲಿ ಆತನಿಗೆ ವಿಶೇಷ ಸ್ಥಾನವಿದೆ. ಅಂತರಾಷ್ಟ್ರೀಯ ಸಂಸ್ಥೆಯು ಘೋಷಿಸಿದ ಹಕ್ಕುಗಳಲ್ಲಿ, ರೋಗಿಯ ಹಕ್ಕಿಗೂ ವಿಶೇಷ ಸ್ಥಾನವಿದೆ. ರೋಗಿಯು ವೈದ್ಯರ ಕೈಗೊಂಬೆಯಲ್ಲ.

ಈ ಕುರಿತು ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ಕಾನೂನುಗಳನ್ನು ರಚಿಸಿಕೊಂಡಿವೆ. ಆರ್ಥಿಕ,ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಈ ಕಾನೂನುಗಳ ರಚನೆ ಆಗಿದೆ. ರೋಗಿಯ ಹಿತಾಸಕ್ತಿಯೆ ಇದರ ಉದ್ದೇಶವಾಗಿದೆ. ಚಿಕಿತ್ಸೆ ನೀಡುವಾಗ ಎಚ್ಚರಿಕೆ, ನಿರ್ಲಕ್ಷವಿಲ್ಲದೆ ಶುಶ್ರೂಷ ಸಾಮಾನ್ಯವಾಗಿದೆ. ನೋವಿನೊಡನೆ ಸ್ಪಂದಿಸುವುದು ವೈದ್ಯನ ಕರ್ತವ್ಯ, ನೋವನ್ನು ಪರಿಹರಿಸಿಕೊಳ್ಳುವುದು ರೋಗಿಯ ಹಕ್ಕು. ರೋಗಿಯ ರಕ್ಷಣೆ ಸರಕಾರದ ಪ್ರಧಾನ ಕರ್ತವ್ಯವೂ ಆಗಿದೆ.[೨೧]

ಪ್ರಾಚೀನ ಕಾಲದಿಂದಲೂ ವೈದ್ಯಕೀಯ ಸಂಬಂಧ ಗುರು ಶಿಷ್ಯ ಸಂಬಂಧವಿದ್ದಂತೆಯೇ ಪವಿತ್ರ ಸಂಬಂಧವಾಗಿತ್ತು. ಭಾರತದಲ್ಲಂತೂ ಅದೊಂದು ಆದರಣೀಯ ಸಂಬಂಧವಾಗಿತ್ತು. ಆಧುನಿಕ ವೈದ್ಯಕೀಯ ಪದ್ಧತಿ ಶಿಕ್ಷಣವನ್ನು ವ್ಯಾಪಾರೀಕರಣ ಮಾಡಿ, ಅದರ ಪಾವಿತ್ರ್ಯವನ್ನು ಕಿತ್ತು ಹಾಕಲಾಗಿದೆ. ವೈದ್ಯನೇ ದೇವರೆನ್ನುವಷ್ಟು ನಂಬಿಕೆಯಿಟ್ಟಿದ್ದ ಜನರೇ ಇಂದು ವೈದ್ಯರೆಂದರೆ ಭಯಪಡುವಂತಾಗಿದೆ. ಅತ್ಯಾಧುನಿಕ ತಂತ್ರಗಳು, ಯಂತ್ರಗಳು ಮತ್ತು ಪರಿಣತಿ, ಬೆಳೆದು ಬಂದಿದ್ದರೂ, ರೋಗಿ ಹಾಗು ವೈದ್ಯನ ಸಂಬಂದಲ್ಲಿ ಪಾವಿತ್ರ್ಯ ಮುಂದುವರೆದಿಲ್ಲ ಎನ್ನಬಹುದು. ಆಸ್ಪತ್ರೆಗಳು ಸೇವಾ ಕೇಂದ್ರಗಳಾಗುವ ಬದಲು ವ್ಯಾಪಾರಿ ಕೇಂದ್ರಗಳಾಗಿವೆ. ಅಪನಂಬಿಕೆ ಬೆಳೆಯುತ್ತಿದೆ. ವೈದ್ಯ ಈಗ ವ್ಯಾಪಾರಿ ಎನ್ನುವಂತಾಗಿದೆ. ತಂತ್ರ, ಯಂತ್ರ, ವಿದ್ಯೆಗಳೆಲ್ಲಾ ಹಣ ಸುಲಿಗೆಗಾಗಿ ಎಂಬ

ನೀತಿ ಬೆಳೆಯತೊಡಗಿದೆ. ವೈದ್ಯಕೀಯ ನಿರ್ಲಕ್ಷದ ಕೇಸುಗಳು ಜಗತ್ತಿನಾದ್ಯಂತ ಹೆಚ್ಚುತ್ತಲೆ ಇವೆ. ನಿರ್ಲಕ್ಷದಿಂದ ಆಸ್ಪತ್ರೆಯೊಂದರಲ್ಲಿ ಗಂಡಸಿನ ಮೊಣಕಾಲನ್ನು ಹೆಂಗಸಿಗೆ ಜೋಡಿಸಿದ ವರದಿ ಪ್ರಕಟವಾಗಿತ್ತು. ದೆಹಲಿಯ ಸುಪ್ರಸಿದ್ಧ ಆಸ್ಪತ್ರೆಯಲ್ಲಿ ೧೨೦ ಹೃದಯ ರೋಗಿಗಳಲ್ಲಿ ೪೩ ಮಂದಿ ನಿರ್ಲಕ್ಷದಿಂದ ಸಾವಿಗಿಡಾದರೆಂದು ತಿಳಿದು ಬಂದಿದೆ.[೨೨]

ಅಮೇರಿಕಾದ ವರದಿಯೊಂದು, ವರ್ಷದಲ್ಲಿ ೧ ಲಕ್ಷಕ್ಕೂ ಮಿಕ್ಕಿ ರೋಗಿಗಳು ಆಸ್ಪತ್ರೆ ನಿರ್ಲಕ್ಷದಿಂದಲೆ ಸಾವಿಗೀಡಾಗುತ್ತಾರೆ ಎಂದು ಪ್ರಕಟಿಸಿತ್ತು. ಅಪಘಾತಗಳು, ಆತ್ಮಹತ್ಯೆ, ವಿಷ ಸೇವನೆ ಮುಂತಾದವುಗಳ ತುರ್ತುಚಿಕಿತ್ಸೆಗಳಲ್ಲಿಯೂ ನಿರ್ಲಕ್ಷಗಳಾಗುತ್ತವೆ. ರೋಗದಿಂದ ಸಾಯುವದಕ್ಕಿಂತ ಹೆಚ್ಚು ಜನರು, ವೈದ್ಯಕೀಯ ನಿರ್ಲಕ್ಷಕ್ಕೆ ಬಲಿಯಾಗುತ್ತಾರೆಂದು ವರದಿ ತಿಳಿಸಿದೆ. ನಿರ್ಲಕ್ಷ ಭಯ ಹುಟ್ಟಿಸುತ್ತದೆ. ಆದರೆ ಚಿಕಿತ್ಸೆ ಅನಿವಾರ್ಯ.

**೬. ರೈಲ್ವೆ ಇಲಾಖೆ :**

ರೈಲ್ವೆ ಇಲಾಖೆಯು ಕೇಂದ್ರ ಸರ್ಕಾರದ ಆಡಳಿತ ವ್ಯಾಪ್ತಿಯಲ್ಲಿ ಒಳಪಡುವ ಸರ್ಕಾರಿ ಸಾಮ್ಯದ ಉದ್ಯಮ ಜಗತ್ತಿನಲ್ಲಿಯೇ ದೊಡ್ಡದಾದ ರೈಲ್ವೆ ಉದ್ಯಮ ಭಾರತದ್ದು ಎಂಬ ಗರಿಮೆ ಇದೆ. ರೈಲ್ವೆ ಇಲಾಖೆಯ ಗ್ರಾಹಕರ ಹಕ್ಕು ಪಾಲನೆಯಲ್ಲಿ ಈ ಕೆಳಗಿನ ವಿಷಯಗಳನ್ನು ಬಳಸಿಕೊಂಡು ಗ್ರಹಕರಿಗೆ ದೊರಕಬೇಕಾದ ಹಕ್ಕುಗಳನ್ನು ಒದಗಿಸಿದೆ.

೧. ರೈಲ್ವೆ ಇಲಾಖೆ ಗ್ರಾಹಕರ ಸುರಕ್ಷತೆಗೆ ಒತ್ತು ಕೊಟ್ಟು ಕೆಲಸ ಮಾಡುವುದು ಅದರ ಉದ್ದೇಶವಾಗಿದೆ.

೨. ಗ್ರಾಹಕರ ಹಕ್ಕು ಸರಿಯಾದ ಆಸನದ ಆಯ್ಕೆಗೆ ಅನುವು ಮಾಡಿಕೊಡುವುದು, ರೈಲ್ವೆ ಇಲಾಖೆಯ ಕರ್ತವ್ಯವಾಗಿದೆ.

೩. ರೈಲ್ವೆ ಇಲಾಖೆಯು ಗ್ರಾಹಕರಿಗೆ ಆದ ತೊಂದರೆಗಳಿಗೆ ಸೂಕ್ತ ಪರಿಹಾರ ಒದಗಿಸಿಕೊಡುವ ಉದ್ದೇಶ ಹೊಂದಿದೆ.

೪. ಜನ ಸಾಮಾನ್ಯ ಸನದಿನ ಉದ್ದೇಶವು ಗ್ರಾಹಕರಿಗೆ ಮುಕ್ತ ವಿಚಾರಣೆಯ ಸೌಲಭ್ಯವನ್ನು ಒದಗಿಸಿ ತೊಂದರೆಗಳನ್ನು ತಪ್ಪಿಸುವುದು ಆಗಿದೆ.

೫. ಗ್ರಾಹಕರಿಗೆ ಕಾಲಕಾಲಕ್ಕೆ ಬದಲಾದ, ಹೊಸ ಸೇವೆಗಳ ಕುರಿತು ಸಂದೇಶವನ್ನು ರವಾನಿಸುವ ಪರಿಪಾಟಲನ್ನು ರೈಲ್ವೆ ಇಲಾಖೆ ಹಾಕಿಕೊಂಡಿದೆ.

೬. ಗ್ರಾಹಕರಿಗೆ ಇಲಾಖೆಯ ಎಲ್ಲ ಮಾಹಿತಿಯನ್ನು ಸವಿವರವಾಗಿ ಒದಗಿಸುವ ಸೌಲಭ್ಯವನ್ನು ಇಲಾಖೆಯು ಹಮ್ಮಿಕೊಳ್ಳುತ್ತಿದೆ.

**ವಿಶ್ಲೇಷಣೆ:**

೧. ಭಾರತೀಯ ರೈಲ್ವೆ ಐ.ಆರ್. ಟಿ.ಸಿ ಮೂಲಕ ಇ–ಟಿಕೆಟ್ ಕೊಡುವ ಸೇವೆಯನ್ನು ಒದಗಿಸಿದೆ. ನಿಯಮಾನುಸಾರ ಟಿಕೇಟ್ ಪಡೆದು ಪ್ರಯಾಣವನ್ನು ಮಾಡಬಹುದು. ಆದರೆ ಐ.ಅರ.ಟಿ.ಸಿ ಸೌಲಭ್ಯದ ಪರಿಚಯವಾಗಲಿ ಇ–ಟಿಕೇಟನ ಸೇವೆಯಾಗಲಿ ಇರುವುದು ಗ್ರಾಹಕನಿಗೆ ಗೊತ್ತಿರುವುದು ಅಸಾಧ್ಯ. ಹಾಗೆಯೇ ಇ–ಟಿಕೇಟನ್ನು ಪಡೆಯುವ ಹಾಗೂ ಅದನ್ನು ಬಳಸುವ ಪರಿ ಗ್ರಾಹಕನಿಗೆ ತೊಂದರೆದಾಯಕವಾಗಿದೆ.

೨. ರೈಲ್ವೆ ಇಲಾಖೆಯು ಒದಗಿಸುವ ಸೇವೆಯಲ್ಲಿ ನಿಯಮ ಅನುಸಾರವಾಗಿ ಇರದೆ ಗ್ರಾಹಕ ಹಲವಾರು ಸಲ ತೊಂದರೆ ಅನುಭವಿಸುತ್ತಾನೆ. ಉದಾಹರಣೆಗೆ ರೈಲ್ವೆ ಬರುವ ವೇಳೆ ಬಿಡುವ ವೇಳೆ, ಮುಂತಾದವು ತಿಳಿಸಿದುದಕ್ಕಿಂತ ತಡವಾಗಿ ಗ್ರಾಹಕ ತೊಂದರೆ ಅನುಭವಿಸುತ್ತಾನೆ.

೩. ಟಿಕೇಟಗಳನ್ನು ಉಪಯೋಗಿಸದ ಸಂದರ್ಭಗಳಲ್ಲಿ ಗ್ರಾಹಕನ ತೊಂದರೆಗಳಿಗೆ ಸರಿಯಾಗಿ ಸ್ಪಂದನೆ ಸಿಗುವ ಭರವಸೆ ಇಲ್ಲ. ಪ್ರಯಾಣವು ರದ್ದಾದಾಗ, ಟಿಕೇಟನ್ನು ಹಿಂದುರಿಗಿಸಿ ಹಣಪಡೆಯುವಾಗ ಕಂಪ್ಯೂಟರಗಳು ಕೊಡುವ ತೊಂದರೆಗಳಿಂದ ಗ್ರಾಹಕನಿಗೆ ತೊಂದರೆ ಆಗುವುದು ಸಾಮಾನ್ಯ.

೪. ಗ್ರಾಹಕನಿಗೆ ಬೇಕಾಗುವ ಮೂಲ ಸೌಲಭ್ಯಗಳು ಸಿಗದೆ ಗ್ರಾಹಕ ತೊಂದರೆ ಅನುಭವಿಸಬೇಕಾಗಿದೆ.

೫. ಪ್ರತಿದಿನ ಪ್ರಯಾಣಿಸುವ ಗ್ರಾಹಕನಿಗೆ ಇಲಾಖೆಯ ಸೌಲಭ್ಯಗಳು ಆಕರ್ಷಕವಾಗಿರದೆ, ತಮ್ಮದೇ ಆದ ವಾಹನಗಳನ್ನು ಬಳಸುವ ಹವ್ಯಾಸಗಳಿಂದ ವಾತಾವರಣದಲ್ಲಿ ಕಲುಷಿತ ವಾಯು ಸೇರ್ಪಡೆಯಾಗುತ್ತಿದೆ. ವಾಸ್ತವಿಕ ಹಾಗೂ ಉತ್ತಮ ಸೇವೆಯನ್ನು ಒದಗಿಸುವುದರಿಂದ ಮುಂದೆ ಆಗುವ ಅನಾಹುತಗಳನ್ನು ತಪ್ಪಿಸಬಹುದು.

೬. ರೈಲ್ವೆ ಇಲಾಖೆಯು ವಿದ್ಯಾರ್ಥಿಗಳು, ಅಂಗವಿಕಲರು, ಯೋಧರು ವಿಧವೆಯರು, ಪತ್ರಕರ್ತರು, ಬೋಧಕರು, ಬುದ್ದಿಮಾಂದ್ಯರು ಇಂಥವರಿಗೆ ಕೆಲವು ರೀತಿಯ ರಿಯಾಯಿತಿಯನ್ನು ಕೊಡಲಾಗಿದೆ. ಅಂಥವರಿಗೆ ಅದರ ಕುರಿತು ಸರಿಯಾಗಿ ಮಾಹಿತಿ ದೊರಕದೆ ಹಕ್ಕುವಂಚಿತರಾಗುತ್ತಿದ್ದಾರೆ.

೭. ರಿಯಾಯಿತಿಗಳನ್ನು ನೀಡುವಾಗ ಹಲವಾರು ಅನ್ವಯಿಕ ನಿಬಂಧನೆಗಳು ಹಾಗೂ ಶರತ್ತುಗಳನ್ನು ಇಲಾಖೆ ಬಿಡುಗಡೆ ಮಾಡಿ ಅಂಥವರು ತೊಂದರೆ ಅನುಭವಿಸುವಂತೆ ಮಾಡಲಾಗಿದೆ.

೮. ಗ್ರಾಹಕರಿಗೆ ಅಪಘಾತದಲ್ಲಿ ಸಿಲುಕಿ ತೊಂದರೆ ಎದುರಾದಾಗ ಯಾವುದೇ ತರಹದ ಸಂಪೂರ್ಣ ಸುರಕ್ಷತೆಯಾಗಲಿ ಹಾಗೂ ಪರಿಹಾರವಾಗಲಿ ಸಿಗುವ ಕುರಿತು ರೈಲ್ವೆ ಇಲಾಖೆಯ ಸನದಿನಲ್ಲಿ ನಮೂದಿಸಲಾಗಿಲ್ಲ.

೯. ರೈಲ್ವೆ ಇಲಾಖೆಯು ಗ್ರಾಹಕರಿಗೆ ಸೇವೆಯನ್ನು ಒದಗಿಸುವಾಗ ಸಾಂತ್ವನ ಹಾಗು ಸ್ನೇಹಪರವಾಗಿರಬೇಕು. ಕೇವಲ ಸೇವೆಯನ್ನು ಒದಗಿಸಿದರೆ ಸಾಕಾಗದು. ಸಿಬ್ಬಂದಿಗೆ ಪ್ರೋತ್ಸಾಹದಾಯವಾಗಿರುವ ಜೊತೆಗೆ, ತಪ್ಪಿದಾಗ ಶಿಕ್ಷೆಯನ್ನು ಕೊಡಬೇಕು.

೧೦. ರೈಲ್ವೆಯಲ್ಲಿ ಹೆಣ್ಣು ಮಕ್ಕಳಿಗೆ, ಅಂಗವಿಕಲರಿಗೆ ಸ್ಥಾನಗಳ ಮೀಸಲಾತಿ ಕುರಿತು ರೈಲ್ವೆ ಇಲಾಖೆ ಯಾವ ನಿಯಮ ನಿರ್ಬಂಧನೆಗಳನ್ನು ಪಾಲಿಸದೆ ಗ್ರಾಹಕರಿಗೆ ಹಲವಾರು ಬಾರಿ ತೊಂದರೆ ಆಗುವ ಸಂಭವಿರುತ್ತದೆ.

೧೧. ಸಾರ್ವಜನಿಕರ ದೂರುಗಳಿಗೆ ಪರಿಹಾರ ನೀಡುವ ಕುರಿತು ರೈಲ್ವೆ ಇಲಾಖೆಯ ಸನದಿನಲ್ಲಿ ಯಾವುದೇ ಪ್ರಸ್ಥಾಪವಿಲ್ಲ.[೨೩]

**೭. ವಿದ್ಯಾ ಇಲಾಖೆ:**

ಗ್ರಾಹಕ ಸಂರಕ್ಷಣಾ ಕಾಯದೆ ಅಡಿಯಲ್ಲಿ ವಿದ್ಯಾ ಸಂಸ್ಥೆಗಳ ಸೇವೆಗಳನ್ನು ಸೇರಿಸಲಾಗುತ್ತದೆ. ಈ ಕಾಯದೆ ಅಡಿಯಲ್ಲಿ ಬರವು ಹಕ್ಕುಗಳ ಕುರಿತು, ವಿದ್ಯಾರ್ಥಿಗಳಿಗೆ ಮಾಹಿತಿ ಕೊಡಲಾಗುತ್ತಿದೆ. ಆದ್ದರಿಂದ ಶಿಕ್ಷಣ ಸಂಸ್ಥೆಗಳು ಕೆಲಸ ಮಾಡುವಾಗ ತುಂಬಾ ಜಾಗರೂಕರಾಗಿ ಕೆಲಸಗಳನ್ನು ಮಾಡಬೇಕಾಗಿದೆ. ಅವರ ಕಾರ್ಯದಲ್ಲಿ ಲೋಪ–ದೋಷಗಳು ಕಂಡು ಬಂದರೆ ಗ್ರಾಹಕ ವೇದಿಕೆಗಳಲ್ಲಿ ದೂರನ್ನು ಎದುರಿಸಬೇಕಾದ ಪರಿಸ್ಥಿತಿ ಬಂದೊದಗುತ್ತದೆ. ಶೈಕ್ಷಣಿಕ ಕ್ಷೇತ್ರದಲ್ಲಿ ದೇಶ ಎಷ್ಟೆ ಪ್ರಗತಿ ಸಾದಿಸಿದ್ದರೂ ವಿದ್ಯಾರ್ಥಿಗಳಿಗೆ ಸಿಗುತ್ತಿರುವ ಸೌಲಭ್ಯಗಳು ತೃಪ್ತಿಯನ್ನೊದಗಿಸಿಲ್ಲ. ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆಗೆ ಬೇರೆ ಅರ್ಥವನ್ನು ಕೊಡುತ್ತದೆ. ಸೇವೆ ಎಂದರೆ ಕಲಿಕೆಯಲ್ಲದೆ ಅದಕ್ಕೆ ಹೊಂದಿಕೊಂಡ ಇತರ ಸೌಲಭ್ಯಗಳು ಉಂಟಾಗುತ್ತದೆ. ಸೇವೆಯಲ್ಲಿ ಶಿಕ್ಷಣ ನೀಡುವುದರ ಜೊತೆಗೆ ದಾಖಲಾತಿ, ಪರೀಕ್ಷೆಗಳನ್ನು ಹಮ್ಮಿಕೊಳ್ಳುವುದು, ಉತ್ತರ ಪತ್ರಿಕೆ ಮೌಲ್ಯಮಾಪನ, ಪರೀಕ್ಷೆಯ ಪರಿಣಾಮ, ಸರ್ಟಿಫಿಕೆಟಗಳನ್ನು ಕೊಡುವುದು ಮುಂತಾದವುಗಳು ವಿದ್ಯಾರ್ಥಿ ಸಮುದಾಯವನ್ನು ತೃಪ್ತಿಪಡಿಸುವಾಗ ಶೈಕ್ಷಣಿಕ ಸಂಸ್ಥೆಗಳು ಪರಿಪೂರ್ಣತೆಯ ಕೊರತೆ ಹಾಗೂ ಅವಹೇಳನೆಗೆ ಗುರಿಯಾಗಿ ಗ್ರಾಹಕ ಕಾಯ್ದೆ ವ್ಯಾಪ್ತಿಯ ಕೆಂಗಣ್ಣಿಗೆ ಗುರಿಯಾಗುವ ಸಂಭವ ಬರಬಹುದು.

ಪ್ರಮುಖವಾಗಿ ಗ್ರಾಹಕ ಕಾಯ್ದೆ ಗ್ರಾಹಕರ ಹಿರತಕ್ಷಣೆಯನ್ನು ಕಾಪಾಡುವುದು ಎಂದಾದರೂ, ಗ್ರಾಹಕ ಎನ್ನುವ ಅರ್ಥ ವಿಶಾಲವಾಗಿದೆ. ಕಾಯ್ದೆಯಲ್ಲಿ ಗ್ರಾಹಕ ಎಂದರೆ ಸರಕನ್ನು ಉಪಯೋಗಿಸುವವ ಎಂದಿದ್ದರೂ ಅದರ ವ್ಯಾಪ್ತಿಯಲ್ಲಿ ವಿವಿಧ ಸೇವೆಗಳನ್ನು ಸೇರಿಸಲಾಗಿದೆ. ಶೈಕ್ಷಣಿಕ ಸೇವೆಗಳು ಗ್ರಾಹಕ ಕಾಯ್ದೆ ವ್ಯಾಪ್ತಿಗೆ ಒಳಪಡತೊಡಗಿವೆ. ಆದ್ದರಿಂದ ವಿದ್ಯಾರ್ಥಿ ಗ್ರಾಹಕನಾಗುತ್ತಾನೆ, ಶಿಕ್ಷಣ ಸಂಸ್ಥೆಗಳು ಸೇವೆಯನ್ನು ಕೊಡುವ ಸಂಸ್ಥೆಗಳಾಗುತ್ತವೆ. ಗ್ರಾಹಕ ಕಾಯ್ದೆ ಅಡಿಯಲ್ಲಿ ಈ ಕೆಳಗಿನ ಸೇವೆಗಳನ್ನು ಪರಿಗಣಿಸಲಾಗಿದೆ.[೨೪]

೧. ಮರುಮೌಲ್ಯಮಾಪನವನ್ನು ಬಿಡುಗಡೆ ಮಾಡುವುದು. ಈ ಸೇವೆಯಲ್ಲಿ ತಡಮಾಡಿದ ಕಾರಣ, ವಿದ್ಯಾರ್ಥಿ ಸಪ್ಲಿಮೆಂಟರಿ ಪರೀಕ್ಷೆಗೆ ಕಟ್ಟುವಂತೆ ಮಾಡಿದಾಗ, ವಿಶ್ವವಿದ್ಯಾಲಯದ ವಿರುದ್ಧ ವಿದ್ಯಾರ್ಥಿ ಗ್ರಾಹಕ ವೇದಿಕೆಗೆ ಮೊರೆ ಹೋದ ನಿದರ್ಶನವಿದೆ. ಈ ಕೇಸಿನಲ್ಲಿ ವಿದ್ಯಾರ್ಥಿ ಮರುಮೌಲ್ಯಮಾಪನದಲ್ಲಿ ತೇರ್ಗಡೆಹೊಂದಿದ ಇದರಿಂದ ವಿದ್ಯಾರ್ಥಿಗೆ ಮಾನಸಿಕ ತೊಂದರೆಯಾಗಿದೆ ಎಂದು ಗ್ರಾಹಕ ವೇದಿಕೆ ನಿರ್ಣಯಿಸಿ ರೂ ೫೦೦೦ ನ್ನು ಪರಿಹಾರವಾಗಿ ಕೊಡಿಸಿತು.[೨೫]

೨. ಡುಪ್ಲಿಕೇಟ್ ಪ್ರಮಾಣಪತ್ರ ವಿತರಣೆ ಮಾಡುವಾಗ ವಿಳಂಬ ಮಾಡಿದ್ದಕ್ಕೆ ಶಿಕ್ಷಣ ಸಂಸ್ಥೆ ವಿದ್ಯಾರ್ಥಿಯಿಂದ ಫೀ ತುಂಬಿಸಿಕೊಂಡು ಸೇವೆಯನ್ನು ಕೊಡುವಲ್ಲಿ ವಿಳಂಬ ಮಾಡಿದ್ದಕ್ಕೆ ಆಕ್ಷೇಪಿಸಿ ಗ್ರಾಹಕ ವೇದಿಕೆ ಆದೇಶ ಹೊರಡಿಸಿದೆ.[೨೬]

೩. ತಪ್ಪುದಾರಿಗೆಳೆಯುವ ಜಾಹೀರಾತು : ಶಿಕ್ಷಣ ಸಂಸ್ಥೆಯು ವಿದ್ಯಾರ್ಥಿಗಳಿಗೆ ತಪ್ಪು ಮಾಹಿತಿಯನ್ನು ಜಾಹೀರಾತಿನ ಮೂಲಕ ನೀಡಿ, ಅವರನ್ನು ತೊಂದರೆಗೆ ಒಳಪಡಿಸಿದರೆ, ವಿದ್ಯಾರ್ಥಿಗಳು ಗ್ರಾಹಕ ವೇದಿಕೆಯಲ್ಲಿ ನ್ಯಾಯ ಪರಿಹಾರಕ್ಕೆ ಅರ್ಜಿ ಹಾಕಬಹುದು.[೨೭]

೪. ವಿದ್ಯಾಭ್ಯಾಸದ ಪರಿಕರಗಳನ್ನು ಕೊಟ್ಟು ಕಳುಹಿಸುವಲ್ಲಿ ವಿಳಂಬ ನೀತಿ ಅನುಸರಿಸಿದರೆ ಅದು ಸೇವೆಯನ್ನು ಒದಗಿಸುವಲ್ಲಿ ನ್ಯೂನ್ಯತೆ ಎಂದಾಗುತ್ತದೆ. ದೂರಶಿಕ್ಷಣ ಸಂಸ್ಥೆ ಫೀ ಕೊಟ್ಟು ದಾಖಲೆ ಪಡೆದಾಗ ವಿದ್ಯಾರ್ಥಿಗಳಿಗೆ ಸರಿಯಾದ ಸಮಯಕ್ಕೆ ಅಭ್ಯಾಸ ಸಾಮಗ್ರಿಯನ್ನು ಕೊಟ್ಟು ಕಳುಹಿಸಬೇಕು, ಇಲ್ಲದಿದ್ದರೆ ವಿದ್ಯಾರ್ಥಿಗಳು ಅಮೂಲ್ಯವಾದ ಸಮಯವನ್ನು ಹಾಳುಮಾಡಿ, ಅವರು ಪರೀಕ್ಷೆಯಲ್ಲಿ ತೊಂದರೆ ಎದುರಿಸುವ ಪ್ರಸಂಗವನ್ನು ತಂದೊಡ್ಡಿದ್ದು, ಸಂಸ್ಥೆ ಗ್ರಾಹಕ ವೇದಿಕೆಯನ್ನು ಎದುರಿಸಿ ವಿದ್ಯಾರ್ಥಿಗಳಿಗೆ ಪರಿಹಾರ ಕೊಡಬಹುದಾದ ಪ್ರಸಂಗವನ್ನು ಎದುರಿಸಬೇಕಾಗುತ್ತದೆ.[೨೮]

೫. ಆಂತರಿಕ ಅಂಕಗಳನ್ನು ಕೊಟ್ಟು ಕಳುಹಿಸುವಲ್ಲಿ ವಿಳಂಬ ಮಾಡಿದರೆ ಶಿಕ್ಷಣ ಸಂಸ್ಥೆ ಗ್ರಾಹಕ ವೇದಿಕೆಯನ್ನು ಎದುರಿಸಬೇಕಾಗಬಹುದು. ಆಂತರಿಕ ಅಂಕಗಳ ಪಟ್ಟಿಯನ್ನು ವಿಶ್ವವಿದ್ಯಾಲಯಕ್ಕೆ ಕಳುಹಿಸಲು ಶಿಕ್ಷಣ ಸಂಸ್ಥೆ ತಡ ಮಾಡಿದಾಗ, ವಿದ್ಯಾರ್ಥಿ, ಗ್ರಾಹಕ ವೇದಿಕೆಯ ಸಹಾಯ ಕೋರಿದಾಗ, ಗ್ರಾಹಕ ವೇದಿಕೆ ವಿದ್ಯಾರ್ಥಿಗೆ ೨ ಲಕ್ಷ ಪರಿಹಾರ ಧನ ಕೊಡಿಸಲು ಸಹಾಯ ಮಾಡಿತು.[೨೯]

ಮೇಲಿನ ನಿದರ್ಶನಗಳಿಂದ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಗೆ ಇರುವ ಸೌಲಭ್ಯಗಳು, ವಿದ್ಯಾರ್ಥಿ ಸಮುದಾಯ ಫೀ ಕೊಟ್ಟಿರುವುದರಿಂದ ಗ್ರಾಹಕ ಹಿತರಕ್ಷಣಾ ಕಾಯ್ದೆ ಅಡಿಯಲ್ಲಿ

ಸೇವೆಯಾಗುವುದರಿಂದ ಸೇವಾ ನೂನ್ಯತೆಯ ಆಧಾರದ ಮೇಲೆ ಶಿಕ್ಷಣ ಸಂಸ್ಥೆಗಳನ್ನು ದಂಡನಾರ್ಹ ಎಂದು ಘೋಷಿಸಬಹುದು. ಮುಂಬರುವ ದಿನಗಳಲ್ಲಿ ಶಿಕ್ಷಣ ಸಂಸ್ಥೆಗಳ ಸೌಲಭ್ಯಗಳನ್ನು ಗ್ರಾಹಕ ಸಂರಕ್ಷಣಾ ಕಾಯ್ದೆಯ ಅಡಿಯಲ್ಲಿ ತರಬಹುದಾದ ಪ್ರಸಂಗಗಳು ಬರಬಹುದು. ಆದ್ದರಿಂದ ಶಿಕ್ಷಣ ಸಂಸ್ಥೆಗಳು ಹಾಗೂ ಇಲಾಖೆ ತುಂಬಾ ಜಾಗರೂಕರಾಗಿ ಕಾರ್ಯ ನಿರ್ವಹಸಬೇಕು.

ಗ್ರಾಹಕ ವೇದಿಕೆಗಳಲ್ಲಿ ನಿರ್ಣಯಿಸಲ್ಪಟ್ಟ ಕೇಸುಗಳು ಹಾಗು ಸಂರಕ್ಷಣಾ ಕಾಯ್ದೆಯ ಸಂಹಿತೆಗಳನ್ನ ಕೂಲಂಕೂಷವಾಗಿ ಪರಿಶೀಲಿಸಿದಾಗ ಹಲವು ನ್ಯೂನತೆಗಳನ್ನು ಹಾಗೂ ಅಸಂಬದ್ಧ ವಿಷಯಗಳು ಗೊತ್ತಾಗಲಾರದೆ ತೂರಿಕೊಂಡುಬಿಟ್ಟಿವೆ.

೧) ಅಳತೆಗೋಲು:

ಶಿಕ್ಷಣ ಸಂಸ್ಥೆಗಳ ಪ್ರಮುಖ ಕಾರ್ಯ ಉತ್ತಮವಾದ ಶಿಕ್ಷಣವನ್ನು ಒದಗಿಸುವುದು. ಇತರ ಸೇವೆಗಳಾದ ಪ್ರವೇಶ, ಮೌಲ್ಯಮಾಪನ, ಪರಿಣಾಮವನ್ನು ಬಿತ್ತರಿಸುವುದು, ಆಂತರಿಕ ಅಂಕಗಳ ಪಟ್ಟಿಯನ್ನು ರವಾನಿಸುವುದು. ಪ್ರಮಾಣ ಪತ್ರ ವಿತರಣೆ ಮುಂತಾದವುಗಳು ಎರಡನೆಯ ಸೇವೆಗಳಾಗುತ್ತವೆ. ಗ್ರಾಹಕವೇದಿಕೆಗಳಲ್ಲಿ ಪರಿಹಾರ ಕೋರಿದ ವಿದ್ಯಾರ್ಥಿಗಳು ಎರಡನೆಯ ಸೇವಾ ನ್ಯೂನತೆಗೆ ಬಂದಂಥ ಪ್ರಮುಖ ಸೇವೆ ಉತ್ತಮ ಶಿಕ್ಷಣದ ಕುರಿತು ಯಾವುದೇ ಸಾಧ್ಯವೋ ಅಂಥವುಗಳಿಗೆ ಮಾತ್ರ ದೂರಗಳನ್ನು ಸಲ್ಲಿಸಲು ಸಾಧ್ಯ. ಆದ್ದರಿಂದ ಶಿಕ್ಷಣ ಕೊಡುವ ಸಂಸ್ಥೆಗಳಾಗಲಿ, ತೆಗೆದುಕೊಳ್ಳುವ ವಿದ್ಯಾರ್ಥಿಗಳಾಗಲಿ ಗ್ರಾಹಕ ವೇದಿಕೆಯಾಗಲಿ, ಶಿಕ್ಷಣ ಸಂಸ್ಥೆಗಳ ಸೇವೆಗಳನ್ನು ಸರಿಯಾಗಿ ಅಳೆಯಲು ಸಾಧ್ಯವಾಗಿಲ್ಲ. ಯಾವ ಸೇವೆಯನ್ನು ಅಳೆಯಲು ಸಾಧ್ಯವೊ ಅವು ಮಾತ್ರ ಗ್ರಾಹಕ ರಕ್ಷಣಾ ಕಾಯ್ದೆಗೆ ಒಳಪಡುತ್ತವೆ

೨) ಗ್ರಾಹಕ ಸಂರಕ್ಷಣಾ ಕಾಯಿದೆ ೧೯೮೬ ರ ಅಡಿಯಲ್ಲಿ ಬರುವ ಸೇವೆಗೆ ಬೆಲೆಯನ್ನು ಕೊಡುವುದು ಪ್ರಮುಖವಾದ ವಿಷಯ. ಬೆಲೆ ನೀಡದೆ ಸೇವೆಗಳನ್ನು ಕಾಯ್ದೆ ಅಡಿಯಲ್ಲಿ ಸೇರಿಸಿಲ್ಲ. ಶಿಕ್ಷಣ ಸಂಸ್ಥೆಗಳಲ್ಲಿ ಫೀ ಕೊಟ್ಟು ಸೇವೆ ಪಡೆಯುವುದನ್ನು ಕಾಯ್ದೆಯಲ್ಲಿ ಸೇರಿಸಲಾಗಿದೆ. ಫೀ ಕೊಡದೆ ಪಡೆದ ಸೇವೆಗೆ ಕಾಯ್ದೆಯಲ್ಲಿ ಬೆಲೆ ಇಲ್ಲ. ಕಾಯ್ದೆ ವ್ಯಾಪ್ತಿಯಲ್ಲಿ ಬರುವ ಬೆಲೆಯ ಕುರಿತು ನಮೂದಿಸಲಾಗಿದೆ. ಆದರೆ ಅದರ ಅವಶ್ಯಕತೆಗೆ ಕಾಯ್ದೆಯಲ್ಲಿ ಯಾವ ಕಲಂ ಇಲ್ಲ.

ಆದ್ದರಿಂದ ವಿದ್ಯಾರ್ಥಿಗಳು ಸರಕಾರವು ನೀಡುವ ಸೌಲಭ್ಯದಿಂದ ಪಡೆಯುವ ಸೇವೆಯು ಈ ಒಂದು ಕಾಯ್ದೆ ವ್ಯಾಪ್ತಿಗೆ ಬರುವುದು ಸಾಧ್ಯವೆ? ಏಕೆಂದರೆ ಅಂತಹ ಸೇವೆಗೆ ಅವರು ಯಾವುದೆ ಫೀ ಕಟ್ಟಿರುವುದಿಲ್ಲಾ. ಉತ್ತರ ಹೌದು, ಅಂತಹ ಸೇವೆಗೆ ವಿದ್ಯಾರ್ಥಿಗಳ ಬದಲಾಗಿ ಸರಕಾರ ಫೀಯನ್ನು ಕಟ್ಟುತ್ತದೆ. ಆದ್ದರಿಂದ ಅಂತಹ ಸೇವೆ ಕೂಡ ಕಾಯ್ದೆ ವ್ಯಾಪ್ತಿಯಲ್ಲಿ ಬರುತ್ತದೆ.

ಆದ್ದರಿಂದ ಗ್ರಾಹಕ ಕಾಯ್ದೆಯ ಅಡಿಯಲ್ಲಿ ವಿದ್ಯಾರ್ಥಿಗಳು ಕೂಡ ಗ್ರಾಹಕರೇ ಅವರಿಗೆ ನೀಡುವ ಸೇವೆಯ ಕುರಿತು ಶಿಕ್ಷಣ ಸಂಸ್ಥೆಗಳು ತುಂಬಾ ಜಾಗರೂಕರಾಗಿ, ಜವಾಬ್ದಾರಿಯಿಂದ ವರ್ತಿಸಬೇಕು. ಇಲ್ಲದಿದ್ದರೆ, ಯಾರೂ ಬೇಕಾದರೂ, ಶಿಕ್ಷಣ ಸಂಸ್ಥೆಯನ್ನಾಗಲಿ, ಅದಕ್ಕೆ ಸಂಭದಿಸಿದವರನ್ನಾಗಲಿ ಗ್ರಾಹಕ ಕಾಯ್ದೆ ಅಡಿಯಲ್ಲಿ ಶಿಕ್ಷಿಸಬಹುದು.

೩) ಅಸಂಗತ ನಿರ್ಣಯಗಳು :

ಶಿಕ್ಷಣಕ್ಕೆ ಸಂಬಂಧಿಸಿದ ವಾದಗಳನ್ನು ನಿರ್ಣಯಿಸುವುವಾಗ ಬೇರೆ, ಬೇರೆ ಗ್ರಾಹಕ ವೇದಿಕೆಗಳು ಬೇರೆ ಬೇರೆಯಾಗಿ ತೀರ್ಪನ್ನು ನೀಡಿ, ವಿದ್ಯಾರ್ಥಿ ಸಮೂದಾಯಕ್ಕೆ ಗೊಂದಲ ಉಂಟು ಮಾಡಿದ ನಿದರ್ಶನಗಳಿವೆ. ಒಂದೇ ತರಹದ ವ್ಯಾಜ್ಯಗಳಿಗೆ ಎರಡು ರೀತಿಯ ತೀರ್ಪನ್ನು ನೀಡಿದ ಉದಾಹರಣೆಗಳಿವೆ. ಇಂತಹ ಅಸಂಗತ ನಿರ್ಣಯಗಳ ಕುರಿತು ಮುಂದೆ ಎಚ್ಚರವಹಿಸುವುದು ಅವಶ್ಯವಾಗಿದೆ.

೪) ವೇದಿಕೆಗಳು ತೀರ್ಪನ್ನು ನೀಡುವಾಗ ಅಸ್ಪಷ್ಟತೆಯನ್ನು ಅಳವಡಿಸಿ ಗೊಂದಲ ಮೂಡಿಸಿವೆ. ಶಿಕ್ಷಣ ಸಂಸ್ಥೆಗಳು ಒದಗಿಸುವ ಸೇವೆಗಳಲ್ಲಿ ಯಾವ ಸೇವೆಗಳನ್ನು ಗ್ರಾಹಕ ಸೇವೆಗಳು ಹಾಗು ಯಾವ ಸೇವೆಗಳ ಗ್ರಾಹಕರಿಗೆ ಸಂಬಂದಿಸಲಾರದ ಸೇವೆಗಳು ಇನ್ನೂ ಅಸ್ಪಷ್ಟತೆ ಹೋಗಲಾಡಿಸಲಾಗಿಲ್ಲ. ಹಾಗೆಯೆ ಅರ್ಹ ಶಿಕ್ಷಣ ನೀಡುವಾಗ ತೆಗೆದುಕೊಳ್ಳುವ ಫೀ, ಗ್ರಾಹಕ ಕಾಯ್ದೆಯಲ್ಲಿ ವಿವರಿಸಿದ ಬೆಲೆಗೆ ಸಮವೆ? ಇದು ಕೂಡ ಅಸ್ಪಷ್ಟತೆ ಇದೆ. ಗ್ರಾಹಕ ಕಾಯ್ದೆಯಲ್ಲಿ ಬರುವ ಗ್ರಾಹಕ ಪದ ವಿದ್ಯಾರ್ಥಿಗೆ ಅನ್ವಯವಾಗುತ್ತದೊ ಇಲ್ಲವೊ ಇದೂ ಕೂಡ ಇನ್ನೂ ಗೊಂದಲಮಯವಾಗಿದೆ.[೩೦]

**೮. ಪರಿಸರ – ಸಂರಕ್ಷಣೆ:**

ಗ್ರಾಹಕರು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ಪರಿಸರ ಮಾಲಿನ್ಯವೂ ಒಂದು. ವಿಶೇಷವಾಗಿ ನಗರಗಳಲ್ಲಿ ವಾಸಿಸುವ ನಾಗರಿಕರು, ಪರಿಸರ ಮಾಲಿನ್ಯದ ಫಲವಾಗಿ ಕೆಲವು ದೈಹಿಕ ಹಾಗೂ ಮಾನಸಿಕ ರೋಗಗಳಿಂದ ಬಳಲುತ್ತಾರೆ. ಜನಸಂಖ್ಯೆ, ನಾಶವಾಗುತ್ತಿರುವ ಕೆರೆಗಳು, ಆಟದ ಮೈದಾನಗಳು, ಉದ್ಯಾನವನಗಳು ಪರಿಸರವನ್ನು ಮಾಲಿನ್ಯಗೊಳಿಸಿ ಮಾನವ ಜೀವಿಸಲಾಗದ ಪರಿಸ್ಥಿತಿಗೆ ಕೊಂಡೊಯ್ಯುತ್ತಿವೆ. ಪರಿಸರ ಮಾಲಿನ್ಯದ ಪರಿಣಾಮವಾಗಿ ನಾಗರಿಕರು ಸ್ವಾಸ್ಥತೆಯನ್ನು ಕಳೆದುಕೊಂಡು ಔಷಧ ಮತ್ತು ಆಸ್ಪತ್ರೆಯ ಮೊರೆ ಹೋಗಬೇಕಾಗಿದೆ. ಜೀವಿಯ ಮೇಲೆ ಹಾನಿಕಾರಕ ಪರಿಣಾಮ ಉಂಟು ಮಾಡುವ ಅಥವಾ ಯಾವುದೇ ಜೀವಿಯ ಆರೋಗ್ಯಕ್ಕೆ ಅಪಾಯ ತರುವ ಪರಿಸರದ ನೆಲ, ಜಲ ವಾಯುವಿನಲ್ಲಾಗುವ ಯಾವುದೆ ಭೌತಿಕ, ರಾಸಾಯನಿಕ ಅಥವಾ ಜೈವಿಕ ಗುಣಗಳಲ್ಲಿನ ಅಹಿತಕರ ಬದಲಾವಣೆಗೆ ಪರಿಸರ ಮಾಲಿನ್ಯವೆನ್ನುತ್ತಾರೆ.

ಒಬ್ಬ ಜವಾಬ್ದಾರಿಯುತ ಗ್ರಾಹಕರಾಗಿ ನಾವು ನಮ್ಮ ಕರ್ತವ್ಯ ಪಾಲಿಸಬೇಕು. ಇದಕ್ಕೆ ತಪ್ಪಿದಲ್ಲಿ ನಾವು ಗ್ರಾಹಕ ಕಾಯ್ದೆ ಅಡಿಯಲ್ಲಿ ಗ್ರಾಹಕ ವೇದಿಕೆಯನ್ನು ಎದುರಿಸಬೇಕಾಗುತ್ತದೆ.

೧) ಜಲ

೧. ನೀರು ಹರಿಯುತ್ತಿರುವ ಜಾಗದಲ್ಲಿ ಅಥವಾ ನಲ್ಲಿಯ ಬಳಿ ಕಸ, ಕಡ್ಡಿ ಮುಂತಾದವುಗಳನ್ನು ಎಸೆಯುವುದು.

೨. ಸ್ವಚ್ಚಮಾಡುವ ಸಾಧನಗಳಾದ ಸಾಬೂನೂ ಹಾಗು ಡಿಟರ್ಜಂಟಗಳು ಜಲಮಾಲಿನ್ಯಕ್ಕೆ ಕಾರಣ.

೩. ಉಪಯೋಗಿಸದೆ ಉಳಿದ ಆಹಾರ ಪದಾರ್ಥಗಳನ್ನು ಹರಿಯುವ ನೀರಿನಲ್ಲಿ ಎಸೆಯದಂತೆ ನೋಡಿಕೊಳ್ಳುವುದು.

೨) ಘನ ತ್ಯಾಜ್ಯ

ಅನಾವಶ್ಯಕಗಳನ್ನು ಸರಿಯಾದ ವಿಲೇವಾರಿಯಿಂದ ಪರಿಸರ ವಿನಾಶವನ್ನು ತಪ್ಪಿಸಬಹುದು. ಉದ್ಯಾನವನ, ರಸ್ತೆಗಳನ್ನು ಅಕ್ಕಪಕ್ಕದ ಮನೆಗಳಲ್ಲಿ, ಆಟದ ಮೈದಾನ ಮುಂತಾದವುಗಳನ್ನು ಸ್ವಚ್ಛವಾಗಿ ಇಟ್ಟಿರಬೇಕು. ವಿಹಾರಾರ್ಥವಾದ ಪ್ರೇಕ್ಷಣಿಯ ಸ್ಥಳಗಳನ್ನು ನಮ್ಮದೆಂದು ಧೋರಣೆ ಹೊಂದಬೇಕು. ನಗರ ಸ್ವಚ್ಛಗೊಳಿಸುವ ಸಂಸ್ಥೆಯ ಸದಸ್ಯರಾಗಿಯೋ ಅಥವಾ ಗ್ರಾಹಕರ ಸ್ವತ ಸಂಸ್ಥೆ ಪ್ರಾರಂಭಿಸಬೇಕು ರಟ್ಟಿನ ಹಾಗು ಪ್ಲಾಸ್ಟಿಕ್ ಪ್ಯಾಕಗಳ ಬಳಕೆಯನ್ನು ನಿಷೇಧ ಮಾಡಬೇಕು.

೩) ವಾಯುಮಾಲಿನ್ಯಕ್ಕೆ ಮೂಲಕಾರಣ ವಾಹನಗಳು ಹಾಗು ಅವುಗಳನ್ನು ಬಳಸುವ ವಿಧಾನ. ವಾಹನಗಳನ್ನು ಸರಿಯಾಗಿ ಚಾಲನೆ ಮಾಡುವುದು ಸೀಮೆ ಎಣ್ಣೆ ಉಪಯೋಗಿಸದೆ ಪೆಟ್ರೋಲ್ ಬಳಸಬೇಕು. ಸಾರ್ವಜನಿಕ ಪ್ರದೇಶದಲ್ಲಿ ಹಸಿವಸ್ತುಗಳಿಗೆ ಬೆಂಕಿ ಹಚ್ಚಿ ಸುಡುವುದನ್ನು ತಡೆಗಟ್ಟಬೇಕು.

೪) ಇತ್ತೀಚಿನ ದಿನಗಳಲ್ಲಿ ಶಬ್ದ ಮಾಲಿನ್ಯ ಅತಿ ಭೀಕರ ರೂಪತಾಳುತ್ತಿದೆ. ಇತರ ಮಾಲಿನ್ಯಕ್ಕಿಂತ ಶಬ್ದ ಮಾಲಿನ್ಯ ನಾಗರಿಕರ ಗಮನ ಸೆಳೆದಿಲ್ಲ. ಆದರೆ ಶಬ್ದ ಮಾಲಿನ್ಯ ಹೆಚ್ಚು ಪರಿಣಾಮಕಾರಿ.

ಕೈಗಾರಿಕಾ ಕ್ಷೇತ್ರದಲ್ಲಿ ಮಾಹನ ನಿಲ್ದಾಣಗಳಿಗೆ ಮತ್ತು ರೈಲ್ವೆ ನಿಲ್ದಾಣಗಳಿಗೆ ಸೀಮಿತವಾಗಿದ್ದ ಶಬ್ದ ಮಾಲಿನ್ಯ ಈಗ ನಗರಗಳನ್ನು ವ್ಯಾಪಿಸಿದೆ. ಶಬ್ದ ಮಾಲಿನ್ಯ ಗ್ರಾಹಕರ ಮೇಲೆ ವಿಕೃತ ಪರಿಣಾಮ ಉಂಟು ಮಾಡಿದೆ. ಶಬ್ದದಿಂದ ರಕ್ತದ ಒತ್ತಡ, ಕೋಪ, ನರಗಳ ದೌರ್ಬಲ್ಯ ಇತ್ಯಾದಿ ಸಂಭವಿಸಬಹುದೆಂದು ವೈದ್ಯಕೀಯ ವರದಿ ತಿಳಿಸಿದೆ.

ಶಬ್ದ ಮಾಲಿನ್ಯ ತಡೆಯಲು ವೈಯಕ್ತಿಕವಾಗಿ ಮೆಲು ಧ್ವನಿಯಲ್ಲಿ ಮಾತನಾಡುವುದು, ರೇಡಿಯೋ, ಟಿ.ವಿ. ಶಬ್ದಗಳನ್ನು ಕಡಿಮೆ ಮಾಡಬೇಕು. ಗೃಹ ಬಳಕೆ ವಸ್ತುಗಳು ವಾಹನ ಮುಂತಾದವುಗಳ ಕಡಿಮೆ ಶಬ್ದ ಬರುವಂತೆ ಮಾಡಬೇಕು. ಧ್ವನಿವರ್ಧಕಗಳ ಕುರಿತು ಸಂಬಂಧಿತ ಅಧಿಕಾರಿಗಳಿಗೆ ತಿಳಿಸಬೇಕು.[೩೧]

೯. ಮಾಹಿತಿ ಪಡೆಯುವ ಹಕ್ಕು ಕಾಯ್ದೆ ೨೦೦೨:

ನಿರ್ಮಾಣಗೊಂಡ ಹೊಸ ರಸ್ತೆಗೆ ತಗುಲಿದ ವೆಚ್ಚ ಎಷ್ಟು ಎಂದು ತಿಳಿಯಲು ಕಾಮಗಾರಿಯನ್ನು ಕೈಗೊಂಡ ಗುತ್ತಿಗೆದಾರರು ಯಾರು, ಆತನು ಯಾವ ಕಂಪನಿಯವನು, ಈ ರಸ್ತೆ ನಿರ್ಮಾಣಕ್ಕೆ ಸರ್ಕಾರ ಮಂಜೂರ ಮಾಡಿದ ಹಣ ಎಷ್ಟು? ರಸ್ತೆಯ ಗುಣಮಟ್ಟ ಚೆನ್ನಾಗಿದೆಯೇ? ಮುಂತಾದವುಗಳ ಮಾಹಿತಿ ಬೇಕಾದಾಗ ಮಾಹಿತಿ ಹಕ್ಕು ಕಾಯ್ದೆ ೨೦೦೨ ರ ಅಡಿಯಲ್ಲಿ ಮಾಹಿತಿಯನ್ನು ಪಡೆಯಬಹುದು. ಈ ಕಾಯ್ದೆಯ ಪ್ರಕಾರ ಸರ್ಕಾರಿ ಇಲಾಖೆಗಳು ಹಾಗೂ ರಾಜ್ಯ ಸರ್ಕಾರದ ಅನುದಾನ ಪಡೆದಿರುವ ಸಂಘ, ಸಂಸ್ಥೆಗಳು ಸಾರ್ವಜನಿಕರ ಬೇಡಿಕೆಗೆ ಸ್ಪಂದಿಸಬೇಕಾಗುತ್ತದೆ. ಎಲ್ಲ ಕಛೇರಿಗಳಲ್ಲಿ ಈ ಕೆಲಸ ನೋಡಿಕೊಳ್ಳಲು ಒಬ್ಬ ಅಧಿಕಾರಿಯನ್ನು ನೇಮಿಸಿರುತ್ತಾರೆ. ಮಾಹಿತಿ ಬೇಕಾಗುವವರು ನಿಗದಿತ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಬೇಕು. ಸಕ್ಷಮ ಅಧಿಕಾರಿಗಳು ಅರ್ಜಿ ಸ್ವೀಕೃತವಾದ ಏಳು ದಿನಗಳಲ್ಲಿ ಉತ್ತರ ನೀಡಿ, ಮಾಹಿತಿ ನೀಡಲು ಎಷ್ಟು ಹಣ ಪಾವತಿ ಮಾಡಬೇಕೆಂದು ಸೂಚಿಸುತ್ತಾರೆ. ಮೊತ್ತವನ್ನು ಪಾವತಿಸಿದ ಹದಿನೈದು ದಿನಗಳಲ್ಲಿ ಕೇಳಿದ ಮಾಹಿತಿ ನೀಡಲಾಗುತ್ತದೆ.

**ಕಾಯ್ದೆಯ ಮುಖ್ಯಾಂಶಗಳು:**

ಪ್ರತಿಯೊಬ್ಬ ನಾಗರೀಕನು ಸರ್ಕಾರದಿಂದ ಹಾಗು ಸಾರ್ವಜನಿಕ ಕಛೇರಿಗಳಿಂದ ಮಾಹಿತಿ ಪಡೆಯುವ ಹಕ್ಕು ಪಡೆದಿದ್ದಾನೆ. ಪ್ರತಿಯೊಂದು ಸರ್ಕಾರಿ ಕಛೇರಿಯಲ್ಲಿ ಒಂದು ನಾಮಫಲಕ ಇರಬೇಕು. ಈ ನಾಮಫಲಕದಲ್ಲಿ ಕಛೇರಿಯ ಕಾರ್ಯಾಚರಣೆ ಅದರ ಮೂಲ ಉದ್ದೇಶಗಳು ಸಾರ್ವಜನಿಕರಿಗೆ ದೊರೆಯಬಹುದಾದ ಸೌಕರ್ಯಗಳು ಹಾಗೂ ಮಾಹಿತಿ ಪಡೆಯುವ ವಿಧಾನವನ್ನು ತಿಳಿಸಿರುತ್ತಾರೆ.

ದೇಶದ ಸುಭದ್ರತೆ, ಸಾಕ್ಷರತೆ, ಅಂತರ ರಾಷ್ಟ್ರೀಯ ಸಂಬಂಧ ಹಾಗು ಮಾಹಿತಿ ಪಡೆಯಲು ಹಕ್ಕು ಕಾಯ್ದೆಯ ನಿಯಮ ೪ರ ಅನುಸಾರ ವಿನಾಯತಿ ನೀಡಿರುವ ವಿಷಯಗಳ ಬಗ್ಗೆ ಮಾಹಿತಿ ನೀಡಲಾಗುವುದಿಲ್ಲ. ಅಲ್ಲದೆ ನಿಯಮ ೬ ರಲ್ಲಿಯೂ ಕೆಲವು ವಿಷಯಗಳಿಗೆ ವಿನಾಯತಿ ನೀಡಲಾಗಿದೆ.

ಮಾಹಿತಿ ನೀಡುವಲ್ಲಿ ತಡ ಮಾಡಿದರೆ ಅಥವಾ ಸರಿಯಾದ ಕಾರಣವಿಲ್ಲದೆ ಮಾಹಿತಿ ನಿರಾಕರಿಸಿದರೆ ಸಂಬಂಧಪಟ್ಟ ಅಧಿಕಾರಿಗೆ ದಂಡವಿದಿಸಿ ಅವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸಬಹುದು.[೨]

## ೧೦. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ:

ಇಲಾಖೆ ಸಾರ್ವಜನಿಕರಿಗೆ ಹಾಗು ಗ್ರಾಹಕರಿಗೆ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಈ ಯೋಜನೆಗಳನ್ನು ೧) ಪಡಿತರ ವ್ಯವಸ್ಥೆ ೨) ನಾಗರಿಕ ಸರಬರಾಜು ಎಂದು ವಿಭಾಗಗಳಾಗಿ ಮಾಡಬಹುದು.

**ಪಡಿತರ ವ್ಯವಸ್ಥೆ:**

ಇಲಾಖೆ ಪಡಿತರ ಚೀಟಿಗಳನ್ನು ಹಂಚುವ ವ್ಯವಸ್ಥೆ ಮಾಡಿದೆ. ಈ ಪಡಿತರ ಚೀಟಿಗಳನ್ನು ಹಂಚುವರೆಗೆ ಮೂರು ಯೋಜನೆಗಳನ್ನು ಹಾಕಿಕೊಂಡಿದೆ.

೧. ಅಕ್ಷಯ ಯೋಜನೆ (ಬಿ.ಪಿ.ಎಲ್): ಗ್ರಾಮೀಣ ಪ್ರದೇಶಗಳಲ್ಲಿ ವಾರ್ಷಿಕ ವರಮಾನ ರೂ ೧೨೦೦೦ ಹಾಗೂ ಅದಕ್ಕಿಂತ ಕಡಿಮೆ. ಪಟ್ಟಣ ಪ್ರದೇಶಗಳಲ್ಲಿ ವರಮಾನ ೧೭೦೦೦ ರೂ ಹಾಗೂ ಅದಕ್ಕಿಂತ ಕಡಿಮೆ ಇರುವ ಕುಟುಂಬಗಳಿಗೆ ಪ್ರತಿಯೊಬ್ಬ ಸದಸ್ಯರಿಗೆ ೧ ಕೆ.ಜಿ ಅಕ್ಕಿ, ೧ ಕೆಜಿ ಗೋಧಿ.

೨. ಅನ್ನಪೂರ್ಣ ಯೋಜನೆ: ಯಾವುದೇ ಮೂಲದ ಆದಾಯವಿಲ್ಲದ ಸರ್ಕಾರದಿಂದ ವೃದ್ಧಾಪ್ಯವೇತನ ಪಡೆಯುದೇ ಇರುವ ೬೫ ವಯಸ್ಸು ಅದಕ್ಕಿಂತಲೂ ಹೆಚ್ಚು ವಯಸ್ಸು ಇರುವ ವಯೋವೃದ್ಧರಿಗೆ ಕೇಂದ್ರ ಸರಕಾರದ ಈ ಯೋಜನೆಯಡಿ ಪ್ರತಿ ತಿಂಗಳು ಪಡಿತರವನ್ನು ಉಚಿತವಾಗಿ ನೀಡಲಾಗುವುದು.

೩. ಅಂತ್ಯೋದಯ ಅನ್ನಯೋಜನೆ: ಕೇಂದ್ರ ಸರ್ಕಾರದ ಈ ಯೋಜನೆಯಡಿ ಅತ್ಯಂತ ಕಡುಬವರೆಂದು ಗುರುತಿಸಲ್ಪಡುವವರು ಬರುತ್ತಾರೆ. ಇವರಿಗೆ ಅಕ್ಕಿ, ಗೋಧಿ, ಸಕ್ಕರೆ ಲಭ್ಯತೆ ಅನುಸಾರ ಹಾಗು ಸೀಮೆ ಎಣ್ಣೆಯನ್ನು ಅನೀಲ ರಹಿತ ಕಾರ್ಡುಗಳಿಗೆ ಮಾತ್ರ ಹಂಚಲಾಗುವುದು.

೪. ಎ.ಪಿ.ಎಲ್: ಅಕ್ಷಯ ಅನ್ನಪೂರ್ಣ ಅಂತ್ಯೋದಯ ಪಡಿತರ ಚೀಟಿಗಳಿಗೆ ನಿಗಧಿಪಡಿಸಿರುವ ಅರ್ಹತೆಗಳಿಗೂ ಮೀರಿ ಆದಾಯ ಹೊಂದಿರುವ ಕುಟುಂಬಗಳು ಎಪಿಎಲ್ ಪಡಿತರ ಚೀಟಿಯನ್ನು ಹೊಂದಬಹುದಾಗಿರುತ್ತದೆ.

ಕರ್ನಾಟಕ ರಾಜ್ಯದಲ್ಲಿರುವ ಪ್ರತಿಯೊಂದು ಕುಟುಂಬವು ಅವರಿಗೆ ಅನ್ವಯಿಸುವ ಒಂದು ಪಡಿತರ ಚೀಟಿಯನ್ನು ಪಡೆಯಲು ಅರ್ಹತೆ ಹೊಂದಿರುತ್ತದೆ. ಪಡಿತರ ಚೀಟಿಯನ್ನು ಪಡೆಯಲು ಅರ್ಜಿ ನಮೂನೆಗಳನ್ನ ಸಂಬಂಧಪಟ್ಟ ಕಚೇರಿಗಳಲ್ಲಿ ನಿಗದಿತ ಶುಲ್ಕ ಪಾವತಿಸಿ ಪಡೆಯಬಹುದು. ಮಧ್ಯವರ್ತಿಗಳ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪುರಸ್ಕರಿಸಲಾಗುವುದಿಲ್ಲ. ನಂತರ ಆಹಾರ

ನಿರೀಕ್ಷರು ಸ್ಥಳ ತನಿಖೆ ಮಾಡಿ ಅರ್ಹತೆಯನ್ನು ಪರಿಶೀಲಿಸಿ ಸಲ್ಲಿಸುತ್ತಾರೆ. ಅಧೀಕೃತವಾಗಿ ಕಛೇರಿಯಲ್ಲಿ ನಿರ್ವಹಿಸುತ್ತಿರುವ ಕಾರ್ಯ ನಿಯೋಜನಾ ಪುಸ್ತಕದಲ್ಲಿ ಸಹಿ ಪಡೆದು ಕಾರ್ಡನ್ನು ವಿತರಿಸಲಾಗುವುದು.

**ನಾಗರಿಕ ಸರಬರಾಜು**

ಅಗತ್ಯ ವಸ್ತುಗಳ ಕಾಯ್ದೆ ೧೯೫೫ ರ ಕಲಂ ೩ ರಂತೆ ಈ ಕೆಳಗಿನ ಆದೇಶಗಳನ್ನು ಹೊರಡಿಸಲಾಗಿದೆ

೧. ದಿ. ಲ್ಯೂಬ್ರಿಕೆಂಟ್ ಆಯಿಲ್ಸ್ ಆಂಡ ಗ್ರೀಸಸ್ ಆದೇಶ ೧೯೮೭.

೨. ದಿ.ಕೆರೋಸಿನ ಆದೇಶ ೧೯೯೮.

೩. ಎಡಿಬಲ್ ಆಯಿಲ್ ಪ್ಯಾಕೇಜಿಂಗ ಆದೇಶ ೧೯೯೮.

೪. ಲಿಕ್ವಿಪೈಡ್ ಪೆಟ್ರೋಲಿಯಂ ಗ್ಯಾಸ ಆದೇಶ ೨೦೦೦.

೫. ಅಕ್ವಿಜೇಷನ್, ಸೇಲ್ ಸ್ಟೋರೇಜ್,ಪ್ರಿವೆನ್ಯನ್ ಆಪ್ ಯೂಸ ಇನ್ ಅಟೋಮೊಬೈಲ್ಸ್ ಆರ್ಡರ್ ೨೦೦೦.

೬. ಮೋಟಾರ, ಸ್ಪಿರಿಟ್ ಆಂಡ್ ಹೈಸ್ಪಿಡ ಡಿಸೆಲ್ ಆದೇಶ ೨೦೦೦.

ಆಹಾರ ಪಡಿತರಗಳು ನಿಗದಿತ ಪ್ರಮಾಣದಲ್ಲಿ ಹಾಗೂ ಬೆಲೆಯಲ್ಲಿ ಹಂಚಿಕೆಯಾಗದಿದ್ದಲ್ಲಿ, ಸಂಬಂಧಿಸಿದ ಎಲ್ಲ ಅಧಿಕಾರಿಗಳನ್ನು ಸಂಪರ್ಕಿಸಿ ದೂರನ್ನು ನೀಡಬಹುದಾದ ವ್ಯವಸ್ಥೆ ಇದೆ. ಪೆಟ್ರೋಲ್/ಡೀಸೆಲ್ ಕಲಬೆರಕೆ ಪ್ರಕರಣ ಅಡುಗೆ ಅನಿಲದ ದುರ್ಬಳಕೆ, ಸಾರ್ವಜನಿಕ ವಿತರಣಾ ಪದ್ದತಿಯಡಿಯಲ್ಲಿನ ಸೀಮೆ ಎಣ್ಣೆಯ ಕಾಳಸಂತೆ ಪ್ರಕರಣಗಳು ಖಾದ್ಯ ತೈಲಗಳನ್ನು ಪ್ಯಾಕ ಮಾಡದೆ ಬಿಡಿಯಾಗಿ ಮಾರಾಟ ಮಾಡುವ ಪ್ರಕರಣಗಳು ಇಂತಹ ಎಲ್ಲ ಪ್ರಕರಣಗಳ ಬಗ್ಗೆ ತಪ್ಪಿತಸ್ಥರ ವಿರುದ್ಧ ಮೇಲ್ಕಾಣಿಸಿರುವ ಆದೇಶಗಳಂತೆ ಕ್ರಮ ಜರುಗಿಸಬಹುದು.[೩೩]

ಭಾರತದಲ್ಲಿ ಈಗ ಇಪ್ಪತ್ತೈದಕ್ಕಿಂತಲೂ ಹೆಚ್ಚು ಗ್ರಾಹಕ ಶಾಸನಗಳ ಕಾಯ್ದೆಗಳು, ಮಾರಾಟಗಾರರ ಮತ್ತು ಗ್ರಾಹಕರ ಸಂಬಂಧವನ್ನು ಸುವ್ಯವಸ್ಥಿತವಾಗಿಡುವಲ್ಲಿ ಮಹತ್ವದ ಪಾತ್ರಗಳನ್ನು ನಿರ್ವಹಿಸುತ್ತಿವೆ. ಗ್ರಾಹಕ ಶಾಸನಗಳು ಶಾಸನಬದ್ಧ ಅಸ್ತ್ರಗಳಾಗಿ ಗ್ರಾಹಕರ ಆರ್ಥಿಕ ಹಿತವನ್ನು ಕಾಪಾಡುತ್ತವೆ. ಆದರೆ ಈ ಶಾಸನಗಳಲ್ಲಿ ಹೊಂದಾಣಿಕೆ ಇರದೆ ಗ್ರಾಹಕನಿಗೆ ದೊರಕಬೇಕಾದ ನ್ಯಾಯ ದೊರಕುವುದಿಲ್ಲ. ಉತ್ತಮ ಶಾಸನಗಳಿದ್ದರೂ, ಅವುಗಳ ಪರಿಣಾಮ ಕಾರಿಯಾಗಿ ಉಪಯೋಗವಾಗದೇ ಗ್ರಾಹಕನಿಗೆ ನಿರಾಶೆಯಾಗುತ್ತಿದೆ. ಈ ಶಾಸನಗಳು ಗ್ರಾಹಕರ ಸಂರಕ್ಷಣೆಯನ್ನು ಕಾಪಾಡುವಲ್ಲಿ ವಿಫಲವಾಗುತ್ತಿವೆ. ಶಾಸನಗಳಿಗೆ ಗ್ರಾಹಕ ಸಂರಕ್ಷಣೆಗೆ ಆಶ್ವಾಸನೆ ಕೊಡಲು ಸಾಧ್ಯವಿಲ್ಲ.

ಗ್ರಾಹಕ ಶಾಸನಗಳು ಹಾಗೂ ಸರ್ಕಾರದ ನಿರ್ಬಂಧಿತ ಏಜೆನ್ಸಿಗಳು ಗ್ರಾಹಕರ ಅಹವಾಲಿಗೆ ಉತ್ತರವಾಗಲಾರವು. ಶಾಸನಗಳು ಮೋಸವನ್ನು ಕಂಡುಹಿಡಿಯುವ ಸಾಧನಗಳಾಗಬಹುದು. ಎಲ್ಲಿಯವರೆಗೆ ಸ್ವಹಿತಕ್ಕೆ, ಲಾಭಕ್ಕೆ, ಗಮನ ಕೊಟ್ಟು ಕಾನೂನನ್ನು ಉಲ್ಲಂಘಿಸುವ ಜನರು ಇರುತ್ತಾರೋ, ಅಲ್ಲಿಯವರೆಗೆ ಮೋಸದ ವ್ಯಾಪಾರಿ ಪದ್ಧತಿಗಳನ್ನು ಪೂರ್ತಿಯಾಗಿ ಅಳಿಸಲಾಗದು ಕೆಲವರಿಗೆ ಕಾನೂನು ಸವಾಲಿದ್ದಂತೆ. ಕಾನೂನಿನ ನ್ಯೂನ್ಯತೆಗಳನ್ನು ಹುಡುಕಿ ಅವುಗಳನ್ನು ಉಪಯೋಗಿಸಿ, ಕಾನೂನನ್ನು ಉಲ್ಲಂಘಿಸದೆ, ಲಾಭಗಳಿಸುವುದನ್ನೇ ಅವರು ಕಾಯಕ ಮಾಡಿಕೊಂಡಿದ್ದಾರೆ. ಶಾಸನ ಒಳ್ಳೆಯವರ ಜೊತೆ ಚೆನ್ನಾಗಿ ಕೆಲಸಮಾಡುತ್ತದೆ. ಆದರೆ ಶಾಸನಗಳನ್ನು ನಿರ್ಲಕ್ಷಿಸುವವರನ್ನು ಅದು ಏನು ಮಾಡದು. ಅಪ್ರಾಮಾಣಿಕ ಜನರನ್ನು ಬಿಟ್ಟುಬಿಡುವುದರಿಂದ ಶಾಸನಗಳು ಗ್ರಾಹಕರ ಸಂರಕ್ಷಣೆಯಲ್ಲಿ ಸೋಲನ್ನು ಅನುಭವಿಸುತ್ತವೆ. ಹೀಗೆ ಪ್ರತಿಯೊಂದು ಗ್ರಾಹಕರ ವಿಷಯದಲ್ಲಿ ಗ್ರಾಹಕತ್ವ ಸ್ವಯಂಪ್ರತಿಬಂಧಕ ಹಾಗೂ ಶಾಸನ ಈ ಮೂರು ಅಸ್ತ್ರಗಳು ಒಂದಕೊಂದು ಹೊಂದಿಕೊಂಡು ಗ್ರಾಹಕರಿಗೆ ಸಹಾಯ ಮಾಡಿದರೆ ಮಾತ್ರ ಗ್ರಾಹಕ ಸಂರಕ್ಷಣೆ ಸಾಧ್ಯ . ಸಮಾಜ ಪ್ರಜ್ಞೆ ಇರುವ ಯುವ ಗ್ರಾಹಕರು ಈಗಿನ ವರ್ತಮಾನಕ್ಕೆ ಬೇಕು.

**ಟಿಪ್ಪಣಿಗಳು :**


೧. ಐತಾಳ ಕೆ.ದಾಮೋಧರ (ವಿಜಯ ಕರ್ನಾಟಕ ೫ ಡಿಸೆಂಬರ ೨೦೧೦) "ಗ್ರಾಹಕ ಜಾಗ್ರತೆಯಲ್ಲಿ ಕರ್ನಾಟಕದ ಘೋರನಿದ್ರೆ" ಪು.ಸಂ. ೮

೨. ಅಕ್ಬರ ಸಿದ್ದಿಕಿ ಮತ್ತು ರಘುರಾಮ (ಫೆಬ್ರುವರಿ ೧೫, ೨೦೦೯) "ಕಂಜಯಮರ್ಸ ಪ್ರೊಟೆಕ್ಷನ ಇನ್ ಇಂಡಿಯಾ ಸಮ್ ರಿಫ್ಲೆಕ್ಷನ್ಸ್" ಸದರ್ನ ಎಕನಾಮಿಕ್ಸ, ಪುಟ ೨೭

೩. ಶೇರ್ಲೆಕರ ಎಸ್.ಎ. (೧೯೯೮) "ಕಂಜುಮರ್ಸ್ ಲೆಜೆಸ್ಲೇಶನ್ಸ" ಹಿಮಾಲಯ ಪಬ್ಲಿಷಿಂಗ ಹೌಸ ನವ ದೆಹಲಿ. ಪುಟ ೫೬೮ ರಿಂದ ೫೭೯.

೪. ಶೇರ್ಲೆಕರ ಎಸ್.ಎ. (೧೯೯೮) "ಕಂಜುಮರ್ಸ್ ಲೆಜೆಸ್ಲೇಶನ್ಸ" ಹಿಮಾಲಯ ಪಬ್ಲಿಷಿಂಗ ಹೌಸ ನವ ದೆಹಲಿ.

೫. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ (೨೦೦೭) ಬೆಂಗಳೂರು. "ಗ್ರಾಹಕರ ಹಿತಾಸಕ್ತಿ, ಕೈಪಿಡಿ."

೬. ಅಗರವಾಲ ವ್ಹಿ.ಕೆ. (೨೦೦೦) – "ಕಂಜುಮರ್ಸ್ ಪ್ರೊಟೆಕ್ಸನ ಆಕ್ಟ್ ೧೯೮೬" :ಬಿ.ಎಚ್. ಪಬ್ಲಿಷರ್ಸ ಆಂಡ ಡಿಸ್ಟ್ರಿಬ್ಯುಟರ್ಸ್ ನವ ದೆಹಲಿ. ಪುಟ ೫೯, ೬೦, ೬೧

೭. ಉಪಾಧ್ಯೆ ವಿದ್ಯಾಧೀಶ (೨೦೦೦) "ಗ್ರಾಹಕ ರಕ್ಷಣಾ ಅಧಿನಿಯಮ ೧೯೮೬ ಮತ್ತು ಗ್ರಾಹಕರ ರಕ್ಷಣಾ ನಿಯಮಗಳು ೧೯೮೭ ಕರ್ನಾಟಕ ಗ್ರಾಹಕರ ರಕ್ಷಣಾ ನಿಯಮಗಳು ೧೯೮೮" – ಅಕಳವಾಡಿ ಬುಕ್ ಡಿಪೋ, ವಿಜಯ ರೋಡ, ಧಾರವಾಡ

೮. ಅಗರವಾಲ ವ್ಹಿ.ಕೆ. (೨೦೦೦) – "ಕಂಜುಮರ್ಸ್ ಪ್ರೊಟೆಕ್ಸನ ಆಕ್ಟ್ ೧೯೮೬" :ಬಿ.ಎಚ್. ಪಬ್ಲಿಷರ್ಸ ಆಂಡ ಡಿಸ್ಟ್ರಿಬ್ಯುಟರ್ಸ್ ನವ ದೆಹಲಿ ಪುಟ ೬೨, ೬೩.

೯. ಐತಾಳ ಕೆ.ದಾಮೋಧರ ಲೇಖನ (ವಿಜಯ ಕರ್ನಾಟಕ ೫ ಡಿಸೆಂಬರ ೨೦೧೦)ಗ್ರಾಹಕ ಜಾಗ್ರತೆಯಲ್ಲಿ ಕರ್ನಾಟಕದ ಘೋರನಿದ್ರೆ. ಪು.ನಂ ೭

೧೦. ರಾಮೇಶ್ವರಪ್ಪ ಕೆ (೨೦೦೭) "ಶಾಲಾ ಗ್ರಾಹಕ ಕ್ಲಬ್ ಯೋಜನೆ ಮಾರ್ಗಸೂಚಿಗಳು" ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಚಾಮರಾಜನಗರ ಪುಟ ೫,೧೭ ರಿಂದ ೨೧.

೧೧. ಐತಾಳ ಕೆ.ದಾಮೋಧರ ಲೇಖನ (ವಿಜಯ ಕರ್ನಾಟಕ ೫ ಡಿಸೆಂಬರ ೨೦೧೦)ಗ್ರಾಹಕ ಜಾಗ್ರತೆಯಲ್ಲಿ ಕರ್ನಾಟಕದ ಘೋರನಿದ್ರೆ. ಪು.ನಂ ೭

೧೨. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ (೨೦೦೭) "ಆಹಾರ ಖಾತರಿ ಸಮಿತಿ" (ಮಾರ್ಗದರ್ಶಿ ಕೈಪಿಡಿ) – ಉಪನಿರ್ದೇಶಕರು, , ಚಾಮರಾಜನಗರ ಜಿಲ್ಲೆ.

೧೩. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ, (೨೦೦೭) "ಗ್ರಾಹಕ ಮಿತ್ರ" ಬೆಂಗಳೂರು ಪು ನಂ ೧೬,೧೭,೧೮.

೧೪. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ (೨೦೦೭) "ಆಹಾರ ಖಾತರಿ ಸಮಿತಿ" (ಮಾರ್ಗದರ್ಶಿ ಕೈಪಿಡಿ) – ಉಪನಿರ್ದೇಶಕರು, ಚಾಮರಾಜನಗರ ಜಿಲ್ಲೆ ಪುಟ ೭ ರಿಂದ ೧೫.

೧೫. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ (೨೦೦೭) ಆಹಾರ ಭದ್ರತೆ ಮತ್ತು ಗ್ರಾಹಕ ಹಿತರಕ್ಷಣೆ–ಕಾರ್ಯಕ್ರಮ ಮಾಲಿಕೆ – ಪುಟ ನಂ ೧೭,೧೮.೧೯.

೧೬. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ (೨೦೦೭) ಆಹಾರ ಖಾತರಿ ಸಮಿತಿ (ಮಾರ್ಗದರ್ಶಿ ಕೈಪಿಡಿ)–ಉಪನಿರ್ದೇಶಕರು, ಚಾಮರಾಜನಗರ ಜಿಲ್ಲೆ.

೧೭. ಅಖಿಲ ಭಾರತೀಯ ಗ್ರಾಹಕ ಪಂಚಾಯತ ಮೈಸೂರು ಜಿಲ್ಲಾ ಘಟಕ (೨೦೦೫) ಆಹಾರ ನಾಗರಿಕರ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಗ್ರಾಹಕರ ಹಿತರಕ್ಷಣಾ ಕಾಯ್ದೆ ೧೯೮೬ ರ ಕೈಪಿಡಿ– ಭಾಗ ೩ ರ ೧೩ನೇ ಅಧ್ಯಾಯ – ೩೫೬ ವಿಶ್ವೇಶ್ವರ ನಗರ ೧ನೇ ಹಂತ ಮೈಸೂರು.

೧೮. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ (೨೦೦೭) ಗ್ರಾಹಕ ಮಿತ್ರ : ಪು. ನಂ ೪೧ ರಿಂದ ೪೬.

೧೯. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ(೨೦೦೭) ಗ್ರಾಹಕರ ಹಿತಾಸಕ್ತಿ, ಕೈಪಿಡಿ ಪು ನಂ. ೬೧ ರಿಂದ ೬೪.

೨೦. ಅಖಿಲ ಭಾರತೀಯ ಗ್ರಾಹಕ ಪಂಚಾಯತ ಮೈಸೂರು ಜಿಲ್ಲಾ ಘಟಕ (೨೦೦೫) ಆಹಾರ ನಾಗರಿಕರ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ "ಗ್ರಾಹಕರ ಹಿತರಕ್ಷಣಾ ಕಾಯ್ದೆ ೧೯೮೬ ರ ಕೈಪಿಡಿ" ಭಾಗ ೩ ರ ೧೩ನೇ ಅಧ್ಯಾಯ – ೩೫೬ ವಿಶ್ವೇಶ್ವರ ನಗರ ೧ನೇ ಹಂತ ಮೈಸೂರು. ಪುಟ ನಂ. ೬೮.

೨೧. ಇಚಲಗೊಂಡ ಬಿ.ಮ್.( ಫೆಬ್ರುವರಿ ೭. ೨೦, ೨೦೧೧) ಸಂಪಾದಕೀಯ "ಮಿಡಿಯಾ ಟೈಮ್ಸ್" ಪಬ್ಲಿಷರ್ಸ್ ವಿಜಯನಗರ ಮುಡಬಿದಿರೆ ಪುಟ ನಂ. ೪.

೨೨. ದಿ ಸಂಡೇ ಆಬ್ಸರ್ವರ್ ೧೯೯೪.

೨೩. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ (೨೦೦೭) ಗ್ರಾಹಕ ಮಿತ್ರ : ಪುಟ ನಂ. ೩೬, ೩೭, ೩೮, ೩೯, ೪೦.

೨೪. ಮಾದೇಗೌಡಾ ಜೆ. (ಜೂನ್ ೧ ೨೦೦೫ ) "ಎಜ್ಯುಕೇಶನ್ ಇನಸ್ಟ್ಯುಶನ್ ಆಚೆಡ್ ಕಂಜುಮರ್ಸ್ ಪ್ರೊಟೆಕ್ಷನ್ ಆಕ್ಟ್" – ಸದರ್ನ್‌ಎಕನಾಮಿಸ್ಟ್ ಪುಟ ನಂ ೨೯, ೩೦.

೨೫. ಉಪಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾಲಯ ವಿರುದ್ಧ ಪರಿಧಾ ಅನ್ಸಾರಿ ೧೯೯೩, ಸಿ.ಪಿ.ಆರ್ ೩೪೫ ಅವತಾರ ಸಿಂಘ "ಲಾ ಆಫ್ ಕಂಜುಮರ್ಸ್ ಪ್ರೊಟೆಕ್ಸನ್: ಪ್ರಿನ್ಸಿಪಲ್ಸ್ ಆಂಡ್ ಪ್ರ್ಯಾಕ್ಟಿಸ್" ಲಕನೌ ಇಸ್ಟರ್ಸ್ ಬುಕ್ ಕಂಪನಿ ಎರಡನೇ ಆವೃತಿ ೧೯೯೭ ಪುಟ ನಂ. ೨೩೨.

೨೬. ಪಂಜಾಬ ಸ್ಕೂಲ್ ಎಜ್ಯುಕೇಶನ್ ಬೋರ್ಡ ವಿರುದ್ಧ ಸರೋಜ ಕುಮಾರಿ ಪಂಜಾಬ ರಾಜ್ಯ ಆಯೋಗ– ಜೂನ ೨ – ೧೯೯೯ ಕಂಜುಮರ್ಸ್ ಕ್ಲೆಮ್ಸ್ ಜರ್ನಲ್ ವಾ–೧ ೨೦೦೨ ಪುಟ ನಂ. ೨೭೯ ರಿಂದ ೮೦.

೨೭. ಬೂಪೇಶ ಕುರಾನಾ ಮತ್ತು ಇತರರು ವಿರುದ್ಧ ವಿಶ್ವ ಬುದ್ಧ ಪರಿಷತ್ – ರಾಷ್ಟ್ರೀಯ ಆರ್ಯೋಗ ನವದೆಹಲಿ– ನಿರ್ಣಯ ೨೯ ಸೆಪ್ಟೆಂಬರ ೨೦೦೦– ಕಂಜುಮರ್ಸ್ ಕ್ಲೇಮ್ ಜರ್ನಲ ಪುಟ ನಂ. ೧೫೩–೬೧.

೨೮. ನಿರ್ದೇಶಕರು ದೂರಶಿಕ್ಷಣ ಶಾಲೆ ವಿರುದ್ಧ ಟಿ. ಸತ್ಯನಾರಾಯಣ ೧೯೯೩ ಅವತಾರ ಸಿಂಗ ಪುಟ ನಂ. ೨೩೨.

೨೯. ಬಿಂದ್ರನಾಥ ವಿರುದ್ಧ ವಿ.ಸಿ.ಯುನಿರ್ವಸಿಟಿ ಆಫ್ ಜಮ್ಮು ೧೯೯೫ ಸಿ.ಪೆ.ಜೆ ಜ ಮತ್ತು ಕಾ – ಅವತಾರ ಸಿಂಗ ಪುಟ ನಂ ೨೩೨.

೩೦. ಮಹೇಶ್ವರಿ ದಯಾನಂದ ವಿಶ್ವವಿದ್ಯಾಲಯ ವಿರುದ್ದ ಮಿನಾ ಯಾದವ ೧೯೯೫ ೩ ಸಿ.ಪೆ.ಜೆ. ೩೮೮.

೩೧. ಅಖಿಲ ಭಾರತೀಯ ಗ್ರಾಹಕ ಪಂಚಾಯತ ಮೈಸೂರು ಜಿಲ್ಲಾ ಘಟಕ (೨೦೦೫) ಆಹಾರ ನಾಗರಿಕರ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ "ಗ್ರಾಹಕರ ಹಿತರಕ್ಷಣಾ ಕಾಯ್ದೆ ೧೯೮೬ ರ ಕೈಪಿಡಿ" – ಭಾಗ ೩ ರ ೧೩ನೇ ಅಧ್ಯಾಯ – ೩೫೬ ವಿಶ್ವೇಶ್ವರ ನಗರ ೧ನೇ ಹಂತ ಮೈಸೂರು ಪು.ನಂ. ೯೬, ೯೭, ೯೮.

೩೨. ಅಖಿಲ ಭಾರತೀಯ ಗ್ರಾಹಕ ಪಂಚಾಯತ ಮೈಸೂರು ಜಿಲ್ಲಾ ಘಟಕ (೨೦೦೫) ಆಹಾರ ನಾಗರಿಕರ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ "ಗ್ರಾಹಕರ ಹಿತರಕ್ಷಣಾ ಕಾಯ್ದೆ ೧೯೮೬ ರ ಕೈಪಿಡಿ" – ಭಾಗ ೩ ರ ೧೩ನೇ ಅಧ್ಯಾಯ – ೩೫೬ ವಿಶ್ವೇಶ್ವರ ನಗರ ೧ನೇ ಹಂತ ಮೈಸೂರು ಪುಟ ನಂ. ೧೦೫, ೧೦೬,೧೦೭ (ಭಾಗ – ೫, ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಕಾಯ್ದೆ ೨೦೦೨)

೩೩. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ (೨೦೦೭) "ಗ್ರಾಹಕ ಮಿತ್ರ" ಪುಟ ನಂ ೭ ರಿಂದ೧೪.

**************

# ಅಧ್ಯಾಯ –೬

## ಕರ್ನಾಟಕದ ಗ್ರಾಹಕ ಸ್ವಯಂ ಸಂಸ್ಥೆಗಳ ವಿಶ್ಲೇಷಣೆ

೬.೧ ಗ್ರಾಹಕ ಸ್ವಯಂ ಸಂಸ್ಥೆಯ ಅರ್ಥ

೬.೨ ಸ್ವಯಂ ಸಂಸ್ಥೆಗಳ ವಿಶ್ಲೇಷಣೆ

## ಅಧ್ಯಾಯ – ೬

# ಕರ್ನಾಟಕದ ಗ್ರಾಹಕ ಸ್ವಯಂ ಸಂಸ್ಥೆಗಳ ವಿಶ್ಲೇಷಣೆ

ಈ ಅಧ್ಯಾಯದ ಉದ್ದೇಶ, ಕರ್ನಾಟಕ ರಾಜ್ಯದಲ್ಲಿ ಸ್ಥಾಪಿತಗೊಂಡ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳಿಂದ ಮಾಹಿತಿಯನ್ನು ಕ್ರೋಢೀಕರಿಸಿ ವಿಶ್ಲೇಷಿಸುವುದು. ಕಲೆಹಾಕಿದ ವಿಷಯವು ಪ್ರಮುಖವಾಗಿ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಹಕ ವೇದಿಕೆಗಳ ಕುರಿತದ್ದಾಗಿದೆ. ಹಾಗೆಯೆ ಈ ಸಂಸ್ಥೆಗಳ, ರಾಜ್ಯ ಆಯೋಗ ಹಾಗೂ ರಾಷ್ಟ್ರೀಯ ಆಯೋಗದ ಜೊತೆಗಿನ ಸಂಪರ್ಕದ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಇದರಿಂದ ಎಲ್ಲ ಜಿಲ್ಲೆಗಳ ಗ್ರಾಹಕವೇದಿಕೆಗಳ ಕಾರ್ಯವೈಖರಿಯ ಮೇಲೆ ಬೆಳಕು ಚೆಲ್ಲುವ ಪ್ರಯತ್ನ, ಈ ಅಧ್ಯಾಯದಲ್ಲಿ ಮಾಡಲಾಗಿದೆ.

**೬.೧ ಗ್ರಾಹಕ ಸ್ವಯಂ – ಸಂಸ್ಥೆ ಅರ್ಥ:**

ಸಮಾಜದ ಏಳ್ಗೆಗಾಗಿ ಶ್ರಮಿಸುವ ಸರಕಾರೇತರ ಸಂಸ್ಥೆಗಳಂತೆ ಗ್ರಾಹಕ ಸ್ವಯಂ – ಸಂಸ್ಥೆಗಳು ಗ್ರಾಹಕರಿಗಾಗಿ ಸ್ಥಾಪಿಸಲ್ಪಟ್ಟಿವೆ. ಈ ಸಂಸ್ಥೆಗಳ ಉದ್ದೇಶ, ಗ್ರಾಹಕರ ಶೋಷಣೆಯ ವಿರುದ್ಧ ಹೋರಾಡುವುದು. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ಅನ್ವಯ ಸ್ಥಾಪಿಸಲ್ಪಡುವ ಈ ಸಂಸ್ಥೆಗಳಿಗೆ ಸರಕಾರದ ಬೆಂಬಲ ಬೇಕಾಗುತ್ತದೆ. ಅವುಗಳ ಆರ್ಥಿಕ ವ್ಯವಸ್ಥೆಯನ್ನು ಕೂಡ ಸರಕಾರ ನೋಡಿಕೊಳ್ಳಬೇಕಾಗುತ್ತದೆ. ಈಗ ನಮ್ಮ ದೇಶದಲ್ಲಿ ೮೦೦ಕ್ಕೂ ಮಿಕ್ಕಿ ಗ್ರಾಹಕ ಸಂಸ್ಥೆಗಳಿವೆ. ಕರ್ನಾಟಕದಲ್ಲಿ ೧೩೫ ಸಂಸ್ಥೆಗಳಿವೆ. ಅವುಗಳ ಕಾರ್ಯಗಳನ್ನು ಈ ಕೆಳಗೆ ಪಟ್ಟಿ ಮಾಡಿಕೊಡಲಾಗಿದೆ.

೧. ಗ್ರಾಹಕರನ್ನು ಶೋಷಣೆಯ ವಿರುದ್ದ ಎಚ್ಚರಿಸಲು, ಅವರಲ್ಲಿ ಗ್ರಾಹಕತ್ವದ ಅರಿವು ಮೂಡಿಸಲು, ಈ ಸಂಸ್ಥೆಗಳು ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ.

೨. ಗ್ರಾಹಕರನ್ನು ಸಂಘಟಿಸಿ, ಗ್ರಾಹಕ ಚಳುವಳಿಗೆ ಹುಟ್ಟು ಹಾಕುವ ಪ್ರಯತ್ನವನ್ನು ಮಾಡುತ್ತವೆ.

೩. ಗ್ರಾಹಕರಿಗೆ ನಷ್ಟ ಪರಿಹಾರ ಕೊಡಿಸುವ ಉದ್ದೇಶದಿಂದ ಅವರ ವ್ಯಾಜ್ಯಗಳನ್ನು ಗ್ರಾಹಕ ವೇದಿಕೆಗಳಿಗೆ ಕೊಂಡೊಯ್ಯುತ್ತವೆ.

೪. ಗ್ರಾಹಕರಿಗಾಗಿ ಗ್ರಾಹಕ ಶಿಕ್ಷಣದ ಜವಾಬ್ದಾರಿಯನ್ನು ವಹಿಸುತ್ತವೆ.

೫. ಗ್ರಾಹಕರ ಪರವಾಗಿ ಸರಕಾರವನ್ನು ಎಚ್ಚರಿಸಿ, ಗ್ರಾಹಕರಿಗೆ ನ್ಯಾಯವನ್ನು ಒದಗಿಸಿಕೊಡುತ್ತವೆ.

೬. ಈ ಗ್ರಾಹಕ ಸ್ವಯಂ - ಸಂಸ್ಥೆಗಳು, ರಾಷ್ಟ್ರೀಯ ಆಯೋಗ, ರಾಜ್ಯ ಆಯೋಗ ಹಾಗೂ ಜಿಲ್ಲಾ ವೇದಿಕೆಗಳ ಸಂಬಂಧವನ್ನು ಬಲಪಡಿಸುವಲ್ಲಿ ಶ್ರಮಿಸುತ್ತವೆ.

೭. ಗ್ರಾಹಕರಿಗೆ ವಿವಿಧ ನಿಯತಕಾಲಿಕಗಳನ್ನು, ಪತ್ರಿಕೆಗಳನ್ನು ಪ್ರಕಟಿಸುತ್ತವೆ.

ಹೀಗೆ ಈ ಸಂಸ್ಥೆಗಳು "ಗ್ರಾಹಕರಿಂದ ಗ್ರಾಹಕರಿಗಾಗಿ ಗ್ರಾಹಕರಿಗೋಸ್ಕರ" ಕೆಲಸ ಮಾಡುವ ಸಮಾಜ ಸುಧಾರಕ ಸಂಸ್ಥೆಗಳಾಗಿವೆ.

**೬.೨ ಸ್ವಯಂ ಸಂಸ್ಥೆಗಳ ವಿಶ್ಲೇಷಣೆ:**

**ಕೋಷ್ಟಕ ೬.೧**

**ಕರ್ನಾಟಕ ರಾಜ್ಯದ ಗ್ರಾಹಕ ಸ್ವಯಂ-ಸಂಸ್ಥೆಗಳ ವಿವರ ಜಿಲ್ಲಾವಾರು ಹಾಗೂ ಜನಸಂಖ್ಯೆ ೨೦೦೭-೦೮**

| ಕ್ರ.ಸಂ | ಜಿಲ್ಲೆ | ಸಂಘ ಸಂಸ್ಥೆಗಳ ಸಂಖ್ಯೆ | ಒಟ್ಟು ಜನಸಂಖ್ಯೆ | ಸರಾಸರಿ ಜನಸಂಖ್ಯೆ |
|---|---|---|---|---|
| ೧ | ಚಿಕ್ಕಬಳ್ಳಾಪುರ | ೧೩ | ೧೧೦೦೦೦೦ | ೮೪೬೧೫ |
| ೨ | ದಕ್ಷಿಣ ಕನ್ನಡ | ೧೧ | ೧೮೯೬೪೦೩ | ೧೭೨೪೦೦ |
| ೩ | ಮಂಡ್ಯ | ೮ | ೧೭೧೬೭೧೮ | ೨೧೪೫೮೯ |
| ೪ | ಕೋಲಾರ | ೬ | ೧೪೨೬೪೦೬ | ೨೩೭೨೩೪ |
| ೫ | ಬಳ್ಳಾರಿ | ೮ | ೨೦೨೫೨೪೨ | ೨೫೩೧೫೫ |
| ೬ | ಬಿಜಾಪೂರ | ೭ | ೧೮೦೮೮೬೩ | ೨೫೮೪೦೯ |
| ೭ | ಮೈಸೂರು | ೧೦ | ೨೬೨೪೯೧೧ | ೨೬೨೪೯೧ |
| ೮ | ಶಿವಮೊಗ್ಗ | ೬ | ೧೬೩೯೯೫ | ೨೭೩೨೬೬ |
| ೯ | ಉಡುಪಿ | ೪ | ೧೧೦೯೪೯೪ | ೨೭೭೬೨೩ |
| ೧೦ | ಗದಗ | ೩ | ೯೭೧೯೫೫ | ೩೨೩೯೮೫ |
| ೧೧ | ರಾಮನಗರ | ೩ | ೧೦೫೦೦೦೦ | ೩೫೦೦೦೦ |
| ೧೨ | ಚಿಕ್ಕಮಂಗಳೂರು | ೩ | ೧೧೩೯೧೦೪ | ೩೭೯೭೦೧ |
| ೧೩ | ತುಮಕೂರು | ೬ | ೨೫೭೯೫೧೬ | ೪೨೯೯೧೯ |
| ೧೪ | ಗುಲ್ಬರ್ಗಾ | ೭ | ೩೧೨೪೮೫೮ | ೪೪೬೪೦೮ |
| ೧೫ | ದಾವಣಗೆರೆ | ೪ | ೧೭೮೯೬೯೩ | ೪೪೭೪೨೩ |

| | | | | |
|---|---|---|---|---|
| ೧೬ | ಬೆಂಗಳೂರು | ೧೫ | ೭೩೫೦೫೨೬ | ೪೯೦೦೩೫ |
| ೧೭ | ಚಿತ್ರದುರ್ಗ | ೩ | ೧೫೧೦೨೨೭ | ೫೦೩೪೦೯ |
| ೧೮ | ಧಾರವಾಡ | ೩ | ೧೬೦೩೭೯೪ | ೫೩೪೫೯೮ |
| ೨೦ | ಹಾಸನ | ೩ | ೧೭೨೧೩೧೯ | ೫೭೩೭೭೩ |
| ೨೧ | ಉತ್ತರ ಕನ್ನಡ | ೨ | ೧೩೫೩೨೯೯ | ೬೭೬೬೪೯ |
| ೨೨ | ಬೀದರ | ೨ | ೧೫೦೧೩೭೪ | ೭೦೦೬೮೭ |
| ೨೩ | ರಾಯಚೂರು | ೨ | ೧೬೪೮೨೧೨ | ೮೨೪೧೦೬ |
| ೨೪ | ಚಾಮರಾಜನಗರ | ೧ | ೯೫೪೨೭೫ | ೯೬೪೨೭೫ |
| ೨೫ | ಕೊಪ್ಪಳ | ೧ | ೧೧೯೩೪೯೬ | ೧೧೯೩೪೯೬ |
| ೨೬ | ಹಾವೇರಿ | ೧ | ೧೪೩೭೮೬೦ | ೧೪೩೭೮೬೦ |
| ೨೭ | ಬಾಗಲಕೋಟೆ | ೧ | ೧೬೫೨೨೩೨ | ೧೬೫೨೨೩೨ |
| ೨೮ | ಬೆಳಗಾವಿ | ೧ | ೪೨೦೭೨೬೪ | ೪೨೦೭೨೬೪ |

**ಮೂಲ: ಸರ್ವೆಯರ್ ಜನರಲ್ ಆಫ್ ಇಂಡಿಯಾ. ಗವರ್ನಮೆಂಟ್ ಆಫ್ ಇಂಡಾಯಾ ಕಾಪಿ ರೈಟ್, ೨೦೦೫.**




ಕೋಷ್ಟಕ ಸಂಖ್ಯೆ ೬.೧ ಹಾಗೂ ರೇಖಾ ಚಿತ್ರದ ಅನುಸಾರ ಕರ್ನಾಟಕ ರಾಜ್ಯದಲ್ಲಿ ೧೩೫ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳಿವೆ. ಈ ಎಲ್ಲಾ ಸಂಘ ಸಂಸ್ಥೆಗಳು, ರಾಜ್ಯದ ೨೮ ಜಿಲ್ಲೆಗಳಿಗೆ

ಹರಿದು ಹಂಚಿ ಹೋಗಿವೆ. ಬೆಂಗಳೂರು ಜಿಲ್ಲೆ ಜನಸಂಖ್ಯೆಯಲ್ಲಿಯೇ ಅತಿ ದೊಡ್ಡ ಜಿಲ್ಲೆ (೭೩,೫೦,೫೨೬) ಮತ್ತು ಶಿವಮೊಗ್ಗ ಅತಿ ಕಡಿಮೆ ಜನಸಂಖ್ಯೆ (೧,೬೩,೯೫) ಹೊಂದಿದ ಜಿಲ್ಲೆಯಾಗಿದೆ. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಬೆಂಗಳೂರು ಇವರು ಪ್ರಕಟಿಸಿ ಬಿಡುಗಡೆ ಮಾಡಿದ ಗ್ರಾಹಕರ ಕೈಪಿಡಿಯ ಪ್ರಕಾರ, ಚಿಕ್ಕಬಳ್ಳಾಪುರ ಜಿಲ್ಲೆಯ ಅತಿ ಹೆಚ್ಚು ಸಂಸ್ಥೆಗಳನ್ನು ಹೊಂದಿದೆ. ಪ್ರತಿ ೮೪,೬೧೫ ಜನಸಂಖ್ಯೆಗೆ ಒಂದು ಸಂಸ್ಥೆ ಎನ್ನುವುದನ್ನು ಕೋಷ್ಟಕ ೬.೧ ತೋರಿಸುತ್ತಿದೆ. ಆದ್ದರಿಂದ ಚಿಕ್ಕಬಳ್ಳಾಪುರ, ಗ್ರಾಹಕ ಸಂಸ್ಥೆ ಗ್ರಾಹಕ ಚಳುವಳಿಯಲ್ಲಿ ಮುಂಚೂಣಿಯ ಪಾತ್ರವನ್ನು ನಿರ್ವಹಿಸುತ್ತಿದೆ. ಮುಂದೆ ದಕ್ಷಿಣ ಕನ್ನಡ ೧೧ ಸಂಘ ಸಂಸ್ಥೆಗಳನ್ನು ಹುಟ್ಟು ಹಾಕಿದ್ದು, ಪ್ರತಿ ೧,೭೨,೪೦೦ ಜನಸಂಖ್ಯೆಗೆ ಒಂದು ಸಂಸ್ಥೆ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿದೆ. ನಂತರ ಮಂಡ್ಯ ಮೂರನೇ ಸ್ಥಾನ, ಪ್ರತಿ ೨,೧೪,೫೮೯ ಜನಸಂಖ್ಯೆಗೆ ಒಂದು ಸಂಸ್ಥೆಯನ್ನು ಹೊಂದಿದೆ. ಕೋಲಾರ ಜಿಲ್ಲೆ ೬ ಸಂಸ್ಥೆಗಳನ್ನು ಒಳಗೊಂಡಿದ್ದು, ಪ್ರತಿ ಸಂಸ್ಥೆಗೆ ೨,೩೭,೨೩೪ ಜನಸಂಖ್ಯೆ ಎಂದು ಅಂದಾಜಿಸಲಾಗಿದೆ. ಬಳ್ಳಾರಿ ಜಿಲ್ಲೆ ೫ನೇ ಸ್ಥಾನದಲ್ಲಿದ್ದು, ೨೫೩೧೫೫ ಜನರು ಒಂದೊಂದು ಸಂಸ್ಥೆಯ ಪ್ರಯೋಜನ ಪಡೆಯುತ್ತಿದ್ದಾರೆ. ವಿಜಾಪೂರ ಜಿಲ್ಲೆಯಲ್ಲಿ ಏಳು ಗ್ರಾಹಕ ಸಂಸ್ಥೆಗಳಿದ್ದು, ಪ್ರತಿ ಸಂಸ್ಥೆಯಡಿಯಲ್ಲಿ ೨೫೮೪೮೯ ಜನರನ್ನೊಳಗೊಂಡು, ಗ್ರಾಹಕರ ಹಕ್ಕುಗಳಿಗೆ ಸ್ಪಂದನೆಗೆ ಅವಕಾಶವಿದೆ. ಮೈಸೂರು ಜಿಲ್ಲೆಯಲ್ಲಿ ೧೦ ಗ್ರಾಹಕರ ಸಂಸ್ಥೆಗಳಿದ್ದು ೨,೬೭,೪೯೧ ಗ್ರಾಹಕರು ಅದರ ವ್ಯಾಪ್ತಿಗೆ ಒಳಪಟ್ಟಿದ್ದಾರೆ. ಶಿವಮೊಗ್ಗದಲ್ಲಿ ೬ ಗ್ರಾಹಕ ಸಂಸ್ಥೆಗಳು, ತಲಾ ಒಂದಕ್ಕೆ ೨,೭೩,೨೬೬ ಗ್ರಾಹಕರಿಗೆ ಸಹಾಯ ಮಾಡಲು ತಯಾರಾಗಿವೆ. ಹಾಗೆಯೇ ಉಡುಪಿಯಲ್ಲಿ ೪ ಸಂಸ್ಥೆಗಳು ಜಿಲ್ಲೆಯಾದ್ಯಂತ ೨,೭೭,೬೭೩ ಗ್ರಾಹಕರಿಗೆ ಒಂದರಂತೆ ಕಾರ್ಯನಿರ್ವಹಿಸುತ್ತಿವೆ. ಗದಗದಲ್ಲಿ ಕೇವಲ ೩ ಗ್ರಾಹಕ ಸಂಸ್ಥೆಗಳು ನೊಂದಣಿಯಾಗಿದ್ದು, ಪ್ರತಿಯೊಂದಕ್ಕೆ ೩,೨೩,೯೮೫ ಗ್ರಾಹಕ ಸಮೂದಾಯವಿದೆ. ನಂತರ ರಾಮನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಪ್ರತಿ ಗ್ರಾಹಕ ಸಂಸ್ಥೆಗೆ ೩,೫೦,೦೦೦ ಜನರಂತೆ ೩ ಸಂಸ್ಥೆಗಳು ಸ್ಥಾಪನೆಗೊಂಡಿವೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ೩ ತಲಾ ೧೩,೭೮,೭೦೧ ತುಮಕೂರಿನ ಜಿಲ್ಲೆಯಲ್ಲಿ ೬ ತಲಾ ೪,೨೯,೯೧೯ ಜನಸಂಖ್ಯೆ ಹಾಗೂ ಗುಲ್ಬರ್ಗಾದಲ್ಲಿ ೭ ತಲಾ ೪,೪೬,೬೪೦೮ ಜನಸಂಖ್ಯೆಯಂತೆ ಸ್ಥಾಪಿತಗೊಂಡಿವೆ. ದಾವಣಗೆರೆಯಲ್ಲಿ ೪ ಸಂಸ್ಥೆಗಳು ತಲಾ ೪,೪೭,೪೨೩ ಜನಸಂಖ್ಯೆಗೆ ಸೇವೆ ಒದಗಿಸುತ್ತಿವೆ. ಬೆಂಗಳೂರು ಜಿಲ್ಲೆಯಲ್ಲಿಯೇ ಅತ್ಯಂತ ಹೆಚ್ಚಿನ ಗ್ರಾಹಕ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಅಲ್ಲಿ ೧೫ ಸಂಸ್ಥೆಗಳಿದ್ದು ತಲಾ ೪,೯೦,೦೩೫ ಜನಸಂಖ್ಯೆ ಒಳಪಟ್ಟು ಸೇವೆ ಕೊಡತ್ತಿವೆ. ಚಿತ್ರದುರ್ಗ, ಧಾರವಾಡ ಮತ್ತು ಹಾಸನಗಳಲ್ಲಿ ತಲಾ ಮೂರು ಸಂಸ್ಥೆಗಳಿದ್ದು,

೫,೩೪,೫೯೮, ೫,೩೪,೫೯೮ ಮತ್ತು ೫,೭೩,೭೭೩ ತಲಾ ಒಂದು ಸಂಸ್ಥೆಗೆ ಅನುಕ್ರಮವಾಗಿ ಈ ಜಿಲ್ಲೆಗಳು ಜನಸಂಖ್ಯೆ ಹೊಂದಿ ಕಾರ್ಯಮಾಡುತ್ತಿವೆ.

ಉತ್ತರ ಕನ್ನಡ, ಬೀದರ ಮತ್ತು ರಾಯಚೂರು ೨ ರಂತೆ ಗ್ರಾಹಕ ಸಂಸ್ಥೆಗಳನ್ನು ಸ್ಥಾಪಿಸಿವೆ. ಅವುಗಳ ಪ್ರತಿ ಸಂಸ್ಥೆಯ ಜನಸಂಖ್ಯೆ ಅನುಕ್ರಮವಾಗಿ ೬,೭೬,೬೪೯ , ೭,೦೦,೬೮೭ ಮತ್ತು ೮,೨೪,೧೦೬ ಹೊಂದಿವೆ. ಉಳಿದ ಜಿಲ್ಲೆಗಳಾದ ಕೊಡಗು ೧ ಸಂಸ್ಥೆಗೆ ೫,೪೫,೩೨೨, ಚಾಮರಾಜನಗರ ೧ ಸಂಸ್ಥೆಗೆ ೯,೬೪,೨೭೫, ಕೊಪ್ಪಳ ೧ ಸಂಸ್ಥೆಗೆ ೧೧,೯೩,೪೯೬, ಹಾವೇರಿ ೧ ಸಂಸ್ಥೆಗೆ ೧೪,೩೭,೮೬೦, ಹಾಗೂ ಬಾಗಲಕೋಟೆಗೆ ೧ ಸಂಸ್ಥೆಗೆ ೧೬,೫೨,೨೩೨ ಜನಸಂಖ್ಯೆ ಹೊಂದಿವೆ. ಬೆಳಗಾವಿ ಜಿಲ್ಲೆಯಲ್ಲಿ ೪೨,೦೭,೨೬೪ ಜನಸಂಖ್ಯೆಗೆ ಕೇವಲ ಒಂದು ಸಂಸ್ಥೆ ಕಾರ್ಯನಿರ್ವಹಿಸುತ್ತಿದೆ.

**ಕೋಷ್ಟಕ ೬.೨**

**ಕರ್ನಾಟಕ ರಾಜ್ಯದ ಗ್ರಾಹಕ ಸ್ವಯಂ-ಸಂಸ್ಥೆ ವಿವರ ಜಿಲ್ಲಾವಾರು ಸಂಖ್ಯಾಬಲ ಮತ್ತು ಸಂಶೋಧನೆಗೆ ಸ್ಪಂದನೆ**

| ಕ್ರಸಂ | ಜಿಲ್ಲೆ | ಒಟ್ಟು ಸಂಸ್ಥೆಗಳು | ಸ್ಪಂದಿಸಿದ ಸಂಸ್ಥೆಗಳು | ಸ್ಪಂದಿಸದ ಸಂಸ್ಥೆಗಳು |
|---|---|---|---|---|
| ೧. | ಬೆಂಗಳೂರು | ೧೫ | ೧೦ | ೫ |
| ೨. | ಬಾಗಲಕೋಟೆ | ೧ | ೧ | - |
| ೩. | ಬಳ್ಳಾರಿ | ೮ | ೭ | ೧ |
| ೪. | ಬೆಳಗಾವಿ | ೧ | ೧ | - |
| ೫. | ಬೀದರ | ೨ | - | ೨ |
| ೬. | ಬಿಜಾಪೂರ | ೭ | ೫ | ೨ |
| ೭. | ಚಾಮರಾಜನಗರ | ೧ | - | ೧ |
| ೮. | ಚಿಕ್ಕಮಗಳೂರು | ೩ | ೨ | ೧ |
| ೯. | ಚಿತ್ರದುರ್ಗ | ೩ | ೨ | ೧ |
| ೧೦. | ಚಿಕ್ಕಬಳ್ಳಾಪೂರ | ೧೩ | ೧ | ೧೨ |
| ೧೧. | ದಾವರಣಗೆರೆ | ೪ | ೧ | ೩ |
| ೧೨ | ಧಾರವಾಡ | ೩ | ೨ | ೧ |
| ೧೩. | ದಕ್ಷಿಣ ಕನ್ನಡ | ೧೧ | ೬ | ೫ |
| ೧೪. | ಗದಗ | ೩ | ೧ | ೨ |
| ೧೫. | ಗುಲ್ಬರ್ಗಾ | ೭ | ೫ | ೨ |
| ೧೬. | ಹಾಸನ | ೩ | ೩ | - |
| ೧೭. | ಹಾವೇರಿ | ೧ | - | ೧ |

| | | | | |
|---|---|---|---|---|
| ೧೮. | ಕೋಲಾರ | ೬ | ೧ | ೫ |
| ೧೯. | ಕೊಡಗು | ೧ | – | ೧ |
| ೨೦. | ಕೊಪ್ಪಳ | ೧ | – | ೧ |
| ೨೧. | ಮಂಡ್ಯ | ೮ | ೪ | ೪ |
| ೨೨. | ಮೈಸೂರು | ೧೦ | ೯ | ೧ |
| ೨೩. | ರಾಯಚೂರು | ೨ | – | ೨ |
| ೨೪. | ರಾಮನಗರ | ೩ | ೧ | ೨ |
| ೨೫. | ಶಿವಮೊಗ್ಗ | ೬ | ೩ | ೩ |
| ೨೬. | ತುಮಕೂರು | ೬ | ೩ | ೩ |
| ೨೭. | ಉತ್ತರಕನ್ನಡ | ೨ | – | ೨ |
| ೨೮. | ಉಡುಪಿ | ೪ | ೪ | – |
| | ಒಟ್ಟು | ೧೩೫ | ೭೨ | ೬೩ |

**ಮೂಲ : ಸರ್ವೆಯರ್ ಜನರಲ್ ಆಫ್ ಇಂಡಿಯಾ ಮತ್ತು ಗವರ್ನಮೆಂಟ್ ಆಫ್ ಇಂಡಿಯಾದ ಕಾಪಿ ರೈಟ್, ೨೦೦೫**

ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳು, ಗ್ರಾಹಕನಿಗೆ ನ್ಯಾಯ ಒದಗಿಸುವ ದಾರಿಯಲ್ಲಿ, ತುಂಬ ಮಹತ್ವದ ಪಾತ್ರಗಳನ್ನು ವಹಿಸಿವೆ. ಗ್ರಾಹಕರನ್ನು ಸಂಘಟಿಸುವಲ್ಲಿ, ಗ್ರಾಹಕರಿಗೆ ಅರಿವು ಮೂಡಿಸುವಲ್ಲಿ, ಈ ಸಂಸ್ಥೆಗಳು ಅವಿರತ ದುಡಿಯುತ್ತಿವೆ. ಗ್ರಾಹಕರಿಗೆ ತೊಂದರೆಯಾದಾಗ, ಅವರ ಹಕ್ಕುಗಳಿಗೆ ಚ್ಯುತಿ ಬಂದಾಗ ಈ ಸಂಸ್ಥೆಗಳು, ಗ್ರಾಹಕರಿಗೆ ಸಹಾಯ ಮಾಡುತ್ತವೆ. ಇತ್ತೀಚಿನ ದಿನಗಳಲ್ಲಿ ಗ್ರಾಹಕ ವಿಷಯ ಸಂಕೀರ್ಣವಾಗಿ ಗೊಂದಲದ ಗೂಡಾಗಿದೆ. ಗ್ರಾಹಕನಿಗೆ ನ್ಯಾಯ ಸಿಗುವ ದಾರಿಯಲ್ಲಿ ಬರುವ ಎಡರು ತೊಡರುಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಗ್ರಾಹಕನಿಗೆ ದಾರಿತೋರಿಸುವ ಮಾರ್ಗ ತುಂಬ ಅವಶ್ಯವಾಗಿದೆ. ಈ ದಿನಗಳಲ್ಲಿ ಸಂಘ ಸಂಸ್ಥೆಗಳು ಕಾರ್ಯನಿರ್ವಹಿಸುವ ವೈಖರಿಯನ್ನು ಅರಿತುಕೊಂಡು, ತಪ್ಪಿದಲ್ಲಿ ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯ ತತ್ಪರರಾಗುವುದು ಅವಶ್ಯವಾಗಿದೆ. ಸಂಶೋಧನೆಯ ಈ ಅಧ್ಯಾಯದಲ್ಲಿ ಸಂಘಸಂಸ್ಥೆಗಳ ಕುರಿತು ವಿಶ್ಲೇಷಿಸುವುದು ಅವಶ್ಯವಾಗಿದೆ.

ಕರ್ನಾಟಕ ರಾಜ್ಯದಲ್ಲಿ ಸ್ಥಾಪಿತವಾದ ಸಂಘ ಸಂಸ್ಥೆಗಳ ವಿವರವನ್ನು ಕಲೆ ಹಾಕಿ ಅವುಗಳ ಕಾರ್ಯವನ್ನು ಅಧ್ಯಯನ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಕೋಷ್ಟಕರ ೬.೨ ರಲ್ಲಿ ೨೮ ಜಿಲ್ಲೆಗಳಲ್ಲಿ ಸ್ಥಾಪಿಸಲಾದ ಸಂಘ ಸಂಸ್ಥೆಗಳ ಸಂಖ್ಯಾಬಲವನ್ನು ನೀಡಲಾಗಿದೆ. ಸಂಘಸಂಸ್ಥೆಗಳ ವಿವರವನ್ನು ಪಡೆಯುವ ಉದ್ದೇಶದಿಂದ ೧೩೫ ಪ್ರಶ್ನಾವಳಿಗಳನ್ನು ಎಲ್ಲ ಜಿಲ್ಲೆಗಳಲ್ಲಿ ಇರುವ ಸಂಘ ಸಂಸ್ಥೆಗಳಿಗೆ ಅಂಚೆಯ ಮೂಲಕ ಕಳುಹಿಸಿ ಕೊಡಲಾಗಿತ್ತು. ೭೨ ಸಂಘ ಸಂಸ್ಥೆಗಳಿಂದ ಉತ್ತರಗಳು ದೊರಕಿದರೆ ೬೩ ಸಂಸ್ಥೆಗಳಿಂದ ಯಾವುದೇ ಉತ್ತರವಿಲ್ಲದೆ ಹೋಯಿತು. ನಂತರ ೬೩ ರಲ್ಲಿ ೨೧ ಸಂಸ್ಥೆಗಳ ವಿಳಾಸ ಸರಿಯಾಗಿಲ್ಲ ಎನ್ನುವ ಕಾರಣದಿಂದ ಪ್ರಶ್ನಾವಳಿಗಳು ಹಾಗೆಯೇ ಹಿಂದುರಿಗಿದವು.

ಕೋಷ್ಠಕ ೬.೨ ರ ಪ್ರಕಾರ ಉಡುಪಿಯ ಎಲ್ಲ ನಾಲ್ಕೂ ಸಂಸ್ಥೆಗಳು ಹಾಗೂ ಹಾಸನದ ಎಲ್ಲ ೩ ಸಂಸ್ಥೆಗಳಿಂದ ತುಂಬ ಉತ್ಸಾಹದಾಯಕ ಉತ್ತರಗಳು ಬಂದು ತಲುಪಿದವು. ಬೆಂಗಳೂರಿನ ೧೫ ಸಂಸ್ಥೆಗಳಲ್ಲಿ ೧೦ ಸಂಸ್ಥೆಗಳು, ಬಳ್ಳಾರಿಯ ೮ ಸಂಸ್ಥೆಗಳಲ್ಲಿ ೭ ಸಂಸ್ಥೆಗಳು ವಿಜಾಪೂರು ಜಿಲ್ಲೆಯ ೭ ಸಂಸ್ಥೆಗಳಲ್ಲಿ ೫, ಗುಲ್ಬರ್ಗಾದ ೭ ಸಂಸ್ಥೆಗಳಲ್ಲಿ, ೫ ಸಂಸ್ಥೆಗಳಿಂದ ಮೈಸೂರಿನ ೧೦ ಸಂಸ್ಥೆಗಳಲ್ಲಿ ೯ ಸಂಸ್ಥೆಗಳಿಂದ ಉತ್ತರಗಳು ಸಿಕ್ಕು ಪ್ರತಿಕ್ರಿಯೆ ವ್ಯಕ್ತವಾಗಿದೆ. ಚಿಕ್ಕಬಳ್ಳಾಪೂರ ಜಿಲ್ಲೆಯಿಂದ ೧೩ ರಲ್ಲಿ ಕೇವಲ ೧ ಸಂಸ್ಥೆ ಪ್ರತಿಕ್ರಿಯೆ ಕೊಟ್ಟು ನಿರಾಶೆಗೊಳಿಸಿತು. ಉಳಿದ ಜಿಲ್ಲೆಗಳಲ್ಲಿ ೧ ಅಥವಾ ೨ ಸಂಸ್ಥೆಗಳಿದ್ದು ಯಾವುದೇ ಪ್ರತಿಕ್ರಿಯೆಯನ್ನು ನೀಡದೆ ನಿರಾಶೆಗೊಳಿಸಿದವು. ಒಟ್ಟು ೧೩೫ ಸಂಘ ಸಂಸ್ಥೆಗಳಲ್ಲಿ ೭೨ ಸಂಸ್ಥೆಗಳು ಸಂಶೋಧನೆಗೆ ಸ್ಪಂದಿಸಿ ಶೇ ೫೩ ರಷ್ಟು ತಮ್ಮ ಗ್ರಾಹಕ ಸಂಬಂಧಿ ವಿಷಯಗಳಿಗೆ ಕಳಕಳಿಯನ್ನು ವ್ಯಕ್ತಪಡಿಸಿವೆ. ಉಳಿದ ಸಂಘ ಸಂಸ್ಥೆಗಳ ಸಮಸ್ಯೆಯನ್ನು ಅರಿಯುವ ಪ್ರಯತ್ನವಾಗಬೇಕು.

**ಕೋಷ್ಠಕ ೬.೩**

**ಕರ್ನಾಟಕ ರಾಜ್ಯದ ಗ್ರಾಹಕ ಸ್ವಯಂ-ಸಂಸ್ಥೆಗಳ, ಅಸ್ತಿತ್ವದ ಅವಧಿ ೨೦೦೯ ರ ವರೆಗೆ**

| ಕಾರ್ಯಭಾರ | ಸಂಸ್ಥೆಗಳ ಸಂಖ್ಯೆ | ಶೇಕಡಾವಾರು |
|---|---|---|
| ೫ ವರ್ಷಕ್ಕಿಂತ ಕಡಿಮೆ | ೩ | ೪% |
| ೫ ವರ್ಷದಿಂದ ೧೦ ವರ್ಷ | ೧೯ | ೨೬% |
| ೧೦ ವರ್ಷ ಮೇಲ್ಪಟ್ಟು | ೫೦ | ೭೦% |
| **ಒಟ್ಟು** | **೭೨** | ೧೦೦% |

**ಮೂಲ : ಪ್ರಾಥಮಿಕ ಸಮಿಕ್ಷೆ**

ಕೋಷ್ಠಕ ಸಂಖ್ಯೆ ೬.೩ ರ ಅನುಸಾರ ಪ್ರತಿಕ್ರಿಯೆ ವ್ಯಕ್ತಪಡಿಸಿದ ೭೨ ಸಂಸ್ಥೆಗಳಲ್ಲಿ ೫೦ ಗ್ರಾಹಕ ಸಂಸ್ಥೆಗಳು ೧೦ ವರ್ಷಕ್ಕಿಂತಲೂ ಹೆಚ್ಚು ವರ್ಷಗಳಿಂದ ಅತ್ಯಂತ ಉತ್ಸಾಹದಿಂದ ಗ್ರಾಹಕರ ಸಹಾಯಕ್ಕೆ ಟೊಂಕ ಕಟ್ಟಿ ನಿಂತಿವೆ. ಸಂಸ್ಥೆಗಳ ಅಧ್ಯಕ್ಷರು ತೋರಿಸಿರುವ ಅದಮ್ಯ ಉತ್ಸಾಹದಿಂದ ಅವುಗಳ ಚೈತನ್ಯ ಶಕ್ತಿಯನ್ನು ಅರಿಯಬಹುದು. ೧೯ (೨೬%) ಸಂಸ್ಥೆಗಳು ೫ ವರ್ಷಕ್ಕೂ ಮೇಲ್ಪಟ್ಟು ಸ್ಥಾಪಿತಗೊಂಡು ತಮ್ಮ ಬೆಳವಣಿಗೆಯನ್ನು ತೋರಿಸಿವೆ. ಕೇವಲ ೩ (೪%) ಸಂಸ್ಥೆಗಳು ಇತ್ತೀಚಿನ ವರ್ಷಗಳಲ್ಲಿ ಸ್ಥಾಪಿತಗೊಂಡಿವೆ.

**ಕೋಷ್ಟಕ ೬.೪**

**ಗ್ರಾಹಕ ಸಂಸ್ಥೆಗಳು ಮತ್ತು ನೋಂದಣಿ**

| ವಿವರ | ನೋಂದಣಿ | ಸಂಖ್ಯೆ |
|---|---|---|
| ನೋಂದಣಿಯಾಗದ ಸಂಸ್ಥೆಗಳು | – | – |
| ನೋಂದಣಿಯಾದ ಸಂಸ್ಥೆಗಳು | ೧)ಸೊಸೈಟಿ ಕಾಯ್ದೆ ಅಡಿಯಲ್ಲಿ | ೭೨ |
| | ೨)ಕಂಪನಿ ಕಾಯ್ದೆ ಅಡಿಯಲ್ಲಿ | – |
| ಒಟ್ಟು | | ೭೨ |

**ಮೂಲ : ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೪ ರ ಪ್ರಕಾರ ಸ್ಪಂದಿಸಿದ ಎಲ್ಲ ಗ್ರಾಹಕ ಸಂಸ್ಥೆಗಳು ನೋಂದಣಿಯಾಗಿವೆ. ಯಾವುದೆ ಸಂಸ್ಥೆ ನೋಂದಣಿ ಮಾಡಿಸದೆ ಕಾರ್ಯಮಾಡುತ್ತಿಲ್ಲ. ಸಂಸ್ಥೆಗಳು, ಸೊಸೈಟಿ ಆ್ಯಕ್ಟ್ ೧೯೬೩ ರ ಪ್ರಕಾರ ನೋಂದಣಿಯಾಗಿ ಕಾಯ್ದೆಯ ನಿಯಮಗಳನ್ನು ಮತ್ತು ಪ್ರತಿಬಂಧನೆಗಳನ್ನು ಅನುಸರಿಸುತ್ತಿವೆ.

**ಕೋಷ್ಟಕ ೬.೫**

**ಗ್ರಾಹಕ ಸಂಸ್ಥೆಗಳು ಮತ್ತು ಜನಸಂಖ್ಯೆ**

| ಜನಸಂಖ್ಯೆ | ಸಂಸ್ಥೆಗಳು | ಶೇಕಡಾವಾರು |
|---|---|---|
| ೫೦,೦೦೦ ಕ್ಕಿಂತ ಕಡಿಮೆ | ೧೨ | ೧೭% |
| ೫೦,೦೦೦–೧,೦೦,೦೦೦ | ೦೯ | ೧೩% |
| ೧,೦೦,೦೦೦–೧,೫೦,೦೦೦ | ೦೫ | ೭% |
| ೧,೫೦,೦೦೦ – ೨,೦೦,೦೦೦ | – | – |
| ೨,೦೦,೦೦೦ ಕ್ಕಿಂತ ಹೆಚ್ಚು | ೪೬ | ೬೩% |
| ಒಟ್ಟು | ೭೨ | ೧೦೦% |

**ಮೂಲ :– ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೫ ರ ಅನುಸಾರ ಒಟ್ಟು ೭೨ ಸಂಸ್ಥೆಗಳಲ್ಲಿ ೪೬ ಸಂಸ್ಥೆಗಳು ದೊಡ್ಡ ದೊಡ್ಡ ನಗರಗಳಲ್ಲಿ ಸ್ಥಾಪಿಸಲ್ಪಟ್ಟಿವೆ. ೫೦,೦೦೦ ಕ್ಕಿಂತ ಕಡಿಮೆ ಇರುವ ಜನ ಸಂಖ್ಯೆಯ ಪ್ರದೇಶದಲ್ಲಿ ೧೨ (೧೭%) ಸಂಸ್ಥೆಗಳಿವೆ. ೧,೦೦,೦೦೦ ಕ್ಕಿಂತ ಕಡಿಮೆ, ೫೦,೦೦೦ ಕ್ಕಿಂತ ಹೆಚ್ಚಿನ ಜನ ವಾಸ್ಥಳಗಳಲ್ಲಿ ೯ (೧೩%) ಸಂಸ್ಥೆಗಳಿವೆ. ೧,೦೦,೦೦೦ ಕ್ಕಿಂತ ಮೇಲ್ಪಟ್ಟು ೧,೫೦,೦೦೦ ಕ್ಕಿಂತ ಕಡಿಮೆ ಇರುವ ನಗರಗಳಲ್ಲಿ ೫ (೭%) ಸಂಸ್ಥೆಗಳಿವೆ. ೨,೦೦,೦೦೦ ಮಿಕ್ಕಿ ಜನಸಂಖ್ಯೆ ಹೊಂದಿದ ನಗರಗಳಲ್ಲಿ ೪೬ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಇದು ಸಂತಸ ಕೊಡುವ ವಿಷಯ. ಆದರೆ ಚಿಕ್ಕ ಊರುಗಳಲ್ಲಿಯೂ ಕೂಡ, ಸಂಸ್ಥೆಗಳನ್ನು ಸ್ಥಾಪಿಸುವ ಕೆಲಸ ಆಗಬೇಕಾಗಿದೆ.

**ಕೋಷ್ಟಕ ೬.೬**

**ಗ್ರಾಹಕ ಸಂಸ್ಥೆಗಳ ಸಂಖ್ಯೆ ಹಾಗೂ ಸಿಬ್ಬಂದಿ**

| ಕಛೇರಿ ಸಿಬ್ಬಂದಿ | ಸಂಸ್ಥೆಗಳು | ಶೇಕಡಾವಾರು |
|---|---|---|
| ೫ ಕ್ಕಿಂತ ಕಡಿಮೆ | ೦೪ | ೬% |
| ೫ ರಿಂದ ೧೦ | ೨೨ | ೩೧% |
| ೧೦ ರಿಂದ ೧೫ | ೨೮ | ೩೯% |
| ೧೫ ರಿಂದ ೨೦ | ೧೫ | ೨೧% |
| ೨೦ ರಿಂದ ೨೫ | ೦೩ | ೩% |
| **ಒಟ್ಟು** | **೭೨** | **೧೦೦%** |

**ಮೂಲ :- ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೬ ರ ಅನುಸಾರ ೭೨ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳಲ್ಲಿ, ೪ (೬%)ಸಂಸ್ಥೆಗಳಲ್ಲಿ ೫ ಕ್ಕಿಂತ ಕಡಿಮೆ ಕಛೇರಿ ಸಿಬ್ಬಂದಿಯ ಕೆಲಸವನ್ನು ನಿರ್ವಹಿಸುತ್ತಿವೆ. ೨೨ (೩೧%) ಸಂಸ್ಥೆಗಳು ೫ ರಿಂದ ೧೦ ಕಛೇರಿ ಸಿಬ್ಬಂದಿಯನ್ನು ಹೊಂದಿವೆ. ೨೮ (೩೯%) ಸಂಸ್ಥೆಗಳು ೧೦ ಕ್ಕಿಂತ ಹೆಚ್ಚಿಗೆ ೧೫ ರ ವರೆಗೆ ಕಛೇರಿಯ ಕೆಲಸವನ್ನು ನಿರ್ವಹಿಸಲು ಜನರನ್ನು ತೆಗೆದುಕೊಂಡಿದೆ. ೧೫ (೨೧%) ಸಂಸ್ಥೆಗಳು ೧೫ ಕ್ಕಿಂತ ಹೆಚ್ಚಿಗೆ ಸಿಬ್ಬಂದಿಯನ್ನು ಹೊಂದಿದೆ. ಕೇವಲ ೩ (೩%) ಸಂಸ್ಥೆಗಳು ೨೦ ರಿಂದ ೨೫ ಕಛೇರಿ ಸಿಬ್ಬಂದಿಯನ್ನು ಹೊಂದಿವೆ. ಸಂಸ್ಥೆಗಳು ಆರ್ಥಿಕವಾಗಿ ತೊಂದರೆ ಪಡುತ್ತಿದ್ದರೂ, ಜನರು ಯಾವುದೇ ಅಪೇಕ್ಷೆಯಿಲ್ಲದೆ, ಕಾರ್ಯನಿರ್ವಹಿಸಲು ಮುಂದೆ ಬರುತ್ತಿರುವುದು ಸಂತಸ ಕೊಡುವ ವಿಚಾರ.

**ಕೋಷ್ಟಕ ೬.೭**

**ಸಂಸ್ಥೆಗಳು ವ್ಯಾಜ್ಯಗಳನ್ನು ವೇದಿಕೆಗಳಿಗೆ ಕಳುಹಿಸಿದ ವಿವರ (೩೧.೧೨.೨೦೦೯ ರಂದು ಇದ್ದಂತೆ)**

| ವ್ಯಾಜ್ಯಗಳ ವಿವರ | ಸಂಸ್ಥೆಗಳು | ಶೇಕಡಾವಾರು |
|---|---|---|
| ಸಾಮಾನ್ಯ ವ್ಯಾಜ್ಯಗಳು | ೪೯ | ೬೮% |
| ಏಕವ್ಯಕ್ತಿ ವ್ಯಾಜ್ಯಗಳು | ೫೫ | ೭೬% |
| ಎರಡೂ ತರಹದ ವ್ಯಾಜ್ಯಗಳು | ೨೩ | ೩೨% |

**ಮೂಲ :- ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ಸಂಖ್ಯೆ ೬.೭ ರ ಪ್ರಕಾರ ಸಂಶೋಧನೆ ಸ್ಪಂದಿಸಿ, ಉತ್ತರಿಸಿದ ೭೨ ಗ್ರಾಹಕ ಸಂಸ್ಥೆಗಳಲ್ಲಿ ೬೮% ರಷ್ಟು ಸಂಸ್ಥೆಗಳು ಸಾಮಾನ್ಯ ವ್ಯಾಜ್ಯಗಳನ್ನು ಅಂದರೆ ಎಲ್ಲ ಜನರಿಗೂ

ಅನ್ವಯಿಸುವಂತಹ ವ್ಯಾಜ್ಯಗಳನ್ನು ಹಾಗೆಯೇ ೭೬% ರಷ್ಟು ಸಂಸ್ಥೆಗಳು ಏಕವ್ಯಕ್ತಿ ಪರ ವ್ಯಾಜ್ಯಗಳನ್ನು ಸ್ವೀಕರಿಸಿ ಗ್ರಾಹಕ ವೇದಿಕೆಯಲ್ಲಿ ನ್ಯಾಯ ಕೊಡಿಸುವ ದಾರಿಯನ್ನು ಹಾಕಿಕೊಟ್ಟು ಗ್ರಾಹಕರಿಗೆ ಸಹಾಯ ಮಾಡಿವೆ. ೭೨ ಸಂಸ್ಥೆಗಳಲ್ಲಿ ೩೨% ರಷ್ಟು ಸಂಸ್ಥೆಗಳು ಎರಡು ಪ್ರಕಾರದ ವ್ಯಾಜ್ಯಗಳನ್ನು ಸ್ವೀಕರಿಸಿ ವೇದಿಕೆಗೆ ಕಳುಹಿಸಲು ಹಾಗು ನ್ಯಾಯ ದೊರಕಿಸಿ ಕೊಡಲು ಪ್ರಯತ್ನಿಸಿವೆ. ಈ ಎಲ್ಲ ಗ್ರಾಹಕ ಸಂಸ್ಥೆಗಳು ಗ್ರಾಹಕರಿಗೆ ನ್ಯಾಯ ಒದಗಿಸಲು ಸಹಾಯ ಮಾಡುತ್ತಿವೆ ಎಂದು ತಿಳಿಯುತ್ತಿದೆ.

**ಕೋಷ್ಠಕ ೬.೮**

**ಗ್ರಾಹಕ ಸಂಸ್ಥೆಗಳ ಸಂಖ್ಯೆಯ ವಿವರ ಮತ್ತು ಸಂಸ್ಥೆಗಳ ಸದಸ್ಯತ್ವ**

| ಸದಸ್ಯತ್ವದ ಸಂಖ್ಯೆ | ಸಂಸ್ಥೆಗಳು | ಶೇಕಡಾವಾರು |
|---|---|---|
| ೫೦ ರ ವರೆಗೆ | ೦೪ | ೬% |
| ೫೦ ರಿಂದ ೧೦೦ | ೦೫ | ೬% |
| ೧೦೦ ರಿಂದ ೧೫೦ | ೨೦ | ೩೦% |
| ೧೫೦ ರಿಂದ ೨೦೦ | ೧೫ | ೨೧% |
| ೨೦೦ ಕ್ಕಿಂತ ಹೆಚ್ಚು | ೨೮ | ೩೭% |
| **ಒಟ್ಟು** | **೭೨** | ೧೦೦ |

**ಮೂಲ : ಪ್ರಾಥಮಿಕ ಸಮೀಕ್ಷೆ**

ಕೋಷ್ಠಕ ಸಂಖ್ಯೆ ೬.೮ ರ ಅನುಸಾರ ೪(೬%) ಗ್ರಾಹಕ ಸಂಸ್ಥೆಗಳು ೫೦ ಕ್ಕಿಂತ ಕಡಿಮೆ ಸದಸ್ಯರನ್ನು ಹೊಂದಿವೆ. ೫(೬%) ಗ್ರಾಹಕ ಸಂಸ್ಥೆಗಳು ೫೦ ರಿಂದ ೧೦೦ ರ ವರೆಗೆ ಸದಸ್ಯರನ್ನು ಹೊಂದಿವೆ. ೨೦ (೩೦%) ಸಂಸ್ಥೆಗಳು ೧೦೦ ರಿಂದ ೧೫೦ ರ ವರೆಗೆ ಸದಸ್ಯರನ್ನು ಹೊಂದಿವೆ. ೧೫ (೨೧%) ಸಂಸ್ಥೆಗಳು ೧೫೦ ರಿಂದ ೨೦೦ ಸದಸ್ಯರನ್ನು ಹೊಂದಿದರೆ, ೨೮ (೩೭%)ಸಂಸ್ಥೆಗಳು ೨೦೦ ಕ್ಕಿಂತಲೂ ಹೆಚ್ಚಿನ ಸದಸ್ಯರನ್ನು ಗಳಿಸುವಲ್ಲಿ ಯಶಸ್ವಿಯಾಗಿವೆ.

**ಕೋಷ್ಟಕ ೬.೯**

**ಸಂಸ್ಥೆಗಳ ಸದಸ್ಯರ ಶಿಕ್ಷಣದ ವಿವರ**

| ಶಿಕ್ಷಣದ ವಿವರ | ಸದಸ್ಯರ ಸಂಖ್ಯೆ | ಶೇಕಡಾವಾರು |
|---|---|---|
| ಅನಕ್ಷರಸ್ಥರು | ೩೮೪ | ೪% |
| ಎಸ್.ಎಸ್.ಎಲ್.ಸಿ.ಕ್ಕಿಂತ ಕಡಿಮೆ | ೧೯೯೬ | ೧೯% |
| ಎಸ್.ಎಸ್.ಎಲ್.ಸಿ | ೨೦೮೦ | ೨೩% |
| ಪದವಿ | ೨೧೭೬ | ೨೪% |
| ಸ್ನಾತಕೋತ್ತರ | ೨೦೪೮ | ೨೩% |
| ಇತರ ಪದವಿ | ೫೬೬ | ೭% |
| **ಒಟ್ಟು** | **೮೯೫೦** | **೧೦೦%** |

**ಮೂಲ : ಪ್ರಾಥಮಿಕ ಸಮೀಕ್ಷೆ**




ಕೋಷ್ಟಕ ೬.೯ರ ಪ್ರಕಾರ ೩೮೪ (೪%) ಅಶಿಕ್ಷಿತರು ಸದಸ್ಯರಾಗಿದ್ದಾರೆ. ೧೯೯೬ (೧೯%) ಎಸ್.ಎಸ್.ಎಲ್.ಸಿ ಕ್ಕಿಂತ ಕಡಿಮೆ ಕಲಿತ ಸದಸ್ಯರಿದ್ದಾರೆ. ಎಸ್.ಎಸ್.ಎಲ್.ಸಿ. ಕಲಿತವರು ೨೦೮೦ (೨೩%) ಇದ್ದಾರೆ. ಪದವಿ ಹೊಂದಿದವರು ೨೧೭೬ (೨೪%), ಸ್ನಾತಕೋತ್ತರ ಪಾಸಾದವರು ೨೦೪೮ (೨೩%) ಹಾಗೂ ೫೬೬ (೭%) ಇತರ ಪದವಿ ಹೊಂದಿರುವ ಸದಸ್ಯರಿದ್ದಾರೆ.

**ಕೋಷ್ಟಕ ೬.೧೦**

**ಗ್ರಾಹಕ ಸಂಸ್ಥೆಗಳ ಸದಸ್ಯರ ವೃತ್ತಿ / ಉದ್ಯೋಗ**

| ಕ.ಸಂ | ಉದ್ಯೋಗ | ಸದಸ್ಯರ ಸಂಖ್ಯೆ | ಶೇಕಡಾವಾರು |
|---|---|---|---|
| ೧. | ವ್ಯವಸಾಯ | ೧೩೨೦ | ೧೫% |
| ೨ | ವ್ಯಾಪಾರ | ೧೨೬೦ | ೧೪% |
| ೩ | ವೃತ್ತಿಪರ | ೧೧೮೫ | ೧೩% |

| | | | |
|---|---|---|---|
| ೪ | ಸರಕಾರಿ ಸೇವೆ | ೧೧೦೦ | ೧೨% |
| ೫ | ವಿದ್ಯಾರ್ಥಿ | ೫೨೦ | ೬% |
| ೬ | ನಿರುದ್ಯೋಗಿ | ೧೨೪೦ | ೧೪% |
| ೭ | ನಿವೃತ್ತಿ ನೌಕರ | ೧೧೪೦ | ೧೨% |
| ೮ | ಗೃಹಿಣಿ | ೧೧೮೫ | ೧೪% |
| | ಒಟ್ಟು | ೮೯೫೦ | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೧೦ ರ ಪ್ರಕಾರ ೭೨ ಗ್ರಾಹಕ ಸಂಸ್ಥೆಗಳಲ್ಲಿ ಒಟ್ಟು ೮೯೫೦ ಸದಸ್ಯರು ಇದ್ದಾರೆ. ಅದರಲ್ಲಿ ೧೩೨೦ (೧೫%) ಸದಸ್ಯರು ವ್ಯವಸಾಯ ಮಾಡುತ್ತಾರೆ ೧೨೬೦ (೧೪%) ಸದಸ್ಯರು ವ್ಯಾಪಾರ ಮಾಡುತ್ತಾರೆ. ೧೧೮೫ (೧೩%) ಸದಸ್ಯರು ವೃತ್ತಿಪರರಿದ್ದಾರೆ. ೧೧೦ (೧೨%) ಸದಸ್ಯರು ಸರಕಾರಿ ಸೇವೆಯಲ್ಲಿದ್ದಾರೆ. ೫೨೦ (೬%) ವಿದ್ಯಾರ್ಥಿಗಳಿದ್ದಾರೆ. ೧೨೪೦ (೧೪%) ನಿರುದ್ಯೋಗಿಗಳಿದ್ದಾರೆ. ೧೧೪೦ (೧೨%) ನಿವೃತ್ತಿ ಹೊಂದಿದವರಿದ್ದಾರೆ. ೧೧೮೫ (೧೪%) ಗೃಹಿಣಿಯರಿದ್ದಾರೆ. ಸಂಸ್ಥೆಗಳಲ್ಲಿ ವಿವಿಧ ಕೆಲಸಗಳನ್ನು ಮಾಡುವ ಜನರು ಸದಸ್ಯರಾಗಿದ್ದಾರೆ. ಸದಸ್ಯರಲ್ಲಿ ಗೃಹಿಣಿಯರು ಹಾಗೂ ವಿದ್ಯಾರ್ಥಿಗಳು ಇದ್ದಾರೆ.



**ಕೋಷ್ಟಕ ೬.೧೧**

**ಗ್ರಾಹಕ ಸಂಸ್ಥೆಗಳು ಹಾಗು ೨೦೦೫ ರಿಂದ ೨೦೦೯ ರ ವರೆಗೆ ಸಂಸ್ಥೆಗಳ ಆಯವ್ಯಯ ವಿವರ**

| ಆಯ ವ್ಯಯ | ವರ್ಷ | | | | |
|---|---|---|---|---|---|
| | ೨೦೦೫ | ೨೦೦೬ | ೨೦೦೭ | ೨೦೦೮ | ೨೦೦೯ |
| ರೂ. ೫೦೦೦ ಕ್ಕಿಂತ ಕಡಿಮೆ | ೧೩ | ೦೮ | ೦೯ | ೦೮ | ೧೧ |
| ರೂ. ೫೦೦೦-೧೦೦೦೦ | ೧೩ | ೧೨ | ೧೦ | ೦೭ | ೦೬ |
| ರೂ. ೧೦೦೦೦-೧೫೦೦೦ | ೧೫ | ೦೯ | ೦೮ | ೦೫ | ೦೧ |
| ರೂ. ೧೫೦೦೦-೨೦೦೦೦ | ೦೪ | ೧೩ | ೦೯ | ೧೧ | ೦೪ |
| ರೂ. ೨೦೦೦೦ ಕ್ಕಿಂತ ಹೆಚ್ಚು | ೦೮ | ೧೭ | ೨೪ | ೨೪ | ೩೫ |
| **ಒಟ್ಟು** | **೫೩** | **೫೯** | **೬೦** | **೫೫** | **೫೭** |

**ಮೂಲ : ಪ್ರಾಥಮಿಕ ಸಮೀಕ್ಷೆ**

೨೦೦೫ ನೇ ಇಸ್ವಿಯಲ್ಲಿ ಒಟ್ಟು ೭೨ ಸ್ಪಂದನೆ ಪೈಕಿ ೫೩ ಸಂಸ್ಥೆಗಳು ಮುಂಗಡ ಪತ್ರಿಕೆಯನ್ನು ತಯಾರಿಸುವ ಉತ್ಸಾಹ ತೋರಿಸಿವೆ. ೧೩ ಸಂಸ್ಥೆಗೆ ಮುಂಗಡ ಪಟ್ಟಿಯ ರೂ ೫೦೦೦ ಕ್ಕಿಂತ ಕಡಿಮೆ ಇದ್ದರೆ, ಮತ್ತೊಂದು ೧೩ ಸಂಸ್ಥೆಗಳ ಪಟ್ಟಿಯು ೫೦೦೦ ರಿಂದ ೧೦೦೦೦ ರೂ ಒಳಗೆ ಇದೆ. ಇನ್ನೊಂದು ೧೫ ಸಂಸ್ಥೆಗಳ ಅಂದಾಜು ಪತ್ರಿಕೆ ೧೦೦೦೦ ರಿಂದ ೧೫೦೦೦ ರೂ ಒಳಗೊಂಡಿದೆ. ೪ ಸಂಸ್ಥೆಗಳು ೧೫೦೦೦ ರಿಂದ ೨೦೦೦೦ ರೂ ವರೆಗೆ ಇದ್ದರೆ, ೮ ಸಂಸ್ಥೆಗಳು ೨೦೦೦೦ ರೂ ಕ್ಕಿಂತಲೂ ಮಿಕ್ಕಿ ಅಂದಾಜು ಪತ್ರಿಕೆ ತಯಾರಿಸಿದೆ.

೨೦೦೬ ರಲ್ಲಿ ೮ ಸಂಸ್ಥೆಗಳ ಅಂದಾಜು ಪತ್ರಿಕೆ ರೂ ೫೦೦೦ ಕ್ಕಿಂತ ಕಡಿಮೆ ಇದ್ದರೆ, ೧೨ ಸಂಸ್ಥೆಗಳು ೫೦೦೦ ರಿಂದ ೧೦೦೦೦ ರ ವರೆಗೆ ಪತ್ರಿಕೆ ತಯಾರಿಸಿವೆ. ೯ ಗ್ರಾಹಕರ ಸಂಸ್ಥೆಗಳು ೧೬೦೦೦ ದಿಂದ ೧೫೦೦೦ ರೂ ವರೆಗೆ ಅಂದಾಜು ಪತ್ರಿಕೆ ತೋರಿಸಿದರೆ ೧೩ ಗ್ರಾಹಕ ಸಂಸ್ಥೆಗಳ ಪತ್ರಿಕೆ ೧೫೦೦೦ ರಿಂದ ೨೦೦೦೦ ರೂ ವರೆಗೆ ತಯಾರಿಸಿವೆ. ೧೭ ಸಂಸ್ಥೆಗಳು ರೂ ೨೦೦೦೦ ಮಿಕ್ಕಿ ಪತ್ರಿಕೆ ತಯಾರಿಸಿವೆ.

೨೦೦೭ ರಲ್ಲಿ ೬೦ ಸಂಸ್ಥೆಗಳು ಅಂದಾಜು ಪತ್ರಿಕೆ ತಯಾರಿಸಿವೆ. ೯ ಸಂಸ್ಥೆಗಳು ೫೦೦೦ ರೂ ಕ್ಕಿಂತಲೂ ಕಡಿಮೆ, ೧೦ ಸಂಸ್ಥೆಗಳು ೫೦೦೦ ರೂ ದಿಮದ ೧೦೦೦೦ ರೂ ವರೆಗೆ ೮ ಸಂಸ್ಥೆಗಳು ೧೦೦೦೦ ದಿಂದ ೧೫೦೦೦ ರೂ ವರೆಗೆ, ೯ ಸಂಸ್ಥೆಗಳು ೧೫೦೦೦ ದಿಂದ ೨೦೦೦೦ ರೂ ವರೆಗೆ ೨೪ ಸಂಸ್ಥೆಗಳು, ೨೦೦೦೦ ರೂ ಮಿಕ್ಕಿ ಅಂದಾಜು ಪತ್ರಿಕೆ ತಯಾರಿಸಿವೆ.

೨೦೦೮ ರಲ್ಲಿ ೭೨ ಸಂಸ್ಥೆಗಳಲ್ಲಿ ೫೫ ಸಂಸ್ಥೆಗಳು, ಅಂದಾಜು ಪತ್ರಿಕೆ ತಯಾರಿಸಿವೆ. ೮ ಸಂಸ್ಥೆಗಳು ರೂ ೫೦೦೦ ವರೆಗೆ, ೧೭ ಸಂಸ್ಥೆಗಳು ೧೫೦೦೦ ರೂ ವರೆಗೆ ಹಾಗೂ ೧೧ ಸಂಸ್ಥೆಗಳು

೧೫೦೦೦ ದಿಂದ ೨೦೦೦೦ ರೂ ವರೆಗೆ ಹಾಗೂ ೨೪ ಸಂಸ್ಥೆಗಳು ೨೦೦೦೦ ರೂ ವರೆಗೆ ಅಂದಾಜು ಪತ್ರಿಕೆ ತಯಾರಿಸಿವೆ.

೨೦೦೯ ರಲ್ಲಿ ೧೧ ಸಂಸ್ಥೆಗೆ ಅಂದಾಜುಪಟ್ಟಿ ೫೦೦೦ ರೂ ವರೆಗೆ ಇದ್ದರೆ ೬ ಸಂಸ್ಥೆಗಳು ೫೦೦೦ ರೂ ದಿಂದ ೧೦೦೦೦ ರೂ ವರೆಗೆ ಕೇವಲ ಒಂದು ಸಂಸ್ಥೆಗೆ ೧೦೦೦೦ ರೂ ದಿಂದ ೧೫೦೦೦ ರೂ ವರೆಗೆ ೪ ಸಂಸ್ಥೆಗಳು ೧೫೦೦೦ ರೂ ದಿಂದ ೨೦೦೦೦ ರೂ ವರೆಗೆ ಹಾಗೂ ೩೫ ಸಂಸ್ಥೆಗಳು ೨೦೦೦೦ ಕ್ಕಿಂತಲೂ ಮೇಲ್ಪಟ್ಟ ಅಂದಾಜು ಪಟ್ಟಿ ತಯಾರಿಸಿದೆ.

೨೦೦೫ ರಲ್ಲಿ ೧೯ ಸಂಸ್ಥೆಗಳು, ೨೦೦೬ ರಲ್ಲಿ ೧೩ ಸಂಸ್ಥೆಗಳು, ೨೦೦೭ ರಲ್ಲಿ ೧೨ ಸಂಸ್ಥೆಗಳು ೨೦೦೮ ರಲ್ಲಿ ೧೭ ಸಂಸ್ಥೆಗಳು ಹಾಗೂ ೨೦೦೯ ರಲ್ಲಿ ೧೫ ಸಂಸ್ಥೆಗಳು ಅಂದಾಜು ಪಟ್ಟಿಯನ್ನು ತಯಾರಿಸುವ ಕೆಲಸವನ್ನೆ ಮಾಡಿಲ್ಲ.

೭೨ ಗ್ರಾಹಕ ಸ್ವಯಂ ಸಂಸ್ಥೆಗಳಲ್ಲಿ ೬೦ ಸಂಸ್ಥೆಗಳು ಸಧೃಢವಾಗಿದ್ದು ಉಳಿದ ಸಂಸ್ಥೆಗಳು ಹಣಕಾಸು ವ್ಯವಸ್ಥೆಯಲ್ಲಿ ಹಿಂದುಳಿದಿವೆ. ಅವುಗಳಿಗೆ ಸರಕಾರದ ಅನುದಾನ ಅವಶ್ಯವಾಗಿದೆ.

**ಕೋಷ್ಟಕ ೬.೧೨**

**ಗ್ರಾಹಕ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಗ್ರಾಹಕ ಸಂಸ್ಥೆಗಳ ವಿವರ**

| ಅ.ನಂ | ವಿವರ | ಸಂಸ್ಥೆಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧. | ರಾಜ್ಯ ಮಟ್ಟದ ಚಳುವಳಿ | ೭೦ | ೯೭% |
| ೨. | ರಾಷ್ಟ್ರಮಟ್ಟದ ಚಳುವಳಿ | ೩೭ | ೫೧% |

**ಮೂಲ : ಪ್ರಾಥಮಿಕ ಸಮೀಕ್ಷೆ**

**ಕೋಷ್ಟಕ ೬.೧೩**

**ಗ್ರಾಹಕ ಸಂಸ್ಥೆಗಳ ಕಛೇರಿ ಕಟ್ಟಡದ ವಿವರ**

| ಅ.ನಂ. | ಕಟ್ಟಡ ವಿವರ | ಸಂಸ್ಥೆಗಳು | ಶೇಕಡಾವಾರು |
|---|---|---|---|
| ೧ | ಬಾಡಿಗೆ ಕಟ್ಟಡ | ೧೩ | ೧೮% |
| ೨ | ಸದಸ್ಯರ ಕಟ್ಟಡ | ೫೪ | ೭೫% |
| ೩ | ಸ್ವಂತದ ಕಟ್ಟಡ | ೦೫ | ೦೭% |
| | ಒಟ್ಟು | ೭೨ | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

೭೨ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳಲ್ಲಿ ೧೩ (೧೮%) ಸಂಸ್ಥೆಗಳಲ್ಲಿ ಬಾಡಿಗೆ ಕಟ್ಟಡದಲ್ಲಿ ತಮ್ಮ ಕಛೇರಿಯ ಕಾರ್ಯವನ್ನು ನಡೆಸಿಕೊಂಡು ಹೋಗುತ್ತಿವೆ. ೫೪ (೭೫%) ಗ್ರಾಹಕ ಸಂಸ್ಥೆಗಳು, ಸಂಸ್ಥೆಯ ಸದಸ್ಯರ ಕಟ್ಟಡದಲ್ಲಿ ಕಛೇರಿಯ ವ್ಯವಹಾರವನ್ನು ನಡೆಸಿಕೊಂಡು ಹೋಗುತ್ತಿವೆ.ಕೇವಲ ೫ (೭%) ಸ್ವಯಂ ಸಂಸ್ಥೆಗಳು ತಮ್ಮ ಸ್ವಂತ ಕಟ್ಟಡ ಹೊಂದಿದ್ದು, ಕಛೇರಿಯ ಕೆಲಸ ಕಾರ್ಯಗಳನ್ನು ಅಂತಹ ಕಟ್ಟಡದಲ್ಲಿ ನಡೆಸಿಕೊಂಡು ಹೋಗುತ್ತವೆ. ಸಂಸ್ಥೆಗಳಿಗೆ ಯಾವುದೇ ಆರ್ಥಿಕ ಸೌಲಭ್ಯ ದೊರೆಯದಿದ್ದರೂ ಬಾಡಿಗೆ ಕಟ್ಟಡದಲ್ಲೊ, ಸದಸ್ಯರ ಮನೆಗಳಲ್ಲೊ ಅಥವಾ ಸಂಸ್ಥೆಯ ಸ್ವಂತ ಕಟ್ಟಡದಲ್ಲೊ ಕಛೇರಿಯ ಕೆಲಸವನ್ನು ನಡೆಸಿಕೊಂಡು ಹೋಗುತ್ತಿವೆ.

**ಕೋಷ್ಟಕ ೬.೧೪**

**ಗ್ರಾಹಕ ಸಂಸ್ಥೆಯ ಕೆಲಸವನ್ನು ನಿರ್ವಹಿಸುವವರ ವಿವರ**

| ಅ.ನಂ | ವಿವರ | ಸಂಸ್ಥೆಗಳು | ಶೇಕಡಾವಾರು |
|---|---|---|---|
| ೧ | ಸದಸ್ಯರು | ೦೭ | ೧೦% |
| ೨ | ಅಧ್ಯಕ್ಷರು ಅಥವಾ ಕಾರ್ಯದರ್ಶಿ | ೦೨ | ೦೩% |
| ೩ | ನೌಕರರು | ೬೩ | ೮೭% |
| | **ಒಟ್ಟು** | **೭೨** | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

೭೨ ಗ್ರಾಹಕ ಸಂಸ್ಥೆಗಳಲ್ಲಿ ೭ ಸಂಸ್ಥೆಗಳ ಕಛೇರಿ ಕೆಲಸವನ್ನು ಸಂಸ್ಥೆಯ ಸದಸ್ಯರು ನೋಡಿಕೊಂಡು ಹೋಗುತ್ತಾರೆ, ಕೇವಲ ೨ (೩%) ಸಂಸ್ಥೆಗಳನ್ನು ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳು ನೋಡಿಕೊಳ್ಳುತ್ತಾರೆ. ೬೩ (೮೭%) ಸಂಸ್ಥೆಗಳ ಕಛೇರಿ ಕೆಲಸವನ್ನು ನೌಕರರು ನಿರ್ವಹಿಸುತ್ತಾರೆ. ಆರ್ಥಿಕವಾಗಿ ತೊಂದರೆ ಅನುಭವಿಸುತ್ತಿದ್ದರೂ ಕಛೇರಿ ಕೆಲಸವನ್ನು ಮಾಡಲು ಸಂಸ್ಥೆಗಳು ನೌಕರರನ್ನು ನಿಯಮಿಸಿ ಸಂಬಳ ಕೊಡುತ್ತಿವೆ.

**ಕೋಷ್ಟಕ ೬.೧೫**

**ಗ್ರಾಹಕ ಸಂಸ್ಥೆಗಳಲ್ಲಿ ಕೆಲಸ ಮಾಡುವ ನೌಕರರ ವಿವರ**

| | | | |
|---|---|---|---|
| ೧ | ಪೂರ್ಣಾವಧಿ ನೌಕರರು | ೦೫ | ೭% |
| ೨ | ಅರೆಕಾಲಿಕ ನೌಕರರು | ೫೮ | ೮೧% |
| ೩ | ನೌಕರರು ಇಲ್ಲ | ೯ | ೧೨% |
| | **ಒಟ್ಟು** | ೭೨ | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

ಸಂಶೋಧನೆಗೆ ಸ್ಪಂದನೆ ತೋರಿದ ೭೨ ಗ್ರಾಹಕ ಸಂಸ್ಥೆಗಳಲ್ಲಿ ೬೩ ಸಂಸ್ಥೆಗಳು ನೌಕರರನ್ನು ಹೊಂದಿದ್ದು, ಅದರಲ್ಲಿ ಕೇವಲ ೫ (೭%) ಸಂಸ್ಥೆಗಳು ಪೂರ್ಣಾವಧಿ ಪ್ರಮಾಣದ ನೌಕರರನ್ನು ಹೊಂದಿವೆ. ಉಳಿದ ಸಂಸ್ಥೆಗಳು ಅಂದರೆ ೫೮ (೮೧%) ಸಂಸ್ಥೆಗಳು ಅರೆಕಾಲಿಕ ಪ್ರಮಾಣದ ನೌಕರರನ್ನು ಹೊಂದಿದೆ. ೯ (೧೨%) ಸಂಸ್ಥೆಗಳಲ್ಲಿ ನೌಕರರು ಇಲ್ಲ. ಈ ನೌಕರರಲ್ಲಿ ಸ್ವಲ್ಪ ಸಂಖ್ಯೆಯಲ್ಲಿ ಪೂರ್ಣಾವಧಿ ನೌಕರರಾದರೆ, ಹೆಚ್ಚಿನ ಸಂಖ್ಯೆಯ ನೌಕರರು ಅರೆಕಾಲಿಕ ನೌಕರರಾಗಿದ್ದಾರೆ.

**ಕೋಷ್ಟಕ ೬.೧೬**

**ಗ್ರಾಹಕ ಸಂಘ ಸಂಸ್ಥೆಗಳ ಸಮಸ್ಯೆಗಳು ವಿವರ**

| ಅ.ನಂ | ಸಮಸ್ಯೆಗಳು | ಸಂಸ್ಥೆ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹಣಕಾಸಿನ ಸಮಸ್ಯೆ | ೬೩ | ೮೮% |
| ೨ | ಸದಸ್ಯರ ಕೊರತೆ | ೫೫ | ೫೬% |
| ೩ | ಸಾರ್ವಜನಿಕರ ಬೆಂಬಲದ ಕೊರತೆ | ೫೩ | ೭೪% |
| ೪ | ಸರಕಾರಿ ನೌಕರರ ಬೆಂಬಲದ ಕೊರತೆ | ೪೦ | ೫೬% |
| ೫ | ಸಾರ್ವಜನಿಕ ಪ್ರತಿನಿಧಿಗಳ ಬೆಂಬಲದ ಕೊರತೆ | ೫೩ | ೭೪% |
| ೬ | ಸರಕಾರದ ಬೆಂಬಲದ ಕೊರತೆ | ೫೭ | ೭೯% |
| ೭ | ಗ್ರಾಹಕರ ಸ್ಪಂದನೆ ಕೊರತೆ | ೫೬ | ೭೮% |

**ಮೂಲ : ಪ್ರಾಥಮಿಕ ಸಮೀಕ್ಷೆ**



ಕೋಷ್ಟಕ ೬.೧೬ ರ ಪ್ರಕಾರ ೭೨ ಗ್ರಾಹಕ ಸಂಸ್ಥೆಗಳು ಒಂದಿಲ್ಲೊಂದು ಸಮಸ್ಯೆಯನ್ನು ಎದುರಿಸುತ್ತಿವೆ. ೮೮% ಗ್ರಾಹಕ ಸಂಸ್ಥೆಗಳು ಹಣಕಾಸಿನ ತೊಂದರೆಯನ್ನು ಅನುಭವಿಸುತ್ತಿವೆ. ೭೬% ರಷ್ಟು ಸಂಸ್ಥೆಗಳಲ್ಲಿ, ಸದಸ್ಯರ ಬೆಂಬಲದ ಕೊರತೆಯನ್ನು, ೭೪% ಸಾರ್ವಜನಿಕರಿಂದ ಯಾವುದೆ ಸಹಾಯ ಬೆಂಬಲ ಸಿಗುತ್ತಿಲ್ಲ. ೫೬% ಸಂಸ್ಥೆಗಳಿಗೆ ಸರಕಾರಿ ನೌಕರರು ಬೆಂಬಲ ಕೊಡುತ್ತಿಲ್ಲ. ೭೪%ದಷ್ಟು ಸಂಸ್ಥೆಗಳು ಸಾರ್ವಜನಿಕರ ಪ್ರತಿನಿಧಿಗಳ ಬೆಂಬಲ ಕೊರತೆಯನ್ನು ಅನುಭವಿಸುತ್ತಿದೆ. ೭೯% ಸಂಸ್ಥೆಗಳಿಗೆ ಸರಕಾರದಿಂದ ಯಾವ ಬೆಂಬಲವು ಸಿಗುತ್ತಿಲ್ಲ. ೭೮% ದಷ್ಟು ಸಂಸ್ಥೆಗಳಿಗೆ ಗ್ರಾಹಕರಿಂದ ಸ್ಪಂದನೆ ಸಿಗುತ್ತಿಲ್ಲ. ಗ್ರಾಹಕ ಸಂಘ ಸಂಸ್ಥೆಗಳ ಸಮಸ್ಯೆಗಳನ್ನು ಅರಿತುಕೊಳ್ಳಲು ಹಾಕಿದ ಪ್ರಶ್ನೆಗೆ ಈ ಸಂಸ್ಥೆಗಳು ಎಲ್ಲ ಕ್ಷೇತ್ರಗಳಲ್ಲಿಯೂ ತೊಂದರೆ ಅನುಭವಿಸುತ್ತಿರುವ ಉತ್ತರ ಸಿಕ್ಕಿತು. ಹಣಕಾಸಿನ ತೊಂದರೆಯ ಜೊತೆಗೆ ಸರಕಾರದ ನಿರ್ಲಕ್ಷದ ಕುರಿತು ಮಾಹಿತಿ ನೀಡಿದ್ದಾರೆ. ಕೆಲವು ಸಂಸ್ಥೆಗಳಿಗೆ ಸದಸ್ಯರ ಕೊರತೆ ಇದೆ. ಕೆಲವು ಸಂಸ್ಥೆಗಳಿಗೆ ಸಾರ್ವಜನಿಕರ ಬೆಂಬಲ ಇಲ್ಲ. ಸಾರ್ವಜನಿಕ ಪ್ರತಿನಿಧಿಗಳ ಬೆಂಬಲದ ಕೊರತೆ ಕೂಡ ಇದೆ. ಹಲವು ಸಂಸ್ಥೆಗಳು ಗ್ರಾಹಕರು ಸರಿಯಾಗಿ ಸ್ಪಂದಿಸುವುದಿಲ್ಲ ಎನ್ನುವ ನೋವನ್ನು ತೋಡಿಕೊಂಡಿದ್ದಾರೆ.

**ಕೋಷ್ಟಕ ೬.೧೭**

**ಜಿಲ್ಲಾವೇದಿಕೆ ಮತ್ತು ಆಯೋಗಗಳೊಂದಿಗೆ ಸಹಯೋಗ**

| ಅ.ನಂ | ವಿವರ | ಸಂಸ್ಥೆಗಳು | ಶೇಕಡಾವಾರು |
|---|---|---|---|
| ೧ | ಗ್ರಾಹಕ ಜಿಲ್ಲಾ ವೇದಿಕೆ | ೭೯ | ೯೬% |
| ೨ | ರಾಜ್ಯ ಆಯೋಗ | ೪೪ | ೬೧% |
| ೩ | ರಾಷ್ಟ್ರೀಯ ಆಯೋಗ | ೨೦ | ೨೮% |

**ಮೂಲ : ಪ್ರಾಥಮಿಕ ಸಮೀಕ್ಷೆ**

ಸ್ಪಂದಿಸಿದ ೭೨ ಗ್ರಾಹಕ ಸಂಸ್ಥೆಗಳಲ್ಲಿ ೯೬% ರಷ್ಟು ಸಂಸ್ಥೆಗಳು ಜಿಲ್ಲಾವೇದಿಕೆಗೆ ಸ್ಪಂದಿಸಿ ಅವುಗಳ ಜೊತೆ ಸಹಕಾರ ನೀಡಿವೆ. ೬೧% ರಷ್ಟು ಸಂಸ್ಥೆಗಳು ರಾಜ್ಯವೇದಿಕೆ ಜೊತೆ ಕೈಗೂಡಿಸಿವೆ. ಆದರೆ ೨೮% ದಷ್ಟು ಮಾತ್ರ ರಾಷ್ಟ್ರ ಆಯೋಗದ ಜೊತೆ ಕೆಲಸ ಮಾಡುತ್ತಿವೆ. ಅಧ್ಯಯನಕ್ಕೆ ಸ್ಪಂದಿಸಿದ ಸಂಸ್ಥೆಗಳು ಗ್ರಾಹಕ ಜಿಲ್ಲಾ ವೇದಿಕೆ, ರಾಜ್ಯ ಆಯೋಗ ಹಾಗೂ ರಾಷ್ಟ್ರೀಯ ಆಯೋಗ ಮೂರು ನ್ಯಾಯಾಲಯಗಳ ಜೊತೆ ಸ್ಪಂದಿಸಿ ಕೆಲಸ ಮಾಡುತ್ತಿವೆ.

**ಕೋಷ್ಟಕ ೬.೧೮**

**ಗ್ರಾಹಕ ಸಂಸ್ಥೆಗಳ ವಿವರ ३೧/೧೨/೨೦೦೯ ರ ವರೆಗೆ ಕಳುಹಿಸಿದ ವ್ಯಾಜ್ಯಗಳ ಅನುಸಾರ**

| ಅ.ನಂ | ವಿವರ | ವ್ಯಾಜ್ಯಗಳ ಸಂಖ್ಯೆ | ಸರಾಸರಿ ವ್ಯಾಜ್ಯಗಳು |
|---|---|---|---|
| ೧ | ಜಿಲ್ಲಾ ವೇದಿಕೆ | ೨೭೧೪ | ೩೮ |
| ೨ | ರಾಜ್ಯ ಆಯೋಗ | ೨೯೬ | ೦೪ |
| ೩ | ರಾಷ್ಟ್ರೀಯ ಆಯೋಗ | ೪೪ | ೦.೬೧ |

**ಮೂಲ : ಪ್ರಾಥಮಿಕ ಸಮೀಕ್ಷೆ**

೩೧.೧೨.೨೦೦೯ ರ ವರೆಗೆ ೭೨ ಗ್ರಾಹಕ ಸಂಸ್ಥೆಗಳು ಸರಾಸರಿ ೩೮ ವ್ಯಾಜ್ಯಗಳನ್ನು ಜಿಲ್ಲಾವೇದಿಕೆಗೆ ಕೊಟ್ಟು ಕಳುಹಿಸಿವೆ. ಹಾಗೆಯೇ ಸರಾಸರಿ ೪ ವ್ಯಾಜ್ಯಗಳನ್ನು ಪ್ರತಿ ಗ್ರಾಹಕ ಸಂಸ್ಥೆ ರಾಜ್ಯ ಆಯೋಗಕ್ಕೆ ನ್ಯಾಯಕ್ಕಾಗಿ ಕಳುಹಿಸಿವೆ. ಹಾಗೆಯೇ ೭೨ ಸಂಸ್ಥೆಗಳು ಕೇವಲ ೪೪ ವ್ಯಾಜ್ಯಗಳನ್ನು ರಾಷ್ಟ್ರೀಯ ಆಯೋಗಕ್ಕೆ ಕಳುಹಿಸಿಕೊಡಲಾಗಿದೆ. ಈ ಗ್ರಾಹಕ ಸಂಸ್ಥೆಗಳು ಸ್ಥಾಪನೆಯಾದಾಗಿನಿಂದ ೩೧.೧೨.೨೦೦೯ ರ ವರೆಗೆ ಜಿಲ್ಲಾ ವೇದಿಕೆಗೆ ಹೆಚ್ಚಿನ ಗ್ರಾಹಕ ವ್ಯಾಜ್ಯಗಳನ್ನು (ಸರಾಸರಿ ೩೮ ವ್ಯಾಜ್ಯಗಳು) ದಾಖಲು ಮಾಡಲು ಗ್ರಾಹಕರಿಗೆ ಸಹಾಯ ಮಾಡಿವೆ. ರಾಜ್ಯ ಆಯೋಗಕ್ಕೆ ಸಲ್ಲಿಸಲು ಒಟ್ಟು ೨೯೬ ವ್ಯಾಜ್ಯಗಳನ್ನು ದಾಖಲು ಮಾಡಲು ಸಹಾಯ ಮಾಡಿವೆ. ಆದರೆ ಕೇವಲ ೪೪ ವ್ಯಾಜ್ಯಗಳನ್ನು ಮಾತ್ರ ರಾಷ್ಟ್ರೀಯ ಆಯೋಗಕ್ಕೆ ತೆಗೆದುಕೊಂಡು ಹೋಗಿವೆ.

**ಕೋಷ್ಟಕ ೬.೧೯**

**ಗ್ರಾಹಕ ವೇದಿಕೆಯ ಕಾರ್ಯ ವೈಖರಿಯ ಕುರಿತು ಅಭಿಪ್ರಾಯ**

| ಅ.ನಂ | ವಿವರ | ಸಂಸ್ಥೆಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ತೃಪ್ತಿಕರ | ೫೬ | ೭೮% |
| ೨ | ಉತ್ತಮ | ೦೪ | ೬% |
| ೩ | ಅತೃಪ್ತಿಕರ | ೦೯ | ೧೩% |
| ೪ | ಉತ್ತರಿಸದ | ೦೩ | ೩% |
| | **ಒಟ್ಟು** | **೭೨** | **೧೦೦%** |

**ಮೂಲ : ಪ್ರಾಥಮಿಕ ಸಮೀಕ್ಷೆ**

ಸಂಶೋಧನೆಗೆ ಸ್ಪಂದಿಸಿದ ೭೨ ಸಂಸ್ಥೆಗಳಲ್ಲಿ ೬೯ ಸಂಸ್ಥೆಗಳು, ಮೇಲಿನ ಪ್ರಶ್ನೆಗೆ ಉತ್ತರಿಸಿವೆ. ೬೯ (೭೮%) ಸಂಸ್ಥೆಗಳಲ್ಲಿ ೫೬ ಸಂಸ್ಥೆಗಳು, ಗ್ರಾಹಕ ವೇದಿಕೆಯ ಕುರಿತು ತೃಪ್ತಿ ವ್ಯಕ್ತಪಡಿಸಿವೆ. ೦೯ (೧೩%) ಸಂಸ್ಥೆಗಳು ಅತೃಪ್ತಿಕರ, ಅಸಮಾಧಾನ ಎಂದು ಉತ್ತರಿಸಿವೆ. ಕೇವಲ ೪ (೬%) ಸಂಸ್ಥೆಗಳಿಗೆ

ಗ್ರಾಹಕ ವೇದಿಕೆಯ ಕಾರ್ಯದ ವೈಖರಿ ಉತ್ತಮ ಎನ್ನುವ ಸ್ಪಂದನೆಯನ್ನು ವ್ಯಕ್ತ ಪಡಿಸಿವೆ. ೩ (೩%) ಸಂಸ್ಥೆಗಳು ಪ್ರಶ್ನೆಗೆ ಸ್ಪಂದಿಸಿಲ್ಲ. ಕೆಲವು ಸಂಸ್ಥೆಗಳು ಅತೃಪ್ತಿಕರವೆಂದು ಅಭಿಪ್ರಾಯ ವ್ಯಕ್ತಪಡಿಸಿವೆ.

**ಕೋಷ್ಟಕ ೬.೨೦**

**ಗ್ರಾಹಕ ಸಂಸ್ಥೆಗಳ ಪ್ರಕಟಣೆ ವಿವರ**

| ಅ.ನಂ | ಪ್ರಕಟಣಾ ಅವಧಿ | ಪ್ರತಿಸ್ಪಂದನೆ | ಶೇಕಡಾವಾರು |
|---|---|---|---|
| ೧ | ವಾರಕ್ಕೆ | ೦೪ | ೫% |
| ೨ | ಮಾಸಿಕ | ೦೮ | ೧೦% |
| ೩ | ಪ್ರಕಟಿಸದ | ೬೦ | ೮೩% |
| ೪ | ಉತ್ತರಿಸದ | ೦೧ | ೨% |
| | ಒಟ್ಟು | ೭೨ | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

೭೧ ಗ್ರಾಹಕ ಸಂಸ್ಥೆಗಳಲ್ಲಿ ೪ (೫%) ಸಂಸ್ಥೆಗಳು ಸಾಪ್ತಾಹಿಕಗಳನ್ನು ಪ್ರಕಟಿಸುತ್ತಿವೆ. ೮ (೧೦%) ಗ್ರಾಹಕ ಸಂಸ್ಥೆಗಳು ಮಾಸಿಕ ಗ್ರಾಹಕ ಪತ್ರಿಕೆಗಳನ್ನು ಪ್ರಕಟಿಸುತ್ತಿವೆ. ೬೦ (೮೩%) ಗ್ರಾಹಕ ಸಂಸ್ಥೆಗಳು ಯಾವುದೇ ಗ್ರಾಹಕ ಪತ್ರಿಕೆಗಳನ್ನು ಪ್ರಕಟಿಸುವುದಿಲ್ಲ ಹಾಗೂ ೧ (೨%) ಸಂಸ್ಥೆ ಪ್ರಶ್ನೆಗೆ ಉತ್ತರಿಸಿಲ್ಲ. ೭೨ ಗ್ರಾಹಕ ಸ್ವಯಂ ಸಂಸ್ಥೆಗಳಲ್ಲಿ ೭೧ ಸಂಸ್ಥೆಗಳು ಪ್ರಕಟಣೆ ಕುರಿತು ಕೇಳಿದ ಪ್ರಶ್ನೆಗೆ ಉತ್ತರಿಸಿವೆ.

**ಕೋಷ್ಟಕ ೬.೨೧**

**ಗ್ರಾಹಕ ಸಂಸ್ಥೆಗಳ ಕುರಿತು ಗ್ರಾಹಕರ ಅಭಿಪ್ರಾಯ**

| ಅ.ನಂ | ವಿವರ | ಸಂಸ್ಥೆಗಳ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ತೃಪ್ತಿಕರ | ೪೧ | ೫೮% |
| ೨ | ಅತೃಪ್ತಿಕರ | ೦೪ | ೬% |
| ೩ | ಉತ್ತಮ | ೨೨ | ೩೧% |
| ೪ | ಉತ್ತರಿಸದ | ೦೫ | ೬% |
| | **ಒಟ್ಟು** | **೭೨** | ೧೦೦% |

**ಮೂಲ : ಪ್ರಾಥಮಿಕ ಸಮೀಕ್ಷೆ**

೭೨ ಗ್ರಾಹಕ ಸಂಸ್ಥೆಗಳಲ್ಲಿ ೬೭ ಸಂಸ್ಥೆಗಳು ಮೇಲಿನ ಪ್ರಶ್ನೆಗೆ ಉತ್ತರಿಸಿವೆ. ಅದರಲ್ಲಿ ೨೨ (೩೧%) ಸಂಸ್ಥೆಗಳ ಕುರಿತು ಗ್ರಾಹಕರ ಅಭಿಪ್ರಾಯ ಉತ್ತಮವೆಂದು ತಿಳಿಸಿವೆ. ೪೧ (೫೮%)

ಸಂಸ್ಥೆಗಳ ಕುರಿತು ತೃಪ್ತಿಕರವೆಂದು ಕೇವಲ ೪ (೬%) ಸಂಸ್ಥೆಗಳ ಗ್ರಾಹಕರ ಅತೃಪ್ತಿಯನ್ನು ವ್ಯಕ್ತಪಡಿಸಿವೆ. ಉತ್ತರಿಸಿದ ಸಂಸ್ಥೆಗಳು ೫ (೬%) ಇದೆ. ಗ್ರಾಹಕ ಸ್ವಯಂ ಸಂಸ್ಥೆಗಳ ಬಗ್ಗೆ ಗ್ರಾಹಕರ ಅಭಿಪ್ರಾಯದ ಬಗ್ಗೆ ಈ ಸ್ವಯಂ ಸಂಸ್ಥೆಗಳನ್ನು ಕೇಳಿದಾಗ ಸಹಜವಾಗಿ ಅವುಗಳ ಉತ್ತರ, ತೃಪ್ತಿಕರ ಹಾಗು ಉತ್ತಮ ಎಂದು ಬಂದಿವೆ. ಆದರೆ ಕೆಲವು ಸಂಸ್ಥೆಗಳು ಅತೃಪ್ತಿಕರ ಎಂದು ಉತ್ತರಿಸಿ ಪ್ರಾಮಾಣಿಕತೆ ಮೆರೆದಿವೆ.

**ಕೋಷ್ಟಕ ೬.೨೨**

**ಗ್ರಾಹಕ ಸಂಸ್ಥೆಗಳು ಬೇರೆ ಗ್ರಾಹಕ ಸಂಸ್ಥೆಗಳ ಸಹಾಯ ತೆಗೆದುಕೊಂಡಿದ್ದರ ವಿವರ**

| ಅ.ನಂ | ವಿವರ | ಸಂಸ್ಥೆ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಹೌದು | ೫೭ | ೭೯% |
| ೨ | ಇಲ್ಲ | ೧೧ | ೧೫% |
| ೩ | ಉತ್ತರಿಸದ | ೦೪ | ೬% |
| | **ಒಟ್ಟು** | **೬೮** | **೧೦೦%** |

**ಮೂಲ : ಪ್ರಾಥಮಿಕ ಸಮೀಕ್ಷೆ**

೭೨ ಸಂಸ್ಥೆಗಳಲ್ಲಿ ೬೮ ಸಂಸ್ಥೆಗಳು ಉತ್ತರ ನೀಡಿವೆ. ಮತ್ತು ೪ ಸಂಸ್ಥೆಗಳು ಉತ್ತರಿಸಲು ನಿರಾಕರಿಸಿವೆ. ೬೮ ಸಂಸ್ಥೆಗಳಲ್ಲಿ ೫೭ (೭೯%) ಸಂಸ್ಥೆಗಳು ಬೇರೆ ಗ್ರಾಹಕ ಸಂಸ್ಥೆಗಳು ಸಹಾಯ ಪಡೆಯುತ್ತಿವೆ. ಮತ್ತು ೧೧ (೧೫%) ಗ್ರಾಹಕ ಸಂಸ್ಥೆಗಳು ಯಾವುದೇ ಗ್ರಾಹಕ ಸಂಸ್ಥೆಗಳ ಸಹಾಯ ಪಡೆಯಲು ನಿರಾಕರಿಸಿವೆ. ಉತ್ತರಿಸದ ಸಂಸ್ಥೆಗಳು ೪ (೬%) ಈ ಗ್ರಾಹಕ ಸಂಸ್ಥೆಗಳು ಬೇರೆ ಗ್ರಾಹಕರ ಸಂಸ್ಥೆಗಳ ಜೊತೆ ಸಂಬಂಧ ಇಟ್ಟುಕೊಂಡು ಅವುಗಳ ಸಹಾಯ ತೆಗೆದುಕೊಂಡು ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಿವೆ.

**ಕೋಷ್ಟಕ ೬.೨೩**

**ಗ್ರಾಹಕ ಸಂಸ್ಥೆಗಳಿಗೆ ಬೇರೆ ಸೇವಾ ಸಂಸ್ಥೆಗಳಿಂದ ದೊರೆತೆ ಸಹಾಯ**

| ಅ.ನಂ | ವಿವರ | ಸಂಸ್ಥೆ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ರೋಟರಿ ಕ್ಲಬ್ | ೪೮ | ೬೭% |
| ೨ | ಲಾಯಿನ್ಸ ಕ್ಲಬ್ಲ್ | ೪೭ | ೬೫% |
| ೩ | ಮಹಿಳಾ ಮಂಡಳ | ೩೦ | ೪೨% |

**ಮೂಲ : ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೨೨ ರ ಪ್ರಕಾರ ೭೨ ಸಂಸ್ಥೆಗಳಲ್ಲಿ ೪೮ (೬೭%) ಸಂಸ್ಥೆಗಳು, ರೋಟರಿ ಕ್ಲಬ್‌ನ ಸಹಾಯ ಪಡೆಯುತ್ತಿವೆ. ೪೭ (೬೫%) ಗ್ರಾಹಕ ಸಂಸ್ಥೆಗಳು ಲಾಯನ್ಸ್ ಕ್ಲಬ್‌ನ ಸಹಾಯ ಪಡೆಯುತ್ತಿವೆ. ಹಾಗೂ ೩೦ (೪೨%) ಗ್ರಾಹಕ ಸಂಸ್ಥೆಗಳು ಮಹಿಳಾ ಮಂಡಳಗಳ ಸಹಾಯ ಪಡೆಯುತ್ತಿವೆ. ಹಾಗೆಯೇ ಈ ಸಂಸ್ಥೆಗಳು ರೋಟರಿ ಕ್ಲಬ್, ಲಾಯನ್ಸ ಕ್ಲಬ್ ಹಾಗೂ ಮಹಿಳಾ ಮಂಡಳ ಮುಂತಾದ ಸರಕಾರೇತರ ಸಂಸ್ಥೆಗಳ ಜೊತೆ ಗ್ರಾಹಕರಿಗೆ ಅನ್ವಯಿಸುವ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿವೆ.

**ಕೋಷ್ಟಕ ೬.೨೪**

**ಗ್ರಾಹಕ ಸಂಸ್ಥೆಗಳ ಕುರಿತು ವಿವರ, ೫ ವರ್ಷಗಳಲ್ಲಿ ಕಾರ್ಯಕ್ರಮಗಳ ಹಮ್ಮಿಕೊಂಡುದರ ಪ್ರಕಾರ**

| ಅ.ನಂ | ವರ್ಷ | ಕಾರ್ಯಕ್ರಮಗಳ ಸಂಖ್ಯೆ | ಪ್ರತಿ ಸಂಸ್ಥೆಗೆ ಸರಾಸರಿ |
|---|---|---|---|
| ೧ | ೨೦೦೫ | ೨೬೫೬ | ೩೭.೪ |
| ೨ | ೨೦೦೬ | ೯೪೫ | ೧೩.೩೧ |
| ೩ | ೨೦೦೭ | ೧೨೩೬ | ೧೭.೪೦ |
| ೪ | ೨೦೦೮ | ೩೧೪೭ | ೪೪.೬ |
| ೫ | ೨೦೦೯ | ೪೧೮೬ | ೩೮.೯೨ |

**ಮೂಲ : ಪ್ರಾಥಮಿಕ ಸಮೀಕ್ಷೆ**

ಕೋಷ್ಟಕ ೬.೨೩ ರ ಪ್ರಕಾರ ರಾಜ್ಯದಲ್ಲಿ ೨೦೦೫ ರಲ್ಲಿ ೭೨ ಗ್ರಾಹಕ ಸಂಸ್ಥೆಗಳು ಸೇರಿ ಒಟ್ಟು ೨೬೫೬ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಪ್ರತಿ ಗ್ರಾಹಕರ ಸಂಸ್ಥೆಗೆ ೩೭.೪ ಕಾರ್ಯಕ್ರಮ ಹಮ್ಮಿಕೊಂಡಿವೆ.೨೦೦೬ ರಲ್ಲಿ ೯೪೫ ಕಾರ್ಯಕ್ರಮಗಳು ಪ್ರತಿ ಗ್ರಾಹಕ ಸಂಸ್ಥೆಗೆ ೧೩.೩ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ೨೦೦೭ ರಲ್ಲಿ ೭೨ ಗ್ರಾಹಕ ಸಂಸ್ಥೆಗಳು ೧೨೩೬ ಕಾರ್ಯಕ್ರಮಗಳನ್ನು ಸರಾಸರಿ ೧೭.೪೦ ಪ್ರತಿ ಸಂಸ್ಥೆಯಂತೆ ಹಮ್ಮಿಕೊಂಡಿವೆ. ೨೦೦೮ ರಲ್ಲಿ ೩೧೪೭ ಕಾರ್ಯಕ್ರಮಗಳಾಗಿದ್ದು ಸರಾಸರಿ ೪೪.೬ ಪ್ರತಿ ಗ್ರಾಹಕ ಸಂಸ್ಥೆಗೆ ಕಾರ್ಯಕ್ರಮಗಳಿವೆ. ೨೦೦೯ ರಲ್ಲಿ ೫೮.೯೨ ಸರಾಸರಿ ಕಾರ್ಯಕ್ರಮ ಪ್ರತಿ ಸಂಸ್ಥೆಗೆ ಹಮ್ಮಿಕೊಳ್ಳಾಗಿದೆ. ಈ ಗ್ರಾಹಕ ಸ್ವಯಂ ಸಂಸ್ಥೆಗಳು ಚಟುವಟಿಕೆಯಿಂದ ಕೂಡಿದ್ದು ಪ್ರತಿವರ್ಷ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. ಗ್ರಾಹಕ ಸಂಸ್ಥೆಗಳು ಗ್ರಾಹಕರ ಸ್ನೇಹಿಯಾಗಿ ಕಾರ್ಯ ನಿರ್ವಹಿಸುತ್ತಿವೆ.

ಜನಸಾಂದ್ರತೆ ಹೆಚ್ಚಿರುವ ಪ್ರದೇಶಗಳಲ್ಲಿ ಸಂಸ್ಥೆಗಳು ಹೆಚ್ಚಾಗಿ ಸ್ಥಾಪಿಸಲ್ಪಟ್ಟಿವೆ. ಆರ್ಥಿಕ ಪರಿಸ್ಥಿತಿ ಚೆನ್ನಾಗಿರದಿದ್ದರೂ ಸಂಸ್ಥೆಯ ಕಾರ್ಯಗಳನ್ನು ನಿರ್ವಹಿಸಲು ಗ್ರಾಹಕರು ಉತ್ಸಾಹಿತರಾಗಿದ್ದಾರೆ. ಗ್ರಾಹಕವೇದಿಕೆಗಳಿಗೆ ಎಲ್ಲ ತರಹದ ವ್ಯಾಜ್ಯಗಳನ್ನು ದಾಖಲಿಸಿ ಗ್ರಾಹಕರಿಗೆ ಸಹಾಯ ಮಾಡುತ್ತಿವೆ.

ಸದಸ್ಯರು ಸಂಸ್ಥೆಗೆ ಬಲ ಇದ್ದಂತೆ ಸದಸ್ಯರು ಎಲ್ಲ ಗ್ರಾಹಕ ಸಂಸ್ಥೆಗಳಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದ್ದಾರೆ. ಅವರೆಲ್ಲ ಸುಶಿಕ್ಷಿತರೆ. ಅವರಲ್ಲಿ ಹಲವರು ಗೃಹಿಣಿಯರು ಹಾಗೂ ವಿದ್ಯಾರ್ಥಿಗಳು ಇದ್ದಾರೆ. ಹಲವಾರ ಸಂಸ್ಥೆಗಳು ಅಂದಾಜು ಪತ್ರಿಕೆಯನ್ನು ತಯಾರಿಸಿವೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಚಳುವಳಿಯಲ್ಲಿ ಭಾಗವಹಿಸುತ್ತಿವೆ. ಕಛೇರಿಯ ಕೆಲಸವನ್ನು ನಿರ್ವಹಿಸಲು ಕಟ್ಟಡದ ವ್ಯವಸ್ಥೆ ಮಾಡಿಕೊಂಡಿವೆ. ಸಿಬ್ಬಂದಿಯನ್ನು ಕೂಡ ನೇಮಿಸಿಕೊಂಡಿವೆ.

ಈ ಗ್ರಾಹಕ ಸ್ವಯಂ ಸಂಸ್ಥೆಗಳು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿವೆ. ಸರಕಾರದ ನಿರ್ಲಕ್ಷವನ್ನು ಕೂಡ ಅನುಭವಿಸುತ್ತಿವೆ. ಹಲವಾರು ಸಂಸ್ಥೆಗಳು ಸದಸ್ಯರ ಕೊರತೆ, ಪ್ರತಿನಿಧಿಗಳ ಸ್ಪಂದನೆ ಗ್ರಾಹಕರ ಸ್ಪಂದನೆಯ ಕೊರತೆಯನ್ನು ಅನುಭವಿಸುತ್ತಿವೆ. ಈ ಸಂಸ್ಥೆಗಳು ರಾಷ್ಟ್ರೀಯ ಆಯೋಗ, ರಾಜ್ಯ ಆಯೋಗ ಹಾಗೂ ಜಿಲ್ಲಾವೇದಿಕೆಗಳಿಗೆ ಸ್ಪಂದಿಸಿ ವ್ಯಾಜ್ಯಗಳನ್ನು ಗ್ರಾಹಕರ ಪರವಾಗಿ ದಾಖಲಿಸುತ್ತಿವೆ. ಈ ಸಂಸ್ಥೆಗಳು ಗ್ರಾಹಕ ವೇದಿಕೆಗಳ ಕುರಿತು ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸಿವೆ. ಕೆಲವೇ ಕೆಲವು ಸಂಸ್ಥೆಗಳು ಮಾಸಿಕ ಪತ್ರಿಕೆಗಳು ಮುಂತಾದವುಗಳನ್ನು ಪ್ರಕಟಿಸುತ್ತಿವೆ. ಸಂಸ್ಥೆಗಳು ಗ್ರಾಹಕರ ಜೊತೆಗೆ ಇತರ ಸಂಸ್ಥೆಗಳ ಜೊತೆಗೆ ಸರಕಾರೇತರ ಸಂಸ್ಥೆಗಳ ಜೊತೆಗೆ ಒಳ್ಳೆಯ ಸಂಬಂಧ ಹೊಂದಿ, ಅವುಗಳ ಜೊತೆ ಕಾರ್ಯ ನಿರ್ವಹಿಸುತ್ತಿವೆ.

ಈ ಗ್ರಾಹಕ ಸ್ವಯಂ ಸಂಸ್ಥೆಗಳು ಚಟುವಟಿಕೆಯಿಂದ ಕೂಡಿದ್ದು, ಪ್ರತಿ ವರ್ಷ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿವೆ. ಈ ಸಂಸ್ಥೆಗಳು ಗ್ರಾಹಕರ ಸ್ನೇಹಿಯಾಗಿ ಕಾರ್ಯ ನಿರ್ವಹಿಸುತ್ತಿವೆ.

************

# ಅಧ್ಯಾಯ –೭

## ಬೆಳಗಾವಿ ಜಿಲ್ಲಾ ಮೊಕದ್ದಮೆ ಹೂಡಿದ ಗ್ರಾಹಕರ ವಿಶ್ಲೇಷಣೆ

೭.೧ ಪ್ರಸ್ತಾವನೆ

೭.೨ ಮಾಹಿತಿ ವಿಶ್ಲೇಷಣೆ

## ಅಧ್ಯಾಯ – ೭

# ಮೊಕದ್ದಮೆ ಹೂಡಿದ ಬೆಳಗಾವಿ ಜಿಲ್ಲಾ ಗ್ರಾಹಕರ ವಿಶ್ಲೇಷಣೆ

### ೭.೧ ಪ್ರಸ್ತಾವನೆ :

ಬೆಳಗಾವಿ ಜಿಲ್ಲೆಯು ಕರ್ನಾಟಕ ರಾಜ್ಯದ ವಾಯುವ್ಯ ಭಾಗದಲ್ಲಿದ್ದು ೧೫°–೨೩° ದಿಂದ ೧೬° –೫೮° ಉತ್ತರ ಅಕ್ಷಾಂಶ ಮತ್ತು ೭೪°–೦೫° ದಿಂದ ೭೫° – ೨೮° ಪೂರ್ವ ರೇಖಾಂಶಗಳ ಮಧ್ಯದಲ್ಲಿ ಇರುತ್ತದೆ. ಈ ಜಿಲ್ಲೆಯ ಪೂರ್ವ ದಿಕ್ಕಿನಲ್ಲಿ ವಿಜಾಪೂರ, ಬಾಗಲಕೋಟ ಹಾಗೂ ಧಾರವಾಡ ಜಿಲ್ಲೆಗಳು ಉತ್ತರದಲ್ಲಿ ಮಹಾರಾಷ್ಟ್ರ ರಾಜ್ಯದ ಕೊಲ್ಲಾಪೂರ ಹಾಗೂ ರತ್ನಾಗಿರಿ ಜಿಲ್ಲೆಗಳು ಇರುತ್ತವೆ.

ಜಿಲ್ಲೆಯ ವಿಸ್ತೀರ್ಣ ೧೩೪೧೫ ಚ.ಕಿ.ಮಿ ಇದ್ದು, ರಾಜ್ಯದಲ್ಲಿ ೫ ನೇ ಸ್ಥಾನವನ್ನು ಪಡೆದಿರುತ್ತದೆ. ಜಿಲ್ಲೆಯಲ್ಲಿ ೧೦ ತಾಲೂಕುಗಳು, ೩೫ ಹೋಬಳಿಗಳು, ೧೨೫೫ ಜನವಸತಿ ಗ್ರಾಮಗಳು, ೧೫ ಜನವಸತಿ ಇಲ್ಲದ ಗ್ರಾಮಗಳು, ೨೨ ಪಟ್ಟಣಗಳನ್ನು ಒಳಗೊಂಡಿದೆ. ಬೆಳಗಾವಿ ಜಿಲ್ಲಾ ಕೇಂದ್ರ ಸ್ಥಾನವಾಗಿದ್ದು ಆಡಳಿತ ಅನುಕೂಲಕ್ಕಾಗಿ ೩ ಕಂದಾಯ ಉಪ–ವಿಭಾಗಗಳನ್ನಾಗಿ ವಿಂಗಡಿಸಿದೆ. ಬೆಳಗಾವಿ ಉಪ ವಿಭಾಗದಲ್ಲಿ ಬೆಳಗಾವಿ, ಹುಕ್ಕೇರಿ ಮತ್ತು ಖಾನಾಪೂರ ತಾಲುಕುಗಳು ಬೈಲಹೊಂಗಲ ಉಪ ವಿಭಾಗದಲ್ಲಿ ಬೈಲಹೊಂಗಲ, ಸೌಂದತ್ತಿ, ರಾಮದುರ್ಗ ಮತ್ತು ಗೋಕಾಕ ತಾಲೂಕುಗಳು ಮತ್ತು ಚಿಕ್ಕೋಡಿ ಉಪವಿಭಾಗದಲ್ಲಿ ಚಿಕ್ಕೋಡಿ, ರಾಯಬಾಗ ಮತ್ತು ಅಥಣಿ ತಾಲೂಕುಗಳು ಇವೆ. ಜಿಲ್ಲೆಯಲ್ಲಿ ೧ ಮಹಾನಗರಪಾಲಿಕೆ, ೨ ನಗರ ಸಭೆಗಳು ೭ ಪುರಸಭೆಗಳು, ೬ ಪಟ್ಟಣ ಪಂಚಾಯತಗಳು, ಒಂದು ದಂಡು ಪ್ರದೇಶ ಹಾಗೂ ೧ ಘೋಷಿತ ಪ್ರದೇಶ ಕೆಲಸ ನಿರ್ವಹಿಸುತ್ತವೆ. ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಜಿಲ್ಲಾ ಪಂಚಾಯತ ೧೦ ತಾಲುಕು ಪಂಚಾಯತ ಸಮಿತಿಗಳು ಹಾಗೂ ೪೮೫ ಗ್ರಾಮ ಪಂಚಾಯತಗಳ ಸಹಕಾರದೊಂದಿಗೆ ಕಾರ್ಯಗತಗೊಳಿಸುತ್ತವೆ.

ಭೌಗೋಳಿಕವಾಗಿ ಈ ಜಿಲ್ಲೆಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ.

೧) ಗುಡ್ಡಗಾಡು ವಲಯ ೨) ಉತ್ತರ ಅರೆಮಲೆನಾಡು ೩) ಉತ್ತರ ಶುಷ್ಕ ವಲಯ.

ಗುಡ್ಡಗಾಡು ವಲಯದಲ್ಲಿ ಖಾನಾಪೂರ ತಾಲೂಕು, ಉತ್ತರ ಅರೆಮಲೆನಾಡು ವಲಯದಲ್ಲಿ ಚಿಕ್ಕೋಡಿ, ಹುಕ್ಕೇರಿ, ಬೈಲಹೊಂಗಲ ಮತ್ತು ಬೆಳಗಾವಿ ತಾಲೂಕುಗಳು ಹಾಗೂ ಉತ್ತರ ಶುಷ್ಕವಲಯದಲ್ಲಿ ಅಥಣಿ, ರಾಯಬಾಗ, ಗೋಕಾಕ, ರಾಮದುರ್ಗ ಮತ್ತು ಸವದತ್ತಿ ತಾಲೂಕುಗಳು ಬರುತ್ತವೆ.

ಹೆಚ್ಚಿನ ಪ್ರದೇಶ ಎರೆ ಮಣ್ಣಿನಿಂದ ಕೂಡಿದ್ದು, ಕೆಲವಡೆ ಸಾಧಾರಣ ಕಪ್ಪು ಮಿಶ್ರಿತ ಎರೆ ಭೂಮಿ ಇದೆ. ರಸಸಾರ ಹೆಚ್ಚಾಗಿದ್ದು, ಕರಗುವ ಲವಣಾಂಶಗಳ ಪ್ರಮಾಣವು ರಾಯಬಾಗ ತಾಲೂಕಿನಲ್ಲಿ ತೀವ್ರವಾಗಿದೆ. ರಾಮದುರ್ಗ, ಸವದತ್ತಿಯಲ್ಲಿ ಸಾರಜನಕ ಅಂಶವು ಸಾಧಾರಣವಿದ್ದು ಇತರ ಕಡೆ ಹೆಚ್ಚಾಗಿದೆ. ಪೋಟ್ಯಾಸಿಯಂ ಅಂಶವು ಗೋಕಾಕ ತಾಲೂಕಿನಲ್ಲಿ ಕಡಿಮೆ ಇದ್ದು ಇತರ ಕಡೆ ಹೆಚ್ಚಾಗಿದೆ. ನೀರಾವರಿ ಇರುವ ಪ್ರದೇಶದಲ್ಲಿ ಭೂಮಿ ಸವಕಳಿ ಕಡೆ ತಿರುಗುತ್ತಿದೆ.

ಜಿಲ್ಲೆಯಲ್ಲಿ ಕೃಷ್ಣಾ, ಮಲಪ್ರಭಾ ಮತ್ತು ಘಟಪ್ರಭಾ ನದಿಗಳು, ಮುಖ್ಯ ನದಿಗಳಾಗಿದ್ದು, ಮಾರ್ಕಂಡೆಯ, ಹಿರಣ್ಯಕೇಶಿ, ಮಹದಾಯಿ ವೇದಗಂಗಾ ಮತ್ತು ದೂಧಗಂಗಾ ಉಪನದಿಗಳು ಹರಿಯುತ್ತಿವೆ. ಮಲಪ್ರಭಾ ನದಿಗೆ ಸವದತ್ತಿ ತಾಲೂಕಿನ ನವಿಲುತೀರ್ಥದ ಹತ್ತಿರ ಹಾಗೂ ಘಟಪ್ರಭಾ ನದಿಗೆ ಹುಕ್ಕೇರಿ ತಾಲೂಕಿನ ಹಿಡಕಲ್ ಹತ್ತಿರ ಬೃಹತ್ ಆಣೆಕಟ್ಟುಗಳನ್ನು ಕಟ್ಟಲಾಗಿದೆ. ಇದರಿಂದ ಜಿಲ್ಲೆಯ ೮ ತಾಲೂಕುಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ.

ಜಿಲ್ಲೆಯ ಒಟ್ಟು ಜನಸಂಖ್ಯೆ ೪,೬೭,೫೦,೦೦೦ ಇದ್ದು ಇದು ರಾಜ್ಯದಲ್ಲಿ ಎರಡನೇ ಸ್ಥಾನವನ್ನು ಪಡೆದಿದೆ. ೨,೭೬,೬೧೦೦೦ ಪುರುಷರು ಮತ್ತು ೧,೯೦,೮೯,೦೦೦ ಸ್ತ್ರೀಯರಿದ್ದಾರೆ.

ಜನಸಾಂದ್ರತೆ ಪ್ರತಿ ಚ.ಕಿ.ಮಿ.ಗೆ ೩೧೪ ಇದ್ದು, ಬೆಳಗಾವಿ ತಾಲೂಕಿನಲ್ಲಿ ಹೆಚ್ಚು ಜನಸಾಂದ್ರತೆ, ಅಂದರೆ ಪ್ರತಿ ಚ.ಕಿ.ಮಿಗೆ ೭೮೬ ಇದ್ದರೆ, ಕಡಿಮೆ ಸಾಂದ್ರತೆ ಖಾನಾಪೂರ ತಾಲೂಕಿನಲ್ಲಿ ಪ್ರತಿ ಚ.ಕಿ.ಮಿಗೆ ೧೫೯ ಇರುತ್ತದೆ. ಜನಸಾಂದ್ರತೆಯಲ್ಲಿ ಜಿಲ್ಲೆಯು ರಾಜ್ಯದಲ್ಲಿ ಏಳನೇ ಸ್ಥಾನ ಪಡೆದಿದೆ. ಗ್ರಾಮೀಣ ಕ್ಷೇತ್ರದಲ್ಲಿ ೭೬% ರಷ್ಟು ಜನಸಂಖ್ಯೆ ಕಂಡುಬರುತ್ತದೆ.

ಈ ಜಿಲ್ಲೆಯಲ್ಲಿ ಜೋಳ, ಸಜ್ಜಿ, ಮುಸಕಿನ ಜೋಳ, ಭತ್ತ, ಮತ್ತು ಗೋಧಿ ಮುಖ್ಯ ಆಹಾರ ಬೆಳೆಗಳಾಗಿವೆ. ಕಬ್ಬು, ಹತ್ತಿ ಮತ್ತು ತಂಬಾಕು ಆರ್ಥಿಕ ಬೆಳೆಗಳಾಗಿವೆ. ಜಿಲ್ಲಾ ಕೈಗಾರಿಕಾ ಕೇಂದ್ರದಲ್ಲಿ ಒಟ್ಟು ೨೯೮೮ ಸಣ್ಣ ಕೈಗಾರಿಕೆ ಘಟಕಗಳು ನೋಂದಣಿ ಆಗಿರುತ್ತವೆ.

**೭.೨ ಮಾಹಿತಿ ವಿಶ್ಲೇಷಣೆ** : ಪ್ರಸ್ತುತ ಅಧ್ಯಾಯದಲ್ಲಿ ಬೆಳಗಾವಿ ಜಿಲ್ಲೆಯ ಹತ್ತು ತಾಲೂಕುಗಳಲ್ಲಿ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ಮೊಕದ್ದಮೆ ಹೂಡಿದ ಗ್ರಾಹಕರನ್ನು ಎಂಟು

ತಾಲೂಕುಗಳಿಂದ ಸಂದರ್ಶಿಸಿ, ಮಾಹಿತಿ ಸಂಗ್ರಹಿಸಲಾಗಿದೆ. ಈ ವಿಷಯ ಸಂಗ್ರಹಣೆ ಹಾಗೂ ವಿಶ್ಲೇಷಣೆ ಅನಿವಾರ್ಯ. ಏಕೆಂದರೆ ಈ ಗ್ರಾಹಕರು ಬೆಳಗಾವಿ ಜಿಲ್ಲಾವೇದಿಕೆಯನ್ನು ನೋಡಿ, ಅದರ ಕಾರ್ಯಕ್ಷಮತೆಯನ್ನು ಅರ್ಥಮಾಡಿಕೊಂಡಿರುತ್ತಾರೆ. ಇವರಿಂದ ಪಡೆದ ಮಾಹಿತಿ, ವೇದಿಕೆಯ ನಿಜವಾದ ಕೆಲಸದ ಕುರಿತು ಅರಿಯಲು ಸಹಾಯ ಮಾಡುತ್ತದೆ.

ಈ ಅಧ್ಯಾಯದಲ್ಲಿ ತಮಗಾದ ಅನ್ಯಾಯದ ವಿರುದ್ಧ ಮೊಕದ್ದಮೆಯನ್ನು ದಾಖಲು ಮಾಡಿ ನಂತರ ಗ್ರಾಹಕ ವೇದಿಕೆಯಲ್ಲಿ ನೈಜವಾಗಿ ಅನುಭವಿಸಿದ ವಿಷಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಬೆಳಗಾವಿ ಜಿಲ್ಲೆಯಲ್ಲಿ ೧೦ ತಾಲೂಕುಗಳಿದ್ದು, ೨ ತಾಲೂಕಿನಿಂದ ಮೊಕದ್ದಮೆಗಳು ದಾಖಲಾದ ಮಾಹಿತಿ ಲಭ್ಯವಾಗದ ಕಾರಣದಿಂದ ಉಳಿದ ೮ ತಾಲೂಕಿನ ಗ್ರಾಹಕರನ್ನು ಆಯ್ಕೆ ಮಾಡಿ ಸಂದರ್ಶಿಸಲಾಗಿದೆ.

ಚಿಕ್ಕೋಡಿಯು ಸಂಶೋಧಕರ ವೃತ್ತಿ ಕೇಂದ್ರ ಸ್ಥಾನವಾಗಿದ್ದರಿಂದ ಮತ್ತು ಬೆಳಗಾವಿ, ಜಿಲ್ಲಾ ಗ್ರಾಹಕ ವೇದಿಕೆಯು ಸ್ಥಾನವಾಗಿದ್ದರಿಂದ, ಮೊಕದ್ದಮೆ ಹೂಡಿದ ಗ್ರಾಹಕರನ್ನು ಸಂದರ್ಶನಕ್ಕೆ ಆಯ್ಕೆ ಮಾಡುವಲ್ಲಿ ಗರಿಷ್ಠ ಆದ್ಯತೆ ನೀಡಲಾಗಿದೆ.

**ಕೋಷ್ಟಕ ೭.೧**

**ಬೆಳಗಾವಿ ಜಿಲ್ಲೆಯ ತಾಲೂಕವಾರು ಮೊಕದ್ದಮೆ ಹೂಡಿದ ಗ್ರಾಹಕರ ಸಂಖ್ಯೆ**

| **ಅ.ನಂ** | **ತಾಲೂಕು ವಿವರ** | **ಗ್ರಾಹಕರ ಸಂಖ್ಯೆ** |
|---|---|---|
| ೧ | ಅಥಣಿ | ೦೧ |
| ೨ | ರಾಯಬಾಗ | ೦೧ |
| ೩ | ಚಿಕ್ಕೋಡಿ | ೭೫ |
| ೪ | ಹುಕ್ಕೇರಿ | ೦೩ |
| ೫ | ಗೋಕಾಕ | ೦೩ |
| ೬ | ಬೆಳಗಾವಿ | ೧೩ |
| ೭ | ಸೌದತ್ತಿ | ೦೧ |
| ೮ | ಬೈಲಹೊಂಗಲ | ೦೩ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೧ ರ ಅನುಸಾರ ಚಿಕ್ಕೋಡಿ ತಾಲೂಕಿನಿಂದ ೭೫ ಗ್ರಾಹಕರನ್ನು ಸಂದರ್ಶಿಸಿ ವಿಷಯ ಸಂಗ್ರಹಿಸಲಾಗಿದೆ. ಅಥಣಿ ತಾಲೂಕಿನಿಂದ ಒಬ್ಬ ಗ್ರಾಹಕರನ್ನು ರಾಯಬಾಗ ತಾಲೂಕಿನಿಂದ

ಒಬ್ಬ ಗ್ರಾಹಕರನ್ನು, ಹುಕ್ಕೇರಿ, ಗೋಕಾಕ ಮತ್ತು ಬೈಲಹೊಂಗಲ ತಾಲೂಕುಗಳಿಂದ ತಲಾ ಮೂರು ಗ್ರಾಹಕರನ್ನು ಸೌದತ್ತಿ ತಾಲೂಕಿನಿಂದ ಒಬ್ಬ ಗ್ರಾಹಕರನ್ನು ಹಾಗೂ ಬೆಳಗಾವಿ ತಾಲೂಕಿನಿಂದ ೧೩ ಗ್ರಾಹಕರನ್ನು ಸಂದರ್ಶನ ಮಾಡಿ ವಿಷಯ ಸಂಗ್ರಹಿಸಲಾಗಿದೆ. ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ಮೊಕದ್ದಮೆ ಹೂಡಿದ ಚಿಕ್ಕೋಡಿ ತಾಲೂಕಿನ ಗ್ರಾಹಕರೆ ಹೆಚ್ಚಾಗಿದ್ದಾರೆ. ನಂತರದ ಸ್ಥಾನ ಬೆಳಗಾವಿ ತಾಲೂಕಿಗೆ ಸಲ್ಲುತ್ತದೆ.

**ಕೋಷ್ಟಕ ೭.೨**

**ಮೊಕದ್ದಮೆ ಹೂಡಿದ ಗ್ರಾಹಕರ ಸಂಖ್ಯೆ ಪುರುಷರು ಹಾಗೂ ಮಹಿಳೆಯರ ಅನುಸಾರ**

| ಗ್ರಾಹಕರು | ಗ್ರಾಹಕರ ಸಂಖ್ಯೆ |
|---|---|
| ಪುರುಷರು | ೬೮ |
| ಮಹಿಳೆಯರು | ೩೨ |
| **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಬೆಳಗಾವಿ ಜಿಲ್ಲೆಯಲ್ಲಿ ೧೦೦ ಮೊಕದ್ದಮೆ ಹೂಡಿದ ಗ್ರಾಹಕರದಲ್ಲಿ ೬೮ ಗ್ರಾಹಕರು ಪುರುಷರು ಮತ್ತು ೩೨ ಗ್ರಾಹಕರು ಮಹಿಳೆಯರಿದ್ದಾರೆ.

**ಕೋಷ್ಟಕ ೭.೩**

**ಗ್ರಾಹಕರ ಸಂಖ್ಯೆ ಅವರ ವಯಸ್ಸಿನ ಅನುಸಾರ**

| ಅ.ನಂ | ವಯಸ್ಸಿನ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ೨೦ ವರ್ಷಕ್ಕಿಂತ ಕಡಿಮೆ | ೦೨ |
| ೨ | ೨೦ – ೩೦ | ೧೭ |
| ೩ | ೩೦ – ೪೦ | ೨೯ |
| ೪ | ೪೦ – ೫೦ | ೨೪ |
| ೫ | ೫೦ ಕ್ಕಿಂತ ಮೇಲ್ಪಟ್ಟು | ೨೮ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೩ರ ಅನುಸಾರ ೧೦೦ ಜನ ಗ್ರಾಹಕರಲ್ಲಿ ಕೇವಲ ಇಬ್ಬರು ೨೦ ವರ್ಷಕ್ಕಿಂತ ಕಡಿಮೆ ವಯಸ್ಸಿನವರಿದ್ದಾರೆ ೨೦ ರಿಂದ ೩೦ ವಯಸ್ಸಿನವರು ೧೭ ಗ್ರಾಹಕರು, ೩೦ ರಿಂದ ೪೦

ರೊಳಗಿನ ವಯೋಮಾನದವರು, ೨೯ ಗ್ರಾಹಕರಿದ್ದಾರೆ. ೨೪ ಜನ ಗ್ರಾಹಕರು ೪೦-೫೦ ವಯಸ್ಸಿನವರಿದ್ದರೆ ೫೦ ಕ್ಕಿಂತ ಮೇಲ್ಪಟ್ಟವರು ೨೮ ಗ್ರಾಹಕರಿದ್ದಾರೆ. ಪ್ರೌಡಾವಸ್ಥೆಯಲ್ಲಿರುವ ೨೮ ಗ್ರಾಹಕರಿದ್ದಾರೆ. ಹಾಗೂ ವಯಸ್ಸಾದ ಗ್ರಾಹಕರಿಗೆ ಅನುಭವ ಪಕ್ವತೆಯಾಗಿರುತ್ತದೆ ಆದ್ದರಿಂದ, ಅಂಥಹ ವಯಸ್ಸಿನ ಗ್ರಾಹಕರನ್ನು ಸಂದರ್ಶನಕ್ಕೆ ಆರಿಸಿಕೊಳ್ಳಲಾಗಿದೆ. ಗ್ರಾಹಕರ ವಯಸ್ಸನ್ನು ಪರಿಶೀಲಿಸಿದಾಗ ಪ್ರಬುದ್ಧ ಜನರೇ ಗ್ರಾಹಕ ವೇದಿಕೆಯಲ್ಲಿ ವ್ಯಾಜ್ಯವನ್ನು ದಾಖಲಿಸಿದ್ದಾರೆ. ಅವರಿಂದ ಬರುವ ಪಕ್ವ ಅನುಭವಗಳು ಅಧ್ಯಯನಕ್ಕೆ ಸಹಾಯಕವಾಗುತ್ತದೆ.

**ಕೋಷ್ಟಕ ೭.೪**

**ಮೊಕದ್ದಮೆ ಹೂಡಿದ ಗ್ರಾಹಕರ ಸಂಖ್ಯೆ ಅವರ ಉದ್ಯೋಗದ ಅನುಸಾರ**

| ಅ.ನಂ | ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಒಕ್ಕಲುತನ | ೧೯ |
| ೨ | ವ್ಯಾಪಾರ | ೩೬ |
| ೩ | ಖಾಸಗಿ ಸೇವೆ | ೦೨ |
| ೪ | ಸರಕಾರಿ ಸೇವೆ | ೦೩ |
| ೫ | ಗೃಹಿಣಿ | ೩೨ |
| ೬ | ವೃತ್ತಿ | ೦೬ |
| ೭ | ವಿದ್ಯಾರ್ಥಿ | ೦೨ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೪ ರ ಪ್ರಕಾರ ಮೊಕದ್ದಮೆ ಹೂಡಿದ ೧೦೦ ಗ್ರಾಹಕರದಲ್ಲಿ ೧೯ ಜನ ರೈತರು ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯ ಕುರಿತು ತಮ್ಮ ಅನುಭವ ಹಂಚಿಕೊಂಡರು. ೧೦೦ ಗ್ರಾಹಕರಲ್ಲಿ ೩೬ ಗ್ರಾಹಕರು ವ್ಯಾಪಾರಸ್ಥರಿದ್ದಾರೆ. ಖಾಸಗಿ ಸೇವೆಯಲ್ಲಿರುವ ಇಬ್ಬರು ಗ್ರಾಹಕರು ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ವಾಜ್ಯ ದಾಖಲಿಸಿದ್ದಾರೆ. ಸರಕಾರಿ ಸೇವೆಯಲ್ಲಿರುವ ಮೂರು ಜನ ನ್ಯಾಯಕ್ಕೆ ವೇದಿಕೆಗೆ ಮೊರೆ ಹೋಗಿದ್ದಾರೆ. ೩೨ ಗೃಹಿಣಿಯರು ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಅರ್ಜಿಯನ್ನು ಹಾಕಿದ್ದಾರೆ. ಆರು ಜನರು ವೃತ್ತಿ ನಿರತರಾಗಿದ್ದಾರೆ ಹಾಗೂ ಇಬ್ಬರು ವಿದ್ಯಾರ್ಥಿಗಳಿದ್ದಾರೆ.

ಕೋಷ್ಟಕ ೭.೫

ವ್ಯಾಜ್ಯ ದಾಖಲಿಸಿದ ಗ್ರಾಹಕರ ಶಿಕ್ಷಣ

| ಅ.ನಂ | ಶಿಕ್ಷಣದ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಎಸ್.ಎಸ್.ಎಲ್.ಸಿ | ೨೪ |
| ೨ | ಪಿ.ಯು.ಸಿ | ೧೧ |
| ೩ | ಪದವಿಧರರು | ೫೮ |
| ೪ | ಸ್ನಾತಕೊತ್ತರ ಪದವಿಧರರು | ೦೪ |
| ೫ | ಇತರೆ | ೦೩ |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನ ನೀಡಿದ ೧೦೦ ವ್ಯಾಜ್ಯ ದಾಖಲಾಯಿಸಿದ ಗ್ರಾಹಕರಲ್ಲಿ ೨೪ ಗ್ರಾಹಕರು ಎಸ್.ಎಸ್.ಎಲ್.ಸಿ ವರೆಗೆ ಓದಿದ್ದಾರೆ. ೧೧ ಜನರು ಪಿ.ಯು.ಸಿ ಮುಗಿಸಿದ್ದಾರೆ. ಅರ್ಧಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ೫೮ ಜನರು ಪದವಿ ಹೊಂದಿದ್ದಾರೆ. ಹಾಗೂ ನಾಲ್ಕು ಜನರು ಸ್ನಾತಕೋತ್ತರ ಪದವಿಧರರಿದ್ದಾರೆ. ೩ ಜನರಲ್ಲಿ ಇಬ್ಬರು ವೈದ್ಯರು ಹಾಗೂ ಒಬ್ಬರು ವಕೀಲರಿದ್ದಾರೆ. ಅಧ್ಯಯನಕ್ಕೆ ಆಯ್ದುಕೊಂಡ ಎಲ್ಲ ಗ್ರಾಹಕರು ಅಕ್ಷರಸ್ಥರು ಇದ್ದಾರೆ.

ಕೋಷ್ಟಕ ೭.೬

ಮೊಕದ್ದಮೆ ದಾಖಲಿಸಿದ ಗ್ರಾಹಕ ಕುಟುಂಬದ ಆದಾಯ

| ಅ.ನಂ | ಕುಟುಂಬದ ಆದಾಯ | ಗ್ರಾಹಕರ ಸಂಖ್ಯೆ |
|---|---|---|
| ೧ | ರೂ ೫೦,೦೦೦ ಕ್ಕಿಂತ ಕಡಿಮೆ | ೧೨ |
| ೨ | ೫೦,೦೦೦ – ೧,೦೦,೦೦೦ | ೩೩ |
| ೩ | ೧,೦೦,೦೦೦ – ಕ್ಕಿಂತ ಹೆಚ್ಚು | ೫೫ |
| | **ಒಟ್ಟು** | **೧೦೦** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೬ ರ ಅನುಸಾರ ೧೦೦ ಗ್ರಾಹಕರಲ್ಲಿ ೧೨ ಜನರು ಕುಟುಂಬದ ಆದಾಯ ೫೦,೦೦೦ ಕ್ಕಿಂತ ಕಡಿಮೆ ಇದೆ. ೩೩ ಗ್ರಾಹಕರ ಕುಟುಂಬದ ಆದಾಯ ವರ್ಷಕ್ಕೆ ೫೦,೦೦೦ ರಿಂದ ೧,೦೦,೦೦೦ರ ವರೆಗೆ ಇದೆ. ೫೫ ಗ್ರಾಹಕರು ೧,೦೦,೦೦೦ ಕ್ಕಿಂತ ಹೆಚ್ಚಿನ ಕುಟುಂಬದ ಆದಾಯ ಹೊಂದಿದವರಾಗಿದ್ದಾರೆ. ದಾಖಲಿಸಿದ ಗ್ರಾಹಕರೆಲ್ಲ ಉತ್ತಮವಾದ ಆದಾಯವಿರುವ ಕುಟುಂಬದಿಂದ

ಬಂದವರಿದ್ದಾರೆ. ಅವರಿಗೆ ಗ್ರಾಹಕ ವೇದಿಕೆ ಕೊಡಿಸುವ ಪರಿಹಾರಕ್ಕಿಂತ ಅನ್ಯಾಯದ ವಿರುದ್ಧ ಹೋರಾಡುವುದು ಮುಖ್ಯವಾಗಿದೆ.

**ಕೋಷ್ಟಕ ೭.೭**

**ಮೊಕದ್ದಮೆ ಹೂಡಿದ ಗ್ರಾಹಕರ ಸಂಖ್ಯೆ, ಅವರ ಕುಟುಂಬದ ಸದಸ್ಯರ ಸಂಖ್ಯೆ**

| ಅ.ನಂ | ಸದಸ್ಯರ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ೪ ಕ್ಕಿಂತ ಕಡಿಮೆ | ೦೫ |
| ೨ | ೪ – ೮ | ೫೮ |
| ೩ | ೮ –೧೨ | ೨೮ |
| ೪ | ೧೨ ಕ್ಕಿಂತ ಹೆಚ್ಚು | ೦೯ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಕ್ಕೆ ಆರಿಸಿಕೊಂಡ ೧೦೦ ಗ್ರಾಹಕರಲ್ಲಿ ೫ ಗ್ರಾಹಕರ ಕುಟುಂಬದಲ್ಲಿ ೪ ಕ್ಕಿಂತ ಕಡಿಮೆ ಕುಟುಂಬದ ಸದಸ್ಯರಿದ್ದಾರೆ. ೫೮ ಗ್ರಾಹಕರ ಕುಟುಂಬಗಳಲ್ಲಿ ೪ ರಿಂದ ೮ ಕುಟುಂಬದ ಸದಸ್ಯರಿದ್ದಾರೆ. ೨೮ ಕುಟುಂಬಗಳು ೮ ರಿಂದ ೧೨ ಸದಸ್ಯರನ್ನು ಹೊಂದಿವೆ.೯ ಗ್ರಾಹಕರ ಕುಟುಂಬದಲ್ಲಿ ೧೨ ಕ್ಕಿಂತಲೂ ಹೆಚ್ಚು ಕುಟುಂಬದ ಸದಸ್ಯರಿದ್ದಾರೆ. ಹೆಚ್ಚಿನ ಗ್ರಾಹಕರು ನಾಲ್ಕಕ್ಕಿಂತ ಹೆಚ್ಚಿನ ಹಾಗೂ ೧೨ ಕ್ಕಿಂತ ಕಡಿಮೆ ಕುಟುಂಬದ ಸದಸ್ಯರನ್ನು ಹೊಂದಿದ ಕುಟುಂಬದಿಂದ ಬಂದವರಿದ್ದಾರೆ.

**ಕೋಷ್ಟಕ ೭.೮**

**ಮೊಕದ್ದಮೆ ಹೂಡಿದ ಗ್ರಾಹಕರ ವ್ಯಾಜ್ಯದ ಲಕ್ಷಣ**

| ಅ.ನಂ | ವ್ಯಾಜ್ಯದ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಏಕವ್ಯಕ್ತಿ ಪರ | ೯೫ |
| ೨ | ಸಾಮಾನ್ಯ | ೦೫ |
| ೩ | ಸಂಕೀರ್ಣ | – |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳಲ್ಲಿ, ಸಂದರ್ಶನಕ್ಕೆ ಆಯ್ದುಕೊಂಡ ೧೦೦ ಗ್ರಾಹಕರದಲ್ಲಿ ೯೫ ಗ್ರಾಹಕರು, ವೈಯಕ್ತಿಕ ನ್ಯಾಯಕ್ಕಾಗಿ ಮೊಕದ್ದಮೆ

ಹೂಡಿದ್ದಾರೆ. ಕೇವಲ ೫ ಗ್ರಾಹಕರು ಸಾಮಾನ್ಯ ಅಂದರೆ ಎಲ್ಲರಿಗೂ ಅನ್ವಯಿಸುವ ನ್ಯಾಯಕ್ಕಾಗಿ ವ್ಯಾಜ್ಯ ಹೂಡಿದ್ದಾರೆ.

**ಕೋಷ್ಟಕ ೭.೯**

**ಗ್ರಾಹಕರ ವ್ಯಾಜ್ಯ ದಾಖಲಾದ ವರ್ಷ**

| ಅ.ನಂ | ವರ್ಷ | ಗ್ರಾಹಕರ ಸಂಖ್ಯೆ |
|---|---|---|
| ೧ | ೨೦೦೫ | ೦೧ |
| ೨ | ೨೦೦೬ | ೦೧ |
| ೩ | ೨೦೦೭ | ೨೦ |
| ೪ | ೨೦೦೮ | ೩೬ |
| ೫ | ೨೦೦೯ | ೪೨ |
| | **ಒಟ್ಟು** | **೧೦೦** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೯ ರ ಅನುಸಾರ ಸಂದರ್ಶನಕ್ಕೆ ಆರಿಸಿಕೊಂಡ ೧೦೦ ಗ್ರಾಹಕರಲ್ಲಿ ೨೦೦೫ ಹಾಗೂ ೨೦೦೬ ನೇ ವರ್ಷದಲ್ಲಿ ವ್ಯಾಜ್ಯ ದಾಖಲಿಸಿದ ಗ್ರಾಹಕರು ತಲಾ ಒಬ್ಬಬ್ಬರೆ ಇದ್ದಾರೆ. ೨೦೦೭ ರಲ್ಲಿ ಬೆಳಗಾವಿ ಗ್ರಾಹಕ ವೇದಿಕೆಗೆ ನ್ಯಾಯಕ್ಕೆ ಮೊರೆಹೋದವರು ೨೦ ಜನರಿದ್ದಾರೆ. ೨೦೦೮ ರಲ್ಲಿ ೩೬ ಜನ ಗ್ರಾಹಕರು ವೇದಿಕೆಯಲ್ಲಿ ವ್ಯಾಜ್ಯ ದಾಖಲಿಸಿದ್ದಾರೆ. ೨೦೦೯ ರಲ್ಲಿ ೪೨ ಗ್ರಾಹಕರು ಜಿಲ್ಲಾ ವೇದಿಕೆಗೆ ನ್ಯಾಯಕ್ಕೆ ಅರ್ಜಿ ಹಾಕಿದ್ದಾರೆ. ಸಂದರ್ಶನಕ್ಕೆ ೨೦೦೫ ರಿಂದ ೨೦೦೯ ರ ವರೆಗೆ ವ್ಯಾಜ್ಯ ದಾಖಲಿಸಿದ ಗ್ರಾಹಕರನ್ನು ಆರಿಸಿಕೊಳ್ಳಲಾಗಿದೆ.

**ಕೋಷ್ಟಕ ೭.೧೦**

**ಗ್ರಾಹಕರ ವ್ಯಾಜ್ಯ ದಾಖಲಿಸಿದ ಉದ್ದೇಶ**

| ಅ.ನಂ | ವ್ಯಾಜ್ಯದ ವಿಷಯ | ಗ್ರಾಹಕರ ಸಂಖ್ಯೆ |
|---|---|---|
| ೧ | ಠೇವಣಿ ಹಣದ ವಾಪಸಾತಿಗೆ | ೭೯ |
| ೨ | ಇತರೆ | ೨೧ |
| | **ಒಟ್ಟು** | **೧೦೦** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಹಣಕಾಸು ಸಹಕಾರಿ ಸಂಸ್ಥೆಗಳಲ್ಲಿ ಹಣವನ್ನು ಠೇವಣಿ ಇಟ್ಟು, ಮರುಪಾವತಿ ಸಮಯದಲ್ಲಿ ಹಣ ಮರುಪಾವತಿಯಾಗದೆ ಠೇವು ಇಟ್ಟ ದುಡ್ಡಿಗೆ ಬಡ್ಡಿ ಸಿಗದೆ ತೊಂದರೆಗೆ ಸಿಲುಕಿದ ಗ್ರಾಹಕರು

ಬೆಳಗಾವಿ ಗ್ರಾಹಕ ವೇದಿಕೆಗೆ ಮೊರೆ ಹೋಗಿದ್ದಾರೆ. ಈ ಗ್ರಾಹಕ ವೇದಿಕೆಯಲ್ಲಿ ಈ ತರಹದ ವ್ಯಾಜ್ಯಗಳೇ ದಾಖಲಾಗಿವೆ. ಉಳಿದ ವಿಷಯಕ್ಕೆ ಗ್ರಾಹಕರು ವೇದಿಕೆಯಲ್ಲಿ ಅರ್ಜಿಹಾಕಿದ್ದು ವಿರಳವಾಗಿ ಸಿಗುತ್ತದೆ. ಸಂದರ್ಶನಕ್ಕೆ ಆಯ್ದುಕೊಂಡ ೧೦೦ ಗ್ರಾಹಕರಲ್ಲಿ ೭೯ ಜನರು ಠೇವಿನ ತೊಂದರೆಗೆ ಒಳಗಾಗಿ ಮೊಕದ್ದಮೆ ಹಾಕಿದವರಿದ್ದಾರೆ. ಹಾಗೆಯೆ ೨೧ ಗ್ರಾಹಕರು ಇತರೇ ವಿಷಯಕ್ಕೆ ವ್ಯಾಜ್ಯ ದಾಖಲಿಸಿದ್ದಾರೆ. ಖೇದದ ಸಂಗತಿ ಎಂದರೇ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಈ ಐದು ವರ್ಷಗಳಲ್ಲಿ ದಾಖಲಾದ ವ್ಯಾಜ್ಯಗಳು ಖಾಸಗಿ ಹಣಕಾಸು ಸಂಸ್ಥೆಗಳ ವಿರುದ್ಧ ಠೇವಣಿ ಹಣ ವಾಪಸಾತಿ ಸಲುವಾಗಿ ಇವೆ.

**ಕೋಷ್ಟಕ ೭.೧೧**

**ವ್ಯಾಜ್ಯ ದಾಖಲಿಸಿದ ಗ್ರಾಹಕರ ಪ್ರತಿವಾದಿಯ ವಿವರ**

| ಅ.ನಂ | ಪ್ರತಿವಾದಿಯ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಸಹಕಾರಿ ಹಣಕಾಸು ಸಂಸ್ಥೆ | ೭೯ |
| ೨ | ವಿಮಾ | ೦೧ |
| ೩ | ಟೆಲಿಕಾಂ | ೦೨ |
| ೪ | ಪೋಸ್ಟ್ | ೦೧ |
| ೫ | ಹೆಸ್ಕಾಂ | ೦೨ |
| ೬ | ಮೆಡಿಕಲ್ | ೦೩ |
| ೭ | ವಿದ್ಯಾಸಂಸ್ಥೆ | ೦೨ |
| ೮ | ರಸ್ತೆ ಸಾರಿಗೆ | ೦೨ |
| ೯ | ಇತರೆ | ೦೮ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೧೧ ರ ಪ್ರಕಾರ ೧೦೦ ಗ್ರಾಹಕರಲ್ಲಿ ೭೯ ಗ್ರಾಹಕರು, ಮುದ್ದತು ಠೇವಿನ ಕುರಿತು ಖಾಸಗಿ ಹಣಕಾಸು ಸಂಸ್ಥೆಗಳಿಂದ ಅನ್ಯಾಯಕ್ಕೆ ಒಳಗಾಗಿ ಬೆಳಗಾವಿ ಗ್ರಾಹಕ ವೇದಿಕೆಗೆ ಮೊರೆ ಹೋದ ಪ್ರಕರಣಗಳು ದಾಖಲಾಗಿವೆ. ಒಂದು ವಿಮಾ ಕಂಪನಿಯ ವಿರುದ್ದ, ಒಂದು ಟೆಲೆಕಾಂ ಇಲಾಖೆಯ ವಿರುದ್ದ, ಪೋಸ್ಟಲ್ ಇಲಾಖೆಯ ವಿರುದ್ದ ಒಂದು, ವಿದ್ಯುತ ಇಲಾಖೆಯ ವಿರುದ್ದ ಎರಡು, ಮೆಡಿಕಲ್ ವಿಷಯದ ವಿರುದ್ಧ ಎರಡು ವ್ಯಾಜ್ಯಗಳು ದಾಖಲಾಗಿವೆ. ವಿದ್ಯಾಸಂಸ್ಥೆಗಳ ವಿರುದ್ದ ಎರಡು, ರಸ್ತೆ ಸಾರಿಗೆ ವಿರುದ್ದ ಎರಡು ಹಾಗೂ ಈ ಮೇಲಿನ ಎಲ್ಲ ವಿಷಯ ಬಿಟ್ಟು ಇತರ

ವ್ಯಾಜ್ಯಗಳು ಎಂಟು ದಾಖಲಾಗಿ ಪರಿಹಾರ ಪಡೆದಿವೆ. ಆಯ್ದುಕೊಂಡ ಗ್ರಾಹಕರ ಪ್ರತಿವಾದಿಗಳು ೬ ತರಹದ ಇಲಾಖೆಯಿಂದ ಬಂದವರಾಗಿದ್ದಾರೆ. ಅವರೆಲ್ಲ ವಿಮಾ, ಟೆಲಿಕಾಂ, ಪೋಸ್ಟ್, ಹೆಸ್ಕಾಂ,ಮೇಡಿಕಲ್,ರಸ್ತೆ ಸಾರಿಗೆ ಹಾಗೂ ವಿದ್ಯಾ ಸಂಸ್ಥೆಗಳು ಆಗಿದ್ದಾರೆ.

**ಕೋಷ್ಟಕ ೭.೧೨**

**ಮೊಕದ್ದಮೆ ದಾಖಲಿಸಲು ಸಹಾಯ ಕೋರಿದ ಗ್ರಾಹಕರ ಸಂಖ್ಯೆ**

| ಅ.ನಂ | ಸಹಾಯ ನೀಡಿದವರು | ಗ್ರಾಹಕರ ಸಂಖ್ಯೆ |
|---|---|---|
| ೧ | ವಕೀಲರ ಸಹಾಯ | ೮೭ |
| ೨ | ಸ್ವತಃ ದಾಖಲಾತಿ | ೧೩ |
| ೩ | ಇತರರು | – |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ನಂ. ೭.೧೨ರ ಅನುಸಾರ ಮೊಕದ್ದಮೆ ದಾಖಲಿಸಿದ ೧೦೦ ಗ್ರಾಹಕರಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ೮೭ ಗ್ರಾಹಕರು ವಕೀಲರ ಸಹಾಯ ಪಡೆದುಕೊಂಡಿದ್ದಾರೆ. ಕೇವಲ ೧೩ ಗ್ರಾಹಕರು ಸ್ವತಃ ವ್ಯಾಜ್ಯವನ್ನು ಗ್ರಾಹಕ ವೇದಿಕೆಯಲ್ಲಿ ದಾಖಲಿಸುವ ಧೈರ್ಯಮಾಡಿದ್ದಾರೆ.

**ಕೋಷ್ಟಕ ೭.೧೩**

**ವ್ಯಾಜ್ಯ ದಾಖಲಿಸಿದ ಗ್ರಾಹಕರು ಗ್ರಾಹಕ ವೇದಿಕೆಗೆ ಕಟ್ಟಿದ ಶುಲ್ಕ**

| ಅ.ನಂ | ಶುಲ್ಕದ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಕಲಂ ಪ್ರಕಾರ ಶುಲ್ಕ ಕಟ್ಟಿದ್ದು ಗ್ರಾಹಕ ತಿದ್ದುಪಡಿ ಕಾಯದೆ ೨೦೦೩ | – |
| ೨ | ಕಾಯದೆ ೨೦೦೩ ರ ಕಲಂ ಪ್ರಕಾರಕ್ಕಿಂತ ಹೆಚ್ಚಿನ ಶುಲ್ಕ | ೧೦೦ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಗ್ರಾಹಕರ ಕಾಯದೆ (ತಿದ್ದುಪಡಿ) ೨೦೦೩ ಅನುಸಾರ ವ್ಯಾಜ್ಯ ದಾಖಲಾಯಿಸಲು ಗ್ರಾಹಕ ವೇದಿಕೆಯು, ಗ್ರಾಹಕರಿಗೆ ಕನಿಷ್ಠ ಶುಲ್ಕವನ್ನು ನಿಗದಿಪಡಿಸಿದೆ. ಅದರಂತೆ ಬೆಳಗಾವಿ ಜಿಲ್ಲಾ ವೇದಿಕೆಯಲ್ಲಿ ವ್ಯಾಜ್ಯ ಹಾಕಿದ ಗ್ರಾಹಕರನ್ನು ಈ ಕುರಿತು ವಿಚಾರಿಸಿದಾಗ ಎಲ್ಲ ನೂರು ಗ್ರಾಹಕರು ವೇದಿಕೆ ನಿಗದಿಸಿದ ಶುಲ್ಕವಲ್ಲದೆ ಇತರೆ ಖರ್ಚನ್ನು ಕೂಡ ಕೊಟ್ಟಿರುವುದು ತಿಳಿಯುತ್ತದೆ. ಕೋಷ್ಟಕ

ನಂ. ೭.೧೩ ರ ಪ್ರಕಾರ ಹೆಚ್ಚಿನ ಶುಲ್ಕ ಕಟ್ಟಿದ ಗ್ರಾಹಕರ ಸಂಖ್ಯೆ ನೂರು ಇದೆ. ಕಲಂ ೨೬ ಗ್ರಾಹಕ ಸಂರಕ್ಷಣಾ ಕಾನೂನಿನ ಅನ್ವಯ ಗ್ರಾಹಕ ವೇದಿಕೆಗೆ ವ್ಯಾಜ್ಯದ ಅರ್ಜಿಯನ್ನು ದಾಖಲಿಸಲು ಕನಿಷ್ಠ ಶುಲ್ಕವನ್ನು ಗ್ರಾಹಕರು ಕೊಡಬೇಕಾಗುತ್ತದೆ. ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಗ್ರಾಹಕ ವೇದಿಕೆಯ ಶುಲ್ಕದ ಜೊತೆಗೆ ಇತರ ಖರ್ಚಿಗೂ ಕೂಡ ಗ್ರಾಹಕ ಹಣ ಕೊಟ್ಟಿದ್ದಾರೆ. ಈ ಕುರಿತು ಗ್ರಾಹಕರನ್ನು ವಿಚಾರಿಸಿದಾಗ ಶುಲ್ಕವಲ್ಲದೇ ಗ್ರಾಹಕರ ಪರವಾಗಿ ವಾದಿಸಿದ ವಕೀಲರ ಫೀ ಕೂಡ ಗ್ರಾಹಕರು ಕೊಟ್ಟಿದ್ದು ತಿಳಿಯಿತು.

**ಕೋಷ್ಟಕ ೭.೧೪**

**ಗ್ರಾಹಕರ ವೇದಿಕೆಯ ಕುರಿತು ವ್ಯಾಜ್ಯ ಹೂಡಿದ ಗ್ರಾಹಕರ ಅಭಿಪ್ರಾಯ**

| ಅ.ನಂ | ಗ್ರಾಹಕ ವೇದಿಕೆಯ ಕುರಿತು | ಗ್ರಾಹಕ ಸಂಖ್ಯೆ |
|---|---|---|
| ೧ | ತೃಪ್ತಿಕರ | ೭೯ |
| ೨ | ಅತೃಪ್ತಿಕರ | ೨೧ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಬೆಳಗಾವಿ ಗ್ರಾಹಕ ವೇದಿಕೆಯು, ಗ್ರಾಹಕರ ಜೊತೆಗೆ ನಡೆದುಕೊಳ್ಳುವ ರೀತಿಯ ಕುರಿತು ಸಂದರ್ಶನಕ್ಕೆ ಆಯ್ದ ಗ್ರಾಹಕರನ್ನು ವಿಚಾರಿಸಿದಾಗ ನೂರು ಗ್ರಾಹಕರಲ್ಲಿ ೭೯ ಗ್ರಾಹಕರು ತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ೨೧ ಗ್ರಾಹಕರು ಅತೃಪ್ತಿಯನ್ನು ತೋಡಿಕೊಂಡಿದ್ದಾರೆ.

**ಕೋಷ್ಟಕ ೭.೧೫**

**ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಆಯ್ದುಕೊಂಡ ವ್ಯಾಜ್ಯಗಳ ತೀರ್ಪುಗಳು**

| ಅ.ನಂ | ಇತ್ಯರ್ಥದ ಕುರಿತು ವಿವರ | ವ್ಯಾಜ್ಯಗಳು |
|---|---|---|
| ೧ | ಗ್ರಾಹಕರ ಪರ ಇತ್ಯರ್ಥಗೊಂಡ ವ್ಯಾಜ್ಯಗಳು | ೯೧ |
| ೨ | ಗ್ರಾಹಕರ ವಿರುದ್ಧ ಇತ್ಯರ್ಥಗೊಳ್ಳದ ವ್ಯಾಜ್ಯಗಳು | ೦೯ |
| | **ಒಟ್ಟು** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳಲ್ಲಿ ಸಂದರ್ಶನಕ್ಕೆ ಆಯ್ದುಕೊಂಡ ವ್ಯಾಜ್ಯಗಳಲ್ಲಿ ೯೧ ವ್ಯಾಜ್ಯಗಳು ಗ್ರಾಹಕರ ಪರವಾಗಿ ತೀರ್ಪನ್ನಿತ್ತಿವೆ. ಕೇವಲ ೯ ವ್ಯಾಜ್ಯಗಳಲ್ಲಿ ಗ್ರಾಹಕರು ಸೋಲು ಅನುಭವಿಸಿದ್ದಾರೆ.

**ಕೋಷ್ಟಕ ೭.೧೬**

**ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಇತ್ಯರ್ಥಗೊಂಡ ವ್ಯಾಜ್ಯಗಳ ಕುರಿತು ಗ್ರಾಹಕರ ಅಭಿಪ್ರಾಯ**

| ಅ.ನಂ | ವ್ಯಾಜ್ಯಗಳ ಇತ್ಯರ್ಥದ ಕುರಿತು ಅಭಿಪ್ರಾಯ | ಗ್ರಾಹಕರ ಸಂಖ್ಯೆ |
|---|---|---|
| ೧ | ತೃಪ್ತಿಕರ | ೯೧ |
| ೨ | ಅತೃಪ್ತಿಕರ | ೦೯ |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಆಯ್ದುಕೊಂಡ ನೂರು ಮೊಕದ್ದಮೆ ಹೂಡಿದ ಗ್ರಾಹಕರನ್ನು ವ್ಯಾಜ್ಯಗಳ ಇತ್ಯರ್ಥದ ಕುರಿತು ವಿಚಾರಿಸಿದಾಗ, ನೂರರಲ್ಲಿ ೯೧ ಗ್ರಾಹಕರು ತೃಪ್ತಿಯನ್ನು ವ್ಯಕ್ತಪಡಿಸಿದರು. ಕೇವಲ ೦೯ ಜನರು ಇತ್ಯರ್ಥದ ಕುರಿತು ಅಸಮಾದಾನ ವ್ಯಕ್ತಪಡಿಸಿದರು.

**ಕೋಷ್ಟಕ ೭.೧೭**

**ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ಇತ್ಯರ್ಥಗೊಳ್ಳಲು ತೆಗೆದುಕೊಂಡ ಸಮಯ**

| ಅ.ನಂ | ಸಮಯದ ವಿವರ | ವ್ಯಾಜ್ಯಗಳ ಸಂಖ್ಯೆ |
|---|---|---|
| ೧ | ೩ ತಿಂಗಳುಗಳಲ್ಲಿ | ೮೦ |
| ೨ | ೩ ರಿಂದ ೫ ತಿಂಗಳುಗಳು | ೧೬ |
| ೩ | ೫ ತಿಂಗಳುಗಳಿಗಿಂತ ಹೆಚ್ಚು | ೦೪ |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೭.೧೭ ರ ಪ್ರಕಾರ, ಸಂಶೋಧಕೆಗೆ ಆಯ್ದುಕೊಂಡ ನೂರು ಗ್ರಾಹಕ ವ್ಯಾಜ್ಯಗಳಲ್ಲಿ ೮೦ ವ್ಯಾಜ್ಯಗಳು ೩ ತಿಂಗಳುಗಳಲ್ಲಿ ಇತ್ಯರ್ಥಗೊಂಡಿವೆ. ಹಾಗೆಯೇ ೧೬ ವ್ಯಾಜ್ಯಗಳು ೩ ರಿಂದ ೫ ತಿಂಗಳುಗಳಲ್ಲಿ ಇತ್ಯರ್ಥಗೊಂಡಿವೆ. ಕೇವಲ ನಾಲ್ಕು ಗ್ರಾಹಕ ಮೊಕದ್ದಮೆಗಳು ಹೆಚ್ಚಿನ ಸಮಯ ತೆಗೆದುಕೊಂಡು, ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಇತ್ಯರ್ಥಗೊಂಡಿವೆ.

**ಕೋಷ್ಟಕ ೭.೧೮**

**ಮೊಕದ್ದಮೆ ದಾಖಲಿಸಿದ ಗ್ರಾಹಕರು ಮತ್ತು ಗ್ರಾಹಕರ ಸಂಘ ಸಂಸ್ಥೆಗಳ ಸದಸ್ಯತ್ವ**

| ಅ.ನಂ | ಸದಸ್ಯತ್ವದ ವಿವರ | ಗ್ರಾಹಕರ ಸಂಖ್ಯೆ |
|---|---|---|
| ೧ | ಸದಸ್ಯತ್ವ ಹೊಂದಿದ ಗ್ರಾಹಕ | – |
| ೨ | ಸದಸ್ಯರಾಗದ ಗ್ರಾಹಕ | ೧೦೦ |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ವ್ಯಾಜ್ಯ ದಾಖಲಿಸಿದ ಗ್ರಾಹಕರನ್ನು ಸಂದರ್ಶಿಸಿದಾಗ ಗ್ರಾಹಕ ಸಂಘ ಸಂಸ್ಥೆಗಳ ಸದಸ್ಯತ್ವವನ್ನು ಹೊಂದಿದ ಗ್ರಾಹಕರಾರೂ ಬೆಳಗಾವಿ ಜಿಲ್ಲಾ ಗ್ರಾಹಕ ವೇದಿಕೆಯಲ್ಲಿ ಇಲ್ಲದಿರುವುದು ಆಶ್ಚರ್ಯಕರವಾಗಿದೆ.

**ಕೋಷ್ಟಕ ೭.೧೯**

**ಗ್ರಾಹಕ ವೇದಿಕೆಯ ಸ್ಥಾಪನೆ ಕುರಿತು ಗ್ರಾಹಕರ ಅಭಿಪ್ರಾಯ**

| ಅ.ನಂ | ಗ್ರಾಹಕ ವೇದಿಕೆ ಬೇಕೆ? | ಗ್ರಾಹಕ ಸಂಖ್ಯೆ |
|---|---|---|
| ೧ | ಗ್ರಾಹಕ ವೇದಿಕೆ ಬೇಕು | ೧೦೦ |
| ೨ | ಗ್ರಾಹಕ ವೇದಿಕೆ ಬೇಡ | – |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಗೊಂಡ ಗ್ರಾಹಕರೆಲ್ಲ ನೂರು ಜನರು ಗ್ರಾಹಕ ವೇದಿಕೆಗಳು ಇರಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಕೋಷ್ಟಕ ೭.೨೦**

**ಸರಕಾರ ಹಮ್ಮಿಕೊಳ್ಳುವ ಗ್ರಾಹಕ ಸಂರಕ್ಷಣೆ ಕಾರ್ಯಕ್ರಮಗಳ ಕುರಿತು ಗ್ರಾಹಕರ ಅಭಿಪ್ರಾಯ**

| ಅ.ನಂ | ಗ್ರಾಹಕರ ಅಭಿಪ್ರಾಯ | ಗ್ರಾಹಕರ ಸಂಖ್ಯೆ |
|---|---|---|
| ೧ | ಕಾರ್ಯಕ್ರಮ ಒಪ್ಪದ ಗ್ರಾಹಕರು | ೧೦೦ |
| ೨ | ಕಾರ್ಯಕ್ರಮ ಒಪ್ಪಿದ ಗ್ರಾಹಕ ಒಟ್ಟು | – |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಕ್ಕೆ ಆಯ್ದುಕೊಂಡ ಗ್ರಾಹಕರೆಲ್ಲ ಸರ್ಕಾರ ಹಮ್ಮಿಕೊಳ್ಳುವ ಕಾರ್ಯಕ್ರಮದ ಕುರಿತು ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸಲಿಲ್ಲ.

**ಕೋಷ್ಟಕ ೭.೨೧**

**ಮೊಕದ್ದಮೆ ಹೂಡಿದ ಗ್ರಾಹಕರು ಮತ್ತು ಗ್ರಾಹಕ ಪತ್ರಿಕೆಗಳನ್ನು ಓದುವ ಅಭಿರುಚಿ**

| ಅ.ನಂ | ಓದುವ ಅಭಿರುಚಿ | ಗ್ರಾಹಕರ ಸಂಖ್ಯೆ |
|---|---|---|
| ೧ | ಓದುವ ಅಭಿರುಚಿ ಇಲ್ಲದ ಗ್ರಾಹಕ | ೧೦೦ |
| ೨ | ಓದುವ ಅಭಿರುಚಿ ಇರುವ | – |
| | ಒಟ್ಟು | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಕ್ಕೆ ಆಯ್ದುಕೊಂಡ ಎಲ್ಲ ಗ್ರಾಹಕರೂ ಗ್ರಾಹಕ ಸಂಬಂಧಿ ಪತ್ರಿಕೆಗಳನ್ನು ಓದುವ ಹವ್ಯಾಸವನ್ನು ಇಟ್ಟುಕೊಂಡಿಲ್ಲ.

ಬೆಳಗಾವಿ ಜಿಲ್ಲೆಯಲ್ಲಿ ಹತ್ತು ಜಿಲ್ಲೆಗಳಲ್ಲಿ ಎಂಟು ಜಿಲ್ಲೆಗಳಿಂದ ಮೊಕದ್ದಮೆ ಹೂಡಿದ ಗ್ರಾಹಕರನ್ನು ಆರಿಸಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಈ ಗ್ರಾಹಕರಲ್ಲಿ ಪುರುಷರು ಹಾಗೂ ಸ್ತ್ರೀಯರಿದ್ದು ಎಲ್ಲರೂ ಪ್ರಬುದ್ಧರಾಗಿದ್ದಾರೆ. ಹಾಗೂ ಎಲ್ಲ ಗ್ರಾಹಕರು ಅನುಭವದಿಂದ ಉತ್ತರಿಸಿದ್ದಾರೆ. ಈ ಗ್ರಾಹಕರಲ್ಲಿ ಕೆಲವರು ಗೃಹಿಣಿಯರಿದ್ದಾರೆ, ವೈದ್ಯರಿದ್ದಾರೆ, ವಕೀಲರಿದ್ದಾರೆ. ಎಲ್ಲರ ಕುಟುಂಬದ ಆದಾಯ ಚೆನ್ನಾಗಿದೆ. ಅವರ ಉದ್ದೇಶ ಪರಿಹಾರವಲ್ಲ. ಅನ್ಯಾಯದ ವಿರುದ್ಧ ಹೋರಾಡುವುದು. ವ್ಯಾಜ್ಯ ದಾಖಲಿಸಿದ ಗ್ರಾಹಕರೆಲ್ಲ ಏಕವ್ಯಕ್ತಿ ವ್ಯಾಜ್ಯಗಳನ್ನು ಗ್ರಾಹಕ ವೇದಿಕೆಯಲ್ಲಿ ತೆಗೆದುಕೊಂಡು ಹೋಗಿದ್ದಾರೆ. ಆದರೆ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ದಾಖಲಿಸಿದ ವ್ಯಾಜ್ಯಗಳು. ಖಾಸಗಿ ಹಣಕಾಸು ಸಂಸ್ಥೆಗಳಲ್ಲಿ ಇಟ್ಟ ಠೇವಣಿ ಹಣ ವಾಪಸಾತಿಗೆ ಹಾಕಿದ ವ್ಯಾಜ್ಯಗಳು ಆದ್ದರಿಂದ ಬೆಳಗಾವಿ ಗ್ರಾಹಕ ವೇದಿಕೆಯ ಸ್ಥಾಪನೆಯ ಉದ್ದೇಶ ಸಾಮಾನ್ಯ ಗ್ರಾಹಕರಿಗೆ ಆಗಬೇಕಾಗಿದೆ. ವ್ಯಾಜ್ಯಗಳ ಪ್ರತಿವಾದಿಗಳು ವಿವಿಧ ಇಲಾಖೆಯಿಂದ ಬಂದವರಾಗಿದ್ದಾರೆ. ಕಲಂ ೨೬, ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ಅನ್ವಯ ಗ್ರಾಹಕರು ವ್ಯಾಜ್ಯ ದಾಖಲಿಸಲು ಗ್ರಾಹಕ ವೇದಿಕೆಗೆ ಕನಿಷ್ಠ ಶುಲ್ಕವನ್ನು ಕೊಡಬೇಕಾಗುತ್ತದೆ. ಆದರೆ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಗ್ರಾಹಕರು ಕನಿಷ್ಠ ಶುಲ್ಕಕ್ಕಿಂತ ಹೆಚ್ಚಿನ ಹಣವನ್ನು ವಕೀಲರ ಶುಲ್ಕ, ದಸ್ತಾವೇಜಗಳ ತಯಾರಿಕೆಗೆ ಕೊಡುತ್ತಿದ್ದಾರೆ. ಗ್ರಾಹಕ ವೇದಿಕೆಯ ಬಗ್ಗೆ ಎಲ್ಲ ಗ್ರಾಹಕರಿಗೂ ತುಂಬಾ ತೃಪ್ತಿಯಿದೆ. ಹಾಗೆಯೆ ಕೆಲವೇ ಕೆಲವು ವ್ಯಾಜ್ಯಗಳನ್ನು ಬಿಟ್ಟರೆ ಎಲ್ಲ ವ್ಯಾಜ್ಯಗಳು ಗ್ರಾಹಕರ ಪರವಾಗಿ ಇತ್ಯರ್ಥವಾಗಿವೆ. ಮೊಕದ್ದಮೆ ದಾಖಲಿಸಿದ ಗ್ರಾಹಕರ ಸಂದರ್ಶನದಿಂದ ಕಂಡು ಬರುವುದು ಏನೆಂದರೆ, ಬೆಳಗಾವಿ ಗ್ರಾಹಕ ವೇದಿಕೆ ಗ್ರಾಹಕರ ಪರವಾಗಿದ್ದು, ತೀವ್ರಗತಿಯಲ್ಲಿ ನ್ಯಾಯ ಒದಗಿಸಲು ಸಫಲವಾಗಿದೆ. ಹಾಗೆಯೇ ಎಲ್ಲ ಗ್ರಾಹಕರಿಗೆ ಗ್ರಾಹಕ ವೇದಿಕೆ ಬೇಕು, ಅದು ಇನ್ನೂ ಅಭಿವೃದ್ಧಿ ಹೊಂದಬೇಕು.



# ಅಧ್ಯಾಯ –೮

## ಚಿಕ್ಕೋಡಿ ತಾಲೂಕಿನ ಸಾಮಾನ್ಯ ಗ್ರಾಹಕರ ವಿಶ್ಲೇಷಣೆ

೮.೧ ತಾಲೂಕು ಮಾಹಿತಿ

೮.೨ ಮಾಹಿತಿ ವಿಶ್ಲೇಷಣೆ

## ಅಧ್ಯಾಯ – ೮

# ಚಿಕ್ಕೋಡಿ ತಾಲೂಕಿನ ಸಾಮಾನ್ಯ ಗ್ರಾಹಕರ ವಿಶ್ಲೇಷಣೆ

**೮.೧ ತಾಲೂಕು ಮಾಹಿತಿ :**

೧. ಚಿಕ್ಕೋಡಿ ತಾಲೂಕು ಬೆಳಗಾವಿ ಜಿಲ್ಲೆಯ ವಾಯುವ್ಯ ಭಾಗದಲ್ಲಿದ್ದು, ಈ ತಾಲೂಕಿನ ಉತ್ತರ ದಿಕ್ಕಿನಲ್ಲಿ ಮಹಾರಾಷ್ಟ್ರದ ಕೊಲ್ಲಾಪೂರ, ಸಾಂಗಲಿ, ಪುಣೆ ಮುಂತಾದ ನಗರಗಳಿದ್ದು ಪೂರ್ವ ದಿಕ್ಕಿನಲ್ಲಿ ರಾಯಭಾಗ ಅಥಣಿ ಹಾಗೂ ಹುಕ್ಕೇರಿ ತಾಲೂಕುಗಳಿವೆ.

೨. ತಾಲೂಕಿನ ವೀಸ್ತಿರ್ಣ ೧೨೯೯.೫ ಚ.ಕೀ ಇದ್ದು ಬೆಳಗಾವಿ ಜಿಲ್ಲೇಯಲ್ಲಿಯೇ ೫ನೆಯ ಸ್ಥಾನವನ್ನು ಪಡೆದಿರುತ್ತದೆ. ತಾಲೂಕಿನಲ್ಲಿ ಚಿಕ್ಕೋಡಿ, ನಾಗರಮುನೊಳ್ಳಿ, ನಿಪ್ಪಾಣಿ ಮತ್ತು ಸದಲಗಾ ಹೋಬಳಿಗಳಿವೆ. ಚಿಕ್ಕೋಡಿ ತಾಲೂಕಿನಲ್ಲಿ ೧೩೧ ಜನವಸತಿ ಗ್ರಾಮಗಳಿವೆ.

೩. ಈ ತಾಲೂಕಿನ ೨೦೦ ನ್ಯಾಯ ಬೆಲೆ ಅಂಗಡಿಗಳಿವೆ. ಒಟ್ಟು ಪಡಿತರ ಚೀಟಿದಾರರು ೧,೩೧,೫೫೨ ಇದ್ದು ಇದರಲ್ಲಿ ೧೧೭ ಅನ್ನಪೂರ್ಣ ಪಡಿತರ ಚೀಟಿದಾರರು ೧೩,೫೪೫ ಅಂತ್ಯೋದಯ ಕಾರ್ಡುದಾರರು ೭೨,೧೪೪ ಪಡಿತರ ಚೀಟಿದಾರರು ಹಾಗೂ ೫೩,೭೧೩ ಎ.ಪಿ.ಎಲ್. ಪಡಿತರ ಚೀಟಿ ಹೊಂದಿದವರಾಗಿದ್ದಾರೆ.

೪. ಚಿಕ್ಕೋಡಿ ತಾಲೂಕಿನಲ್ಲಿ ೮ ಪೋಲಿಸ್ ಠಾಣೆಗಳಿದ್ದು ಅದರಲ್ಲಿ ೫ ಸಾಮಾನ್ಯ ಹಾಗೂ ೩ ಔಟ್ ಪೋಸ್ಟಗಳಿವೆ. ತಾಲೂಕಿನ ಜನಸಂಖ್ಯೆ ೬,೨೪,೩೬೧. ೩,೨೦,೦೩೭ ಗಂಡಸರು, ೩,೦೪,೩೨೪ ಹೆಂಗಸರಿದ್ದಾರೆ. ಗ್ರಾಮೀಣ ಜನಸಂಖ್ಯೆ ೫,೦೨,೧೪೪ ಇದ್ದು ೧,೨೨,೨೧೬ ನಗರದ ಜನಸಂಖ್ಯೆ ಇದೆ.

೫. ಚಿಕ್ಕೋಡಿ ತಾಲೂಕಿನ ಅಕ್ಷರಸ್ಥರು ೩,೬೮,೮೦೫ ಇದ್ದು ಅದರಲ್ಲಿ ೧,೪೮,೬೪೬ ಮಹಿಳೆಯರು, ೨,೨೦,೧೫೯ ಪುರುಷರು.

೬. ಚಿಕ್ಕೋಡಿ ತಾಲೂಕಿನಲ್ಲಿ ೬೫ ಗ್ರಾಮ ಪಂಚಾಯತಗಳನ್ನು ಸ್ಥಾಪಿಸಲಾಗಿದೆ. ಸ್ತ್ರೀ ಶಕ್ತಿ ಯೋಜನೆಯ ಅಡಿಯಲ್ಲಿ ಸ್ವಸಹಾಯ ಸಂಘಗಳ ಸಂಖ್ಯೆ ೧೮೩೦ ಇವೆ. ಇಲ್ಲಿ ಮಹಿಳಾ ಸದಸ್ಯರ ಸಂಖ್ಯೆ ೨೩೦೦೬ ಇದೆ.[೧]

**೮.೨ ಮಾಹಿತಿ ವಿಶ್ಲೇಷಣೆ:**

ಚಿಕ್ಕೋಡಿ ತಾಲೂಕಿನಲ್ಲಿ ನಾಲ್ಕು ಹೋಬಳಿಗಳಿದ್ದು, ಎಲ್ಲ ಹೋಬಳಿಗಳ ಸಾಮಾನ್ಯ ಗ್ರಾಹಕರನ್ನು ಪೂರ್ವ ನಿಯೋಜನೆ ಇಲ್ಲದೆ ಆಯ್ಕೆ ಮಾಡಿಕೊಂಡು, ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಚಿಕ್ಕೋಡಿಯು ಸಂಶೋಧಕರ ವೃತ್ತಿ ಕೇಂದ್ರ ಸ್ಥಾನವಾಗಿದ್ದರಿಂದ, ಗ್ರಾಹಕರನ್ನು ಸಂದರ್ಶನಕ್ಕೆ ಆಯ್ಕೆ ಮಾಡುವಲ್ಲಿ ಗರಿಷ್ಠ ಆದ್ಯತೆಯನ್ನು ಚಿಕ್ಕೋಡಿ ಹೋಬಳಿಗೆ ನೀಡಲಾಗಿದೆ.

**ಕೋಷ್ಟಕ ೮.೧**

**ಚಿಕ್ಕೋಡಿ ತಾಲೂಕಿನ ನಾಲ್ಕು ಹೋಬಳಿಗಳ ಗ್ರಾಮಗಳ ಸಂಖ್ಯೆ ವಿವರ**

| ಹೋಬಳಿ | ಗ್ರಾಮಗಳ ಸಂಖ್ಯೆ |
|---|---|
| ಚಿಕ್ಕೋಡಿ ಹೋಬಳಿ | ೨೫ |
| ನಾಗರಮುನ್ನೊಳ್ಳಿ ಹೋಬಳಿ | ೨೬ |
| ನಿಪ್ಪಾಣಿ ಹೋಬಳಿ | ೨೯ |
| ಸದಲಗಾ ಹೋಬಳಿ | ೨೩ |
| **ಒಟ್ಟು** | **೧೦೩** |

**ಮೂಲ : ಚಿಕ್ಕೋಡಿ ತಾಲೂಕಿನ ಗ್ರಾಮ ಪಂಚಾಯತಿ ಕಛೇರಿಯ ಮಾಹಿತಿ**

ಚಿಕ್ಕೋಡಿ ತಾಲೂಕಿನಲ್ಲಿ ಒಟ್ಟು ೧೦೩ ಗ್ರಾಮಗಳಿವೆ. ಈ ಗ್ರಾಮಗಳ ಉಸ್ತುವಾರಿಯನ್ನು ನಾಲ್ಕು ಹೋಬಳಿಗಳಿಗೆ ವಹಿಸಿಕೊಡಲಾಗಿದೆ. ಚಿಕ್ಕೋಡಿ ಹೋಬಳಿಯಲ್ಲಿ ೨೫ ಗ್ರಾಮಗಳಿವೆ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೨೬ ಗ್ರಾಮಗಳಿವೆ. ನಿಪ್ಪಾಣಿ ಹೋಬಳಿ ಕೆಳಗೆ ೨೯ ಗ್ರಾಮಗಳು ಅಭಿವೃದ್ಧಿಯಾಗುತ್ತವೆ. ಸದಲಗಾ ಹೋಬಳಿಯ ಅಡಿಯಲ್ಲಿ ೨೩ ಗ್ರಾಮಗಳು ಸೌಲಭ್ಯವನ್ನು ಪಡೆಯುತ್ತಿವೆ. ಗ್ರಾಮಗಳ ಸಂಖ್ಯೆಯನ್ನು ವಿಶ್ಲೇಷಿಸಿದಾಗ ನಿಪ್ಪಾಣಿ ಹೋಬಳಿಯಲ್ಲಿ ಹೆಚ್ಚಿನ ಹಳ್ಳಿಗಳಿವೆ. ನಾಗರಮುನ್ನೊಳ್ಳಿ ಎರಡನೇ ಸ್ಥಾನದಲ್ಲಿ, ಮೂರನೇ ಸ್ಥಾನದಲ್ಲಿ ಚಿಕ್ಕೋಡಿ ಹೋಬಳಿ ಹಾಗೂ ನಾಲ್ಕನೇ ಸ್ಥಾನದಲ್ಲಿ ಸದಲಗಾ ಹೋಬಳಿ ಇದೆ.

## ಕೋಷ್ಟಕ ೮.೨

## ಚಿಕ್ಕೋಡಿ ತಾಲೂಕಿನ ಹೋಬಳಿಗಳ ಜನಸಂಖ್ಯೆ ವಿವರ ೨೦೦೭

| ಹೋಬಳಿಗಳು | ಜನಸಂಖ್ಯೆ | | ಒಟ್ಟು | ಜನಸಂಖ್ಯೆ ಪ್ರತಿ ಗ್ರಾಮಕ್ಕೆ |
|---|---|---|---|---|
| | ಪುರುಷರು | ಮಹಿಳೆಯರು | | |
| ಚಿಕ್ಕೋಡಿ | ೬೧೪೬೩ | ೫೭೫೭೭ | ೧೧೯೦೪೦ | ೪೭೬೨ |
| ನಾಗರಮುನ್ನೊಳ್ಳಿ | ೮೬೧೧೫ | ೮೧೨೦೨ | ೧೬೭೩೧೭ | ೬೪೩೫ |
| ನಿಪ್ಪಾಣಿ | ೭೬೧೫೩ | ೭೫೧೬೬ | ೧೫೧೩೧೯ | ೫೨೧೮ |
| ಸದಲಗಾ | ೬೭೨೧೨ | ೬೨೭೧೩ | ೧೨೯೯೨೫ | ೫೬೪೯ |
| ಒಟ್ಟು | ೨೯೦೯೪೩ | ೨೭೬೬೫೮ | ೫೬೭೬೦೧ | ೫೫೧೧ |

**ಮೂಲ : ಬೆಳಗಾವಿ ಜಿಲ್ಲಾ ಅಂಕಿ, ಸಂಖ್ಯೆಗಳ ಇಲಾಖೆ**

ಚಿಕ್ಕೋಡಿ ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ ೫,೬೭,೬೦೧ ಇದ್ದು ಅದರಲ್ಲಿ ೨,೯೦,೯೪೩ ಪುರುಷರು ಹಾಗೂ ೨,೭೬,೬೫೮ ಮಹಿಳೆಯರಿದ್ದು ಸರಾಸರಿ ಜನಸಂಖ್ಯೆ ಪ್ರತಿ ಗ್ರಾಮಕ್ಕೆ ೫೫೧೧ ಇದೆ. ಚಿಕ್ಕೋಡಿ ಹೋಬಳಿಯಲ್ಲಿ ೬೧,೪೬೩ ಪುರುಷರು ಹಾಗೂ ೫೭,೫೭೭ ಮಹಿಳೆಯರಿದ್ದು, ಸರಾಸರಿ ಪ್ರತಿ ಗ್ರಾಮಕ್ಕೆ ೪೭೬೨ ಇದೆ. ಚಿಕ್ಕೋಡಿ ತಾಲೂಕಿನ ಸರಾಸರಿ ಜನಸಂಖ್ಯೆಗಿಂತ ಇದು ಕಡಿಮೆ ಇದೆ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೮೬೧೧೫ ಗಂಡಸರು ಹಾಗೂ ೮೧೨೦೨ ಮಹಿಳೆಯರಿದ್ದು ಸರಾಸರಿ ಪ್ರತಿ ಗ್ರಾಮಕ್ಕೆ ೬೪೩೫ ಜನಸಂಖ್ಯೆ ಇದು ಚಿಕ್ಕೋಡಿ ತಾಲೂಕಿನ ಸರಾಸರಿ ಜನಸಂಖ್ಯೆಗಿಂತ ಹೆಚ್ಚಿಗೆ ಇದೆ. ನಿಪ್ಪಾಣಿ ಹೋಬಳಿಯಲ್ಲಿ ೭೬೧೫೩ ಪುರುಷರು ೭೫೧೬೬ ಮಹಿಳೆಯರಿದ್ದು ಸರಾಸರಿ ಪ್ರತಿ ಗ್ರಾಮಕ್ಕೆ ೫೨೧೮ ಜನಸಂಖ್ಯೆ ಇದ್ದು ಒಟ್ಟು ಸರಾಸರಿ ೫೫೧೧ ಜನಸಂಖ್ಯೆಗಿಂತ ಕಡಿಮೆ ಇದೆ. ಸದಲಗಾ ಹೋಬಳಿಯಲ್ಲಿ ೬೭೨೧೨ ಪುರುಷರು ೬೨೭೧೩ ಮಹಿಳೆಯರು ಇದ್ದು ಸರಾಸರಿ ೫೬೪೯ ಜನಸಂಖ್ಯೆ ಪ್ರತಿ ಗ್ರಾಮಕ್ಕೆ ಇದೆ. ಈ ಸರಾಸರಿ ಒಟ್ಟು ಸರಾಸರಿಗಿಂತ ಹೆಚ್ಚಿಗಿದೆ. ಚಿಕ್ಕೋಡಿ ತಾಲೂಕಿನಲ್ಲಿ, ನಾಗರಮುನ್ನೊಳ್ಳಿ ಒಟ್ಟು ಜನಸಂಖ್ಯೆಯಲ್ಲಿ ಹಾಗೂ ಸರಾಸರಿ ಪ್ರತಿ ಹಳ್ಳಿಗೆ ಜನಸಂಖ್ಯೆಯಲ್ಲಿ ಮುಂದಿದೆ. ನಿಪ್ಪಾಣಿ ಎರಡನೇ ಸ್ಥಾನದಲ್ಲಿ, ಸದಲಗಾ ಮೂರನೇ ಸ್ಥಾನದಲ್ಲಿ ಹಾಗೂ ಚಿಕ್ಕೋಡಿ ಕೊನೆಯ ಹಾಗೂ ನಾಲ್ಕನೇ ಸ್ಥಾನದಲ್ಲಿದೆ.

**ಕೋಷ್ಟಕ ೮.೩**

**ಚಿಕ್ಕೋಡಿ ತಾಲೂಕಿನ ಹೋಬಳಿಗಳು ಮತ್ತು ನ್ಯಾಯಬೆಲೆ ಅಂಗಡಿಗಳು**

| ಹೋಬಳಿಗಳು | ನ್ಯಾಯಬೆಲೆ ಅಂಗಡಿಗಳು | ಪ್ರತಿ ಗ್ರಾಮಕ್ಕೆ ನ್ಯಾಯಬೆಲೆ ಅಂಗಡಿಗಳು |
|---|---|---|
| ಚಿಕ್ಕೋಡಿ ಹೋಬಳಿ | ೫೭ | ೨.೨೮ |
| ನಾಗರಮುನ್ನೋಳ್ಳಿ | ೪೯ | ೧.೮೮ |
| ನಿಪ್ಪಾಣಿ ಹೋಬಳಿ | ೫೬ | ೧.೯೩ |
| ಸದಲಗಾ ಹೋಬಳಿ | ೩೮ | ೧.೬೫ |
| **ಒಟ್ಟು** | ೨೦೦ | |

**ಮೂಲ : ಚಿಕ್ಕೋಡಿ ತಾಲೂಕಿನ ತಹಶಿಲ್ದಾರ್ ಕಛೇರಿಯಿಂದ ಪಡೆದ ಮಾಹಿತಿ.**

ಕೋಷ್ಟಕ ನಂ೮.೩ರಲ್ಲಿರುವಂತೆ ಚಿಕ್ಕೋಡಿ ಹೋಬಳಿಯಲ್ಲಿ ೫೭ ನ್ಯಾಯ ಬೆಲೆ ಅಂಗಡಿಗಳಿದ್ದು, ಪ್ರತಿ ಗ್ರಾಮಕ್ಕೆ ಸರಾಸರಿ ೨.೨೮ ಅಂಗಡಿಗಳ ಸೌಲಭ್ಯವಿದೆ. ಹಾಗೆಯೇ ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೪೯ ರಿಯಾಯತಿ ಅಂಗಡಿಗಳಿದ್ದು ಪ್ರತಿ ಗ್ರಾಮಕ್ಕೆ ೧.೮೮ ಸೌಲಭ್ಯವಿದೆ. ನಿಪ್ಪಾಣಿ ಹೋಬಳಿಯಲ್ಲಿ ೫೬ ರಿಯಾಯತಿ ಅಂಗಡಿಗಳಿದ್ದು ಪ್ರತಿ ಗ್ರಾಮಕ್ಕೆ ೧.೯೩ ಅಂಗಡಿಗಳ ಉಪಯೋಗವಿದೆ. ಸದಲಗಾ ಹೋಬಳಿಯಲ್ಲಿ ೩೮ ರಿಯಾಯತಿ ಅಂಗಡಿಗಳಿದ್ದು ಪ್ರತಿ ಗ್ರಾಮಕ್ಕೆ ೧.೬೫ ಅಂಗಡಿಗಳ ಸೌಲಭ್ಯವಿದೆ. ಚಿಕ್ಕೋಡಿ ತಾಲೂಕಿನ ಹೋಬಳಿಗಳಲ್ಲಿರುವ ನ್ಯಾಯಬೆಲೆ ಅಂಡಿಗಳನ್ನು ವಿಂಗಡಿಸಿದಾಗ, ಚಿಕ್ಕೋಡಿ ಹೋಬಳಿ ಮೊದಲನೇ ಸ್ಥಾನದಲ್ಲಿದೆ, ನಿಪ್ಪಾಣಿ ಹೋಬಳಿ ಎರಡನೇ ಸ್ಥಾನದಲ್ಲಿದೆ. ನಾಗರಮುನ್ನೊಳ್ಳಿ ಮೂರನೇ ಸ್ಥಾನದಲ್ಲಿದೆ ಹಾಗೂ ಸದಲಗಾ ಹೋಬಳಿ ಕೊನೆಯ ಸ್ಥಾನದಲ್ಲಿದೆ.

**ಕೋಷ್ಟಕ ೮.೪**

**ಚಿಕ್ಕೋಡಿ ತಾಲೂಕಿನ ಹೋಬಳಿಗಳು ಮತ್ತು ಗ್ರಾಮ ಪಂಚಾಯತಿಗಳು**

| ಹೋಬಳಿಗಳು | ಗ್ರಾಮ ಪಂಚಾಯತಿಗಳು | ಪ್ರತಿ ಗ್ರಾಮ ಪಂಚಾಯಿತಿಗೆ ಗ್ರಾಮಗಳು |
|---|---|---|
| ಚಿಕ್ಕೋಡಿ | ೧೮ | ೧.೩೯ |
| ನಾರಗಮುನ್ನೊಳ್ಳಿ | ೧೭ | ೧.೫೨ |
| ನಿಪ್ಪಾಣಿ | ೦೭ | ೦.೨೪ |
| ಸದಲಗಾ | ೨೩ | ೧ |
| **ಒಟ್ಟು** | ೬೫ | |

**ಮೂಲ : ಚಿಕ್ಕೋಡಿ ತಾಲೂಕಿನ ಗ್ರಾಮ ಪಂಚಾಯತಿ ಕಛೇರಿಯಿಂದ ಪಡೆದ ಮಾಹಿತಿ**

ಕೋಷ್ಟಕ ನಂ ೮.೪ರ ಅನುಸಾರ ಚಿಕ್ಕೋಡಿ ಹೋಬಳಿಯಲ್ಲಿ ೧೮ ಗ್ರಾಮ ಪಂಚಾಯತಿಗಳು ಕಾರ್ಯಭಾರ ಮಾಡಿತ್ತಿದ್ದು, ಪ್ರತಿ ಗ್ರಾಮ ಪಂಚಾಯತಿಗೆ ೧.೩೯ ಗ್ರಾಮಗಳು ಸೌಲಭ್ಯ ಪಡೆಯುತ್ತಿವೆ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೧೭ ಗ್ರಾಮ ಪಂಚಾಯತಿಗಳು ಇದ್ದು ಪ್ರತಿ ಗ್ರಾಮ ಪಂಚಾಯತಿ ಕೆಳಗೆ ೧.೫೨ ಗ್ರಾಮಗಳ ಉಪಯೋಗ ಪಡೆಯುತ್ತಿವೆ. ಹಾಗೆಯೇ ನಿಪ್ಪಾಣಿ ಹೋಬಳಿಯಲ್ಲಿ ೭ ಗ್ರಾಮ ಪಂಚಾಯತಿಗಳಿದ್ದು ಪ್ರತಿ ಗ್ರಾಮ ಪಂಚಾಯತಿಗೆ ನಾಲ್ಕು ಗ್ರಾಮಗಳು ಸದುಪಯೋಗ ಪಡೆಯುತ್ತಿವೆ. ಸದಲಗಾ ಹೋಬಳಿಯಲ್ಲಿ ೨೩ ಗ್ರಾಮಗಳು ಕಾರ್ಯಮಾಡುತ್ತಿದ್ದು, ಪ್ರತಿ ಗ್ರಾಮಕ್ಕೆ ಒಂದು ಗ್ರಾಮ ಪಂಚಯಾತಿ ಇದ್ದು ಗ್ರಾಮೀಣ ಜನರಿಗೆ ನಿಪ್ಪಾಣಿ ಹೋಬಳಿಗೆ ಹೊಲಿಸಿದರೆ ಹೆಚ್ಚಿನ ಸೌಲಭ್ಯ ಸಿಗುತ್ತಿದೆ. ಚಿಕ್ಕೋಡಿ ತಾಲೂಕಿನ ಗ್ರಾಮ ಪಂಚಾಯತಿಗಳನ್ನು ವಿಶ್ಲೇಷಿಸಿದಾಗ ಸದಲಗಾ ಹೋಬಳಿಯಲ್ಲಿ ಹೆಚ್ಚಿನ ಗ್ರಾಮ ಪಂಚಾಯತಿಗಳು ಇದ್ದು, ಅದು ಮೊದಲನೇ ಸ್ಥಾನದಲ್ಲಿದೆ. ಚಿಕ್ಕೋಡಿ ಹೋಬಳಿ ಎರಡನೇ ಸ್ಥಾನದಲ್ಲಿದೆ. ನಾಗರಮುನ್ನೊಳ್ಳಿ ಮೂರನೇ ಸ್ಥಾನ ಹಾಗೂ ನಾಲ್ಕನೇ ಮತ್ತು ಕೊನೆಯ ಸ್ಥಾನದಲ್ಲಿ ನಿಪ್ಪಾಣಿ ಹೋಬಳಿ ಇದೆ.

**ಕೋಷ್ಟಕ ೮.೫**

**ಸಂಶೋಧನೆಗೆ ಆಯ್ದುಕೊಂಡ ಗ್ರಾಮಗಳ ವಿವರ ಹೋಬಳಿವಾರು**

| ಹೋಬಳಿ | ಆಯ್ದುಕೊಂಡ ಗ್ರಾಮಗಳ ಸಂಖ್ಯೆ | ಶೇಕಡಾವಾರು |
|---|---|---|
| ಚಿಕ್ಕೋಡಿ ಹೋಬಳಿ | ೧೪ | ೩೫% |
| ನಾಗರಮುನ್ನೊಳ್ಳಿ | ೧೧ | ೨೭.೫% |
| ನಿಪ್ಪಾಣಿ ಹೋಬಳಿ | ೧೦ | ೨೫% |
| ಸದಲಗಾ ಹೋಬಳಿ | ೫ | ೧೨.೫% |
| ಒಟ್ಟು | ೪೦ | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಆಯ್ದುಕೊಂಡ ೪೦ ಗ್ರಾಮಗಳಲ್ಲಿ ೧೪ ಗ್ರಾಮಗಳು (೩೫%) ಚಿಕ್ಕೋಡಿ ಹೋಬಳಿಯಿಂದ ೨೧೦ ಪ್ರಶ್ನಾವಳಿಗಳನ್ನು ಉಪಯೋಗಿಸಿಕೊಂಡು ಸಾಮಾನ್ಯ ಗ್ರಾಹಕರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ನಂತರ ನಾಗರಮುನ್ನೊಳ್ಳಿ ಹೋಬಳಿಯಿಂದ ೧೧ ಗ್ರಾಮಗಳನ್ನು ಶೇಕಡಾ ೨೭.೫% ರಂತೆ ಆರಿಸಿಕೊಂಡು ೬೫ ಪ್ರಶ್ನಾವಳಿಗಳನ್ನು ಉಪಯೋಗಿಸಿ ಮಾಹಿತಿ ಸಂಗ್ರಹಿಸಲಾಗಿದೆ. ನಿಪ್ಪಾಣಿ ಹೋಬಳಿಯಿಂದ ೧೦ ಗ್ರಾಮಗಳನ್ನು ಆರಿಸಿಕೊಂಡು ೬೦ ಪ್ರಶ್ನಾವಳಿಗಳನ್ನು ಉಪಯೋಗಿಸಿ ಮಾಹಿತಿ ಕಲೆಹಾಕಲಾಯಿತು. ಸದಲಗಾ ಹೋಬಳಿಯಲ್ಲಿಯ ೨೩ ಗ್ರಾಮಗಳಲ್ಲಿ ೫ ಗ್ರಾಮಗಳನ್ನು ಆರಿಸಿಕೊಂಡು ೬೫ ಪ್ರಶ್ನಾವಳಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಯಿತು.

**ಕೋಷ್ಟಕ ೮.೬**

**ಸಂಶೋಧನೆಯ ಪ್ರಶ್ನಾವಳಿಗೆ ಸ್ಪಂದಿಸಿದ ಗ್ರಾಹಕರ ವಿವರ ಲಿಂಗ ಅನುಸಾರ**

| ಹೋಬಳಿ | ಪುರುಷರು | ಶೇಕಡಾವರು | ಮಹಿಳೆಯರು | ಶೇಕಡಾವರು | ಒಟ್ಟು | ಶೇಕಡಾವರು |
|---|---|---|---|---|---|---|
| ಚಿಕ್ಕೋಡಿ | ೧೫೮ | ೭೫% | ೫೨ | ೨೫% | ೨೧೦ | ೧೦೦% |
| ನಾಗರಮುನೊಳ್ಳಿ | ೫೬ | ೮೬% | ೯ | ೧೪% | ೬೫ | ೧೦೦% |
| ನಿಪ್ಪಾಣಿ | ೫೧ | ೮೫% | ೯ | ೧೪% | ೬೦ | ೧೦೦% |
| ಸದಲಗಾ | ೫೨ | ೮೦% | ೧೩ | ೩೦% | ೬೫ | ೧೦೦% |
| **ಒಟ್ಟು** | **೩೧೭** | | **೮೩** | | **೪೦೦** | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಕೋಷ್ಟಕ ೮.೬ ಅನುಸಾರ ಚಿಕ್ಕೋಡಿ ಹೋಬಳಿಯಲ್ಲಿ ೨೧೦ ಸಾಮಾನ್ಯ ಗ್ರಾಹಕರನ್ನು ಸಂದರ್ಶಿಸಿ ವಿಷಯವನ್ನು ಕೋಢಿಕರಿಸಲಾಯಿತು ೧೫೮ (೭೫%) ಜನ ಪರುಷುರು ೫೨ (೨೫%) ಜನ ಮಹಿಳೆಯರಿಂದ ಮಾಹಿತಿ ಸಂಗ್ರಹಿಸಲಾಯಿತು. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೬೫ ಪ್ರಶ್ನಾವಳಿಯಿಂದ ಮಾಹಿತಿ ಸಂಗ್ರಹಿಸಲಾಗಿದೆ. ೫೬ ಪುರುಷರು ಹಾಗೂ ೦೯ (೧೪%) ಮಹಿಳೆಯರು ಸಂಶೋಧನೆಗೆ ಸ್ಪಂದಿಸಿ ವಿಷಯವನ್ನು ನೀಡಿದರು. ನಿಪ್ಪಾಣಿ ಹೋಬಳಿಯ ಅಡಿಯಲ್ಲಿ ಗ್ರಾಮದ ಸಾಮಾನ್ಯ ಗ್ರಾಹಕರಿಂದ ವಿಷಯ ಸಂಗ್ರಹಿಸಲಾಯಿತು ೫೧ (೮೫%) ಪರುಷರು ೯ (೧೫%) ಮಹಿಳೆಯರು ಸ್ಪಂದನೆ ನೀಡಿದರು. ಸದಲಗಾ ಹೋಬಳಿಯ ೫೨ (೮೦%) ಪುರುಷರಿಂದ ೧೩ (೨೦%) ಮಹಿಳೆಯರಿಂದ ಒಟ್ಟು ೬೫ ಸಂದರ್ಶನಗಳನ್ನು ಕೈಗೊಳ್ಳಲಾಯಿತು. ಆಯ್ಕೆಯಾದ ೪೦೦ ಗ್ರಾಹಕರಲ್ಲಿ ೩೧೭ ಪುರುಷರು ಇದ್ದಾರೆ ಹಾಗೂ ೮೩ ಮಹಿಳೆಯರಿದ್ದಾರೆ.

**ಕೋಷ್ಟಕ ೮.೭**

**ಸಾಮಾನ್ಯ ಗ್ರಾಹಕರ ವಿವರ ವಯೋಮಾನದ ಅನುಸಾರ**

| ವಯಸ್ಸು | ಗ್ರಾಹಕರ ಸಂಖ್ಯೆ | ಶೇಕಡಾವರು |
|---|---|---|
| ೨೦ ವರ್ಷಕ್ಕಿಂತ ಕಡಿಮೆ | ೪೧ | ೧೦% |
| ೨೦ – ೩೦ | ೧೦೭ | ೨೭% |
| ೩೦ – ೪೦ | ೯೨ | ೨೩% |
| ೪೦ – ೫೦ | ೧೦೮ | ೨೭% |
| ೫೦ ವರ್ಷ ಮೇಲ್ಪಟ್ಟ | ೫೨ | ೧೩% |
| **ಒಟ್ಟು** | **೪೦೦** | ೧೦೦ |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಕ್ಕೆ ಆಯ್ದುಕೊಂಡ ೪೦೦ ಸಾಮಾನ್ಯ ಗ್ರಾಹಕರಲ್ಲಿ ೪೧ (೧೦%) ಜನರು ೨೦ ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಇದ್ದಾರೆ, ೧೦೭ (೨೭%) ಜನರು ೨೦-೩೦ ವಯೋಮಾನದವರಿದ್ದಾರೆ, ೯೨ (೨೩%) ಜನರು ೩೦-೪೦ ವಯಸ್ಸಿನವರಿದ್ದಾರೆ, ೧೦೮ (೨೭%) ಸಾಮಾನ್ಯ ಗ್ರಾಹಕರು ೪೦-೫೦ ವಯಸ್ಸಿನವರಿದ್ದಾರೆ. ೫೨ (೧೩%) ಜನರು ೫೦ ವರ್ಷಕ್ಕೂ ಮೇಲ್ಪಟ್ಟವರಿದ್ದಾರೆ. ಆಯ್ಕೆ ಮಾಡಿದ ಎಲ್ಲರೂ ಪ್ರಬುದ್ಧರು.

**ಕೋಷ್ಟಕ ೮.೮**

**ಸಾಮಾನ್ಯ ಗ್ರಾಹಕರ ವಿವರ ಹಾಗೂ ಅವರ ಗ್ರಾಮದ ಜನಸಂಖ್ಯೆ**

| **ಜನಸಂಖ್ಯೆ** | **ಸಾಮಾನ್ಯ ಗ್ರಾಹಕರ ಸಂಖ್ಯೆ** | **ಶೇಕಡಾವಾರು** |
|---|---|---|
| ೧೦,೦೦೦ ಕ್ಕಿಂತ ಕಡಿಮೆ | ೧೧೭ | ೨೯% |
| ೧೦,೦೦೦ – ೨೦, ೦೦೦ | ೮೮ | ೨೨% |
| ೨೦,೦೦೦ – ೩೦, ೦೦೦ | ೪೬ | ೧೨% |
| ೩೦,೦೦೦ – ೪೦, ೦೦೦ | ೬೧ | ೧೫% |
| ೪೦,೦೦೦ – ೫೦, ೦೦೦ | ೫೦ | ೧೩% |
| ೫೦, ೦೦೦ ಕ್ಕಿಂತ ಹೆಚ್ಚು | ೩೮ | ೯% |
| **ಒಟ್ಟು** | **೪೦೦** | **೧೦೦** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

೪೦೦ ಸಾಮಾನ್ಯ ಗ್ರಾಹಕರಲ್ಲಿ ೧೧೭ (೨೯%) ಗ್ರಾಹಕರು ೧೦,೦೦೦ ಕ್ಕಿಂತಲೂ ಕಡಿಮೆ ಇರುವ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ಹಾಗೆಯೇ ೮೮ (೨೨%) ಗ್ರಾಹಕರು ೧೦,೦೦೦ ರಿಂದ ೨೦,೦೦೦ ಜನಸಂಖ್ಯೆ ಇರುವ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ೪೬ (೧೨%) ಸಾಮಾನ್ಯ ಗ್ರಾಹಕರು ೨೦,೦೦೦-೩೦,೦೦೦ ಜನಸಂಖ್ಯೆ ಇರುವ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ೬೧ (೧೫%) ಸಾಮಾನ್ಯ ಗ್ರಾಹಕರು ೩೦.೦೦೦-೪೦.೦೦೦ ಜನಸಂಖ್ಯೆ ಹೊಂದಿದ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ೫೦ (೧೩%) ಸಾಮಾನ್ಯ ಗ್ರಾಹಕರು ೪೦,೦೦೦-೫೦,೦೦೦ ಜನಸಂಖ್ಯೆ ಹೊಂದಿದ ಗ್ರಾಮಗಳಲ್ಲಿ ವಾಸವಾಗಿದ್ದರೆ, ೩೮ (೯%) ಸಾಮಾನ್ಯ ಗ್ರಾಹಕರು ೫೦,೦೦೦ ಕ್ಕಿಂತ ಹೆಚ್ಚಿಗೆ ಇರುವ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಗ್ರಾಹಕರು ಜನಸಂಖ್ಯೆ ಕಡಿಮೆ ಇರುವ ಗ್ರಾಮದಿಂದ ಬಂದವರಾಗಿರುವದರಿಂದ ಗ್ರಾಮದ ಗ್ರಾಹಕರಿಗೆ ಗ್ರಾಹಕ ವೇದಿಕೆಯ ವಿಷಯವನ್ನು ಮುಟ್ಟಿಸುವುದು ಸುಲಭವಾಗಿದೆ.

**ಕೋಷ್ಟಕ ೮.೯**

**ಸಾಮಾನ್ಯ ಗ್ರಾಹಕರ ಹಾಗೂ ಅವರ ಶಿಕ್ಷಣದ ವಿವರ**

| ಶಿಕ್ಷಣದ ವಿವರ | ಗ್ರಾಹಕರ ಸಂಖ್ಯೆ | ಶೇಕಡಾವಾರು |
|---|---|---|
| ಎಸ್.ಎಸ್.ಎಲ್.ಸಿ | ೧೨೫ | ೩೧% |
| ಪಿ.ಯು.ಸಿ | ೧೪೬ | ೩೭% |
| ಪದವಿ | ೮೯ | ೨೨% |
| ಸ್ನಾತಕೋತ್ತರ | ೩೪ | ೯% |
| ಇತರೆ | ೬ | ೧% |
| **ಒಟ್ಟು** | **೪೦೦** | **೧೦೦** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂಶೋಧನೆಗಳಿಗೆ ಆರಿಸಿಕೊಂಡ ೪೦೦ ನಮೂನೆಗಳಲ್ಲಿ ೧೨೫ (೩೧%) ಗ್ರಾಹಕರು ಎಸ್.ಎಸ್.ಎಲ್.ಸಿ ವರೆಗೆ ಶಿಕ್ಷಣವನ್ನು ಪೂರೈಸಿದ್ದಾರೆ. ೧೪೬ (೩೭%) ಸಾಮಾನ್ಯ ಗ್ರಾಹಕರು ಪಿ.ಯು.ಸಿ ಮುಗಿಸಿದ್ದಾರೆ. ಪದವಿ ಪಡೆದ ಸಾಮಾನ್ಯ ಗ್ರಾಹಕರು ೮೯ (೨೨%)ಇದ್ದಾರೆ. ಸ್ನಾತಕೋತ್ತರ ಪಡೆದುಕೊಂಡ ಸಾಮಾನ್ಯ ಗ್ರಾಹಕರು ೩೪ (೯%) ಇದ್ದರೆ, ಇತರೆ ಶಿಕ್ಷಣ ಪಡೆದ ಗ್ರಾಹಕರು ಕೇವಲ ಆರು (೧%) ಜನರು ಇದ್ದಾರೆ. ಗ್ರಾಮದ ಗ್ರಾಹಕರನ್ನು ಆಯ್ಕೆ ಮಾಡಿಕೊಳ್ಳುವಾಗ ಎಸ್.ಎಸ್.ಎಲ್.ಸಿ. ಮೇಲ್ಪಟ್ಟು ವಿದ್ಯೆಯನ್ನು ಕಲಿತ ಗ್ರಾಹಕರನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಇದರಿಂದ ವಿಷಯ ಅರಿತ ಗ್ರಾಹಕರು ತಮ್ಮ ಹಳ್ಳಿಯ ಇತರರಿಗೆ ಸಹಾಯ ಮಾಡುತ್ತಾರೆ.

**ಕೋಷ್ಟಕ ೮.೧೦**

**ಸಾಮಾನ್ಯ ಗ್ರಾಹಕರ ವಿವರ ಹಾಗೂ ಅವರ ವ್ಯವಸಾಯ**

| ವ್ಯವಸಾಯದ ವಿವರ | ಗ್ರಾಹಕರ ಸಂಖ್ಯೆ | ಶೇಕಡಾವಾರು |
|---|---|---|
| ಒಕ್ಕಲುತನ | ೨೧೭ | ೫೪% |
| ವ್ಯಾಪಾರ | ೫೪ | ೧೪% |
| ಸರಕಾರಿ ಸೇವೆ | ೩೧ | ೮% |
| ಸರಕಾರೇತರ ಸೇವೆ | ೪೧ | ೧೦% |
| ಗೃಹಿಣಿ | ೩೭ | ೯% |
| ಇತರೆ ವೃತ್ತಿ | ೨೦ | ೫% |
| **ಒಟ್ಟು** | **೪೦೦** | **೧೦೦%** |

**ಮೂಲ : ಸಂದರ್ಶನದಿಂದ ಪಡೆದುಕೊಂಡ ಮಾಹಿತಿ**

೪೦೦ ಸಾಮಾನ್ಯ ಗ್ರಾಹಕರಲ್ಲಿ ೨೧೭ (೫೪%) ಜನರು ರೈತರಾಗಿದ್ದಾರೆ. ೫೪ (೧೪%) ಸಾಮಾನ್ಯ ಗ್ರಾಹಕರು ವ್ಯಾಪಾರ ಮಾಡುತ್ತಿದ್ದಾರೆ. ೩೧ (೮%) ಗ್ರಾಹಕರು ಸರಕಾರಿ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ೪೧ (೧೦%) ಗ್ರಾಹಕರು ಸರಕಾರೇತರ ಸೇವೆಯಲ್ಲಿದ್ದಾರೆ. ೩೭ (೯%) ಜನ ಗೃಹಿಣಿಯರು ಸಂಶೋಧನೆಗೆ ಸ್ಪಂದಿಸಿದ್ದಾರೆ. ೨೦ (೫%) ಸಾಮಾನ್ಯ ಗ್ರಾಹಕರು ಇತರೆ ವೃತ್ತಿಯಲ್ಲಿದ್ದಾರೆ.

**ಕೋಷ್ಟಕ ೮.೧೧**

**ಸಾಮಾನ್ಯ ಗ್ರಾಹಕ ವಿವರ ಕುಟುಂಬದ ಆದಾಯದ ಅನುಸಾರ**

| ಕುಟುಂಬದ ಆದಾಯ | ಗ್ರಾಹಕರ ಸಂಖ್ಯೆ | ಶೇಕಡಾವಾರು |
|---|---|---|
| ೨೫,೦೦೦ ರೂ ಕ್ಕಿಂತ ಕಡಿಮೆ | ೨೨೭ | ೫೭% |
| ೨೫,೦೦೦-೫೦,೦೦೦ | ೪೬ | ೧೨% |
| ೫೦,೦೦೦-೭೫,೦೦೦ | ೬೨ | ೧೬% |
| ೭೫,೦೦೦- ಕ್ಕಿಂತ ಹೆಚ್ಚು | ೬೫ | ೧೫% |
| **ಒಟ್ಟು** | **೪೦೦** | **೧೦೦%** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂಶೋಧನೆಗೆ ಸಹಕರಿಸಿದ ೪೦೦ ಜನರಲ್ಲಿ ೨೨೭ (೫೭%) ಜನರಲ್ಲಿ ವಾರ್ಷಿಕ ಕುಟುಂಬದ ಆದಾಯ ೨೫,೦೦೦ ರೂ ವರೆಗೆ ಇದೆ. ೪೬ (೧೨%) ಸಾಮಾನ್ಯ ಗ್ರಾಹಕರ ಕುಟುಂಬದ ವಾರ್ಷಿಕ ಆದಾಯ ೨೫,೦೦೦ ರಿಂದ ೫೦,೦೦೦ ರೂ ವರೆಗೆ ಇದೆ. ೫೦,೦೦೦ ದಿಂದ ೭೫,೦೦೦ ರೂ ವರೆಗೆ ವಾರ್ಷಿಕ ಆದಾಯವನ್ನು ೬೨ (೧೬%)ಜನರ ಪಡೆಯುತ್ತಿದ್ದಾರೆ. ನಂತರ ೬೫ (೧೫%) ಜನರು ವಾರ್ಷಿಕ ಕುಟುಂಬದ ಆದಾಯ ೭೫,೦೦೦ ರೂ ಕ್ಕಿಂತ ಹೆಚ್ಚಿಗೆ ಇದೆ. ಕಡಿಮೆ ಆದಾಯ ಹೊಂದಿದ ಗ್ರಾಹಕರಿಗೆ ಗ್ರಾಹಕ ವೇದಿಕೆಯ ಮಾಹಿತಿ ಮುಟ್ಟಿದೆಯೆಂದು ಇದರಿಂದ ತಿಳಿಯುತ್ತದೆ.

**ಕೋಷ್ಟಕ ೮.೧೨**

**ಸಾಮಾನ್ಯ ಗ್ರಾಹಕರ ವಿವರ ಕುಟುಂಬದ ಸದಸ್ಯರ ಸಂಖ್ಯೆ ಅನುಸಾರ**

| ಕುಟುಂಬದ ಸದಸ್ಯರು | ಗ್ರಾಹಕರ ಸಂಖ್ಯೆ | ಶೇಕಡಾವಾರು |
|---|---|---|
| ೪ ಕ್ಕಿಂತ ಕಡಿಮೆ | ೧೦೯ | ೨೭% |
| ೪-೮ | ೧೮೧ | ೪೫% |

| | | |
|---|---|---|
| ೮-೧೨ | ೭೪ | ೧೯% |
| ೧೨ ಕ್ಕಿಂತ ಹೆಚ್ಚು | ೩೬ | ೯% |
| **ಒಟ್ಟು** | **೪೦೦** | **೧೦೦%** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂಶೋಧನೆಗೆ ಸ್ಪಂದಿಸಿದ ಸಾಮಾನ್ಯ ಗ್ರಾಹಕರ ಕುಟುಂಬದ ಸದಸ್ಯರ ವಿಶ್ಲೇಷಣೆ ಮಾಡಿದಾಗ, ೪೦೦ ಗ್ರಾಹಕರಲ್ಲಿ ೧೦೯ (೨೭%) ಗ್ರಾಹಕರ ಕುಟುಂಬದಲ್ಲಿ ೪ ಕ್ಕಿಂತ ಕಡಿಮೆ ಕುಟುಂಬದ ಸದಸ್ಯರನ್ನು ಹೊಂದಿದ್ದಾರೆ. ೧೮೧ (೪೫%) ಗ್ರಾಹಕರ ಕುಟುಂಬಗಳು ೪ ರಿಂದ ೮ ಸದಸ್ಯರನ್ನು ಹೊಂದಿವೆ. ೭೪ (೧೯%) ಗ್ರಾಹಕರ ಕುಟುಂಬಗಳಲ್ಲಿ ೮ ರಿಂದ ೧೨ ಸದಸ್ಯರಿದ್ದಾರೆ. ೩೬ (೯%) ಕುಟುಂಬಗಳಲ್ಲಿ ೧೨ ಕ್ಕಿಂತ ಹೆಚ್ಚಿನ ಸದಸ್ಯರು ಇರುವುದು ಕಂಡು ಬರುತ್ತಿದೆ.

**ಕೋಷ್ಟಕ ೮.೧೩**

**ವ್ಯಾಪಾರಿಗಳ ಪ್ರಾಮಾಣಿಕತೆಯ ಕುರಿತು ಗ್ರಾಹಕರ ಅನುಭವದ ವಿವರ**

| ವಿವರ | ಗ್ರಾಹಕರ ಸಂಖ್ಯೆ | ಶೇಕಡಾವಾರು |
|---|---|---|
| ಪ್ರಾಮಾಣಕತೆ ಇದೆ | ೧೯೪ | ೪೯% |
| ಅಪ್ರಮಾಣಿಕತೆ ಇದೆ | ೨೦೬ | ೫೧% |
| **ಒಟ್ಟು** | **೪೦೦** | **೧೦೦%** |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಚಿಕ್ಕೋಡಿ ತಾಲೂಕಿನ ನಾಲ್ಕು ಹೋಬಳಿಗಳಲ್ಲಿಯ ಸಾಮಾನ್ಯ ಗ್ರಾಹಕರನ್ನು ವ್ಯಾಪಾರಗಳ ಪ್ರಾಮಾಣಿಕತೆಯ ಕುರಿತು ಪ್ರಶ್ನೆಗಳನ್ನು ಕೇಳಿದಾಗ ಈ ಕೆಳಗಿನಂತೆ ಅನುಭವಕ್ಕೆ ಬಂತು. ೪೦೦ ಗ್ರಾಹಕರಲ್ಲಿ ೧೯೪ (೪೯%) ಗ್ರಾಹಕರು ವ್ಯಾಪಾರಗಳ ಪ್ರಾಮಾಣಿಕ ಗುಣಲಕ್ಷಣಕ್ಕೆ ವಿಶ್ವಾಸ ತೋರಿಸಿದ್ದಾರೆ. ಹಾಗೆಯೇ ೨೦೬ (೫೧%) ಸಾಮಾನ್ಯ ಗ್ರಾಹಕರು ವ್ಯಾಪಾರಿಗಳ ಅಪ್ರಾಮಾಣಿಕತೆಯ ಸ್ಪಂದನೆಯನ್ನು ಕೊಟ್ಟರು.

**ಕೋಷ್ಟಕ ೮.೧೪**

**ಸಾಮಾನ್ಯ ಗ್ರಾಹಕರ ಸಂಖ್ಯೆ ಹಾಗೂ ಗ್ರಾಹಕ ಸಂರಕ್ಷಣಾ ಕಾಯ್ದೆಯ ಅರಿವು**

| ಚಿಕ್ಕೋಡಿ | ಗ್ರಾಹಕ ಕಾಯ್ದೆಯ ತಿಳವಳಿಕೆ | | | | | |
|---|---|---|---|---|---|---|
| | ಇದೆ | ಶೇಕಡಾವಾರು | ಇಲ್ಲ | ಶೇಕಡಾವಾರು | ಒಟ್ಟು | ಶೇಕಡಾವಾರು |
| ಚಿಕ್ಕೋಡಿ ಹೋಬಳಿ | ೧೬೦ | ೭೬% | ೫೦ | ೨೪% | ೨೧೦ | ೧೦೦% |
| ನಾಗರಮುನ್ನೊಳ್ಳಿ ಹೋಬಳಿ | ೩೯ | ೬೦% | ೨೬ | ೪೦% | ೬೫ | ೧೦೦% |

| | | | | | | |
|---|---|---|---|---|---|---|
| ನಿಪ್ಪಾಣಿ ಹೋಬಳಿ | ೫೪ | ೯೦% | ೬ | ೧೦% | ೬೦ | ೧೦೦% |
| ಸದಲಗಾ ಹೋಬಳಿ | ೫೩ | ೮೨% | ೧೨ | ೧೮% | ೬೫% | ೧೦೦% |
| ಒಟ್ಟು | ೩೦೬ | | ೯೪ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ




ಕೋಷ್ಟಕ ೮.೧೪ ರ ಪ್ರಕಾರ ಹಾಗೂ ರೇಖಾ ಚಿತ್ರ ೮.೧ ರ ಅನುಸಾರ ಗ್ರಾಹಕ ಸಂರಕ್ಷಣಾ ಕಾನೂನು ೧೯೮೬ ಹಾಗೂ ತಿದ್ದುಪಡಿಯ ಕುರಿತು ಅರಿವು ಹೊಂದಿದ ಗ್ರಾಹಕ ಚಿಕ್ಕೋಡಿ ಹೋಬಳಿಯಲ್ಲಿ ೭೬% ನಾಗರಮುನ್ನೋಳ್ಳಿಯ ಹೋಬಳಿಯಲ್ಲಿ ೬೦% ನಿಪ್ಪಾಣಿ ಹೋಬಳಿಯಲ್ಲಿ ೨೦% ಸದಲಗಾ ಹೋಬಳಿಯಲ್ಲಿ ೮೨% ಇದ್ದಾರೆ. ಹಾಗೆಯೇ ಗ್ರಾಹಕ ಸಂರಕ್ಷಣಾ ಕಾನೂನಿನ ಅರಿವು ಇರುವ ಗ್ರಾಹಕರು ಚಿಕ್ಕೊಡಿ ಹೋಬಳಿಯಲ್ಲಿ ೨೪% ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೪೦% ನಿಪ್ಪಾಣಿ ಹೋಬಳಿಯಲ್ಲಿ ಕೇವಲ ೧೦% ಹಾಗೂ ಸದಲಗಾ ಹೋಬಳಿಯಲ್ಲಿ ೧೮% ಇದ್ದಾರೆ.

### ಕೋಷ್ಟಕ ೮.೧೫

### ಸಾಮಾನ್ಯ ಗ್ರಾಹಕರ ಸಂಖ್ಯೆ ಮತ್ತು ಬೆಳಗಾವಿ ಗ್ರಾಹಕ ವೇದಿಕೆಯ ಕುರಿತು ಅರಿವು

| ಹೋಬಳಿಯ ವಿವರ | ಗ್ರಾಹಕ ವೇದಿಕೆಯ ತಿಳುವಳಿಕೆ | | | | | |
|---|---|---|---|---|---|---|
| | ಇದೆ | ಶೇಕಡಾವಾರು | ಇಲ್ಲ | ಶೇಕಡಾವಾರು | ಒಟ್ಟು | ಶೇಕಡಾವಾರು |
| ಚಿಕ್ಕೋಡಿ ಹೋಬಳಿ | ೧೫೦ | ೭೧% | ೬೦ | ೨೯% | ೨೧೦ | ೧೦೦% |
| ನಾಗರಮುನ್ನೊಳ್ಳಿ ಹೋಬಳಿ | ೩೯ | ೬೦% | ೨೬ | ೪೦% | ೬೫ | ೧೦೦% |

| | | | | | | |
|---|---|---|---|---|---|---|
| ನಿಪ್ಪಾಣಿ ಹೋಬಳಿ | ೪೨ | ೭೦% | ೧೮ | ೩೦% | ೬೦ | ೧೦೦% |
| ಸದಲಗಾ ಹೋಬಳಿ | ೩೮ | ೫೮% | ೨೭ | ೪೨% | ೬೫ | ೧೦೦% |
| **ಒಟ್ಟು** | **೨೬೯** | | **೩೧** | | **೪೦೦** | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂಶೋಧನೆಗೆ ಸ್ಪಂದಿಸಿ ಸಾಮಾನ್ಯ ಗ್ರಾಹಕರು ಗ್ರಾಹಕ ವೇದಿಕೆಯ ಕುರಿತು ತೃಪ್ತಿಕರವಾದ ಉತ್ತರ ಕೊಟ್ಟರು. ಚಿಕ್ಕೋಡಿ ಹೋಬಳಿಯಲ್ಲಿ ೭೧% ಸಾಮಾನ್ಯ ಗ್ರಾಹಕರು ತಮಗೆ ಗ್ರಾಹಕ ವೇದಿಕೆಯ ಕುರಿತು ಗೊತ್ತಿರುವುದನ್ನು ತಿಳಿಸಿದ್ದಾರೆ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೬೦% ಸಾಮಾನ್ಯ ಗ್ರಾಹಕರಿಗೆ ಗ್ರಾಹಕ ವೇದಿಕೆಯ ಅರಿವಿದೆ. ನಿಪ್ಪಾಣಿ ಹೋಬಳಿಯಲ್ಲಿ ೭೦%, ಸದಲಗಾ ಹೋಬಳಿಯಲ್ಲಿ ೫೮% ಗ್ರಾಹಕರಿಗೆ ಗ್ರಾಹಕ ವೇದಿಕೆಯ ಕಾರ್ಯದ ಕುರಿತು ತಿಳುವಳಿಕೆ ಇದೆ. ಚಿಕ್ಕೋಡಿ ಹೋಬಳಿಯಲ್ಲಿ ೨೯% ನಾಗರಮನ್ನೊಳ್ಳಿಯಲ್ಲಿ ೪೦% ನಿಪ್ಪಾಣಿ ಹೋಬಳಿಯಲ್ಲಿ ೩೦% ಗ್ರಾಹಕ ಸದಲಗಾ ಹೋಬಳಿಯಲ್ಲಿ ೪೨% ಗ್ರಾಹಕರಿಗೆ ಗ್ರಾಹಕ ವೇದಿಕೆ, ಕಾರ್ಯ ವೈಖರಿ, ಸ್ಥಳ, ಸ್ಥಾನ-ಮಾನಗಳ ಕುರಿತು ಗೊತ್ತಿಲ್ಲ. ಸಾಮಾನ್ಯ ಗ್ರಾಹಕರನ್ನು ಬೆಳಗಾವಿ ಗ್ರಾಹಕ ವೇದಿಕೆಯ ಕುರಿತು ಪ್ರಶ್ನೆ ಕೇಳಿದಾಗ ೬೫% ಗ್ರಾಹಕರಿಗೆ ಗ್ರಾಹಕ ವೇದಿಕೆಯ ಅರ್ಥ ಅದರ ಕಾರ್ಯ ಅದು ಇರುವ ಸ್ಥಳ ಎಲ್ಲ ಗೊತ್ತಿದೆ.

**ಕೋಷ್ಟಕ ೮.೧೬**

**ಸಾಮಾನ್ಯ ಗ್ರಾಹಕರ ಸಂಖ್ಯೆ ಹಾಗೂ ಗ್ರಾಹಕ ಸಂಸ್ಥೆಗಳ ಅರಿವು**

| **ಹೋಬಳಿಯ ವಿವರ** | **ಗ್ರಾಹಕ ಸಂಸ್ಥೆಗಳ ತಿಳುವಳಿಕೆ** | | | | | |
|---|---|---|---|---|---|---|
| | **ಇದೆ** | **ಶೇಕಡಾವಾರು** | **ಇಲ್ಲ** | **ಶೇಕಡಾವಾರು** | **ಒಟ್ಟು** | **ಶೇಕಡಾವಾರು** |
| ಚಿಕ್ಕೋಡಿ | ೧೫೦ | ೭೧% | ೬೦ | ೨೯% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೪೩ | ೬೬% | ೨೨ | ೩೪% | ೬೫ | ೧೦೦% |
| ನಿಪ್ಪಾಣಿ | ೩೬ | ೬೦% | ೨೪ | ೪೦% | ೬೦ | ೧೦೦% |
| ಸದಲಗಾ | ೩೫ | ೫೪% | ೩೦ | ೪೬% | ೬೫ | ೧೦೦% |
| **ಒಟ್ಟು** | **೨೬೪** | | **೧೩೬** | | **೪೦೦** | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಸಂದರ್ಶನಕ್ಕೆ ಆರಿಸಿಕೊಂಡ ೪೦೦ ಸಾಮಾನ್ಯ ಗ್ರಾಹಕರಿಗೆ ಗ್ರಾಹಕ ಸ್ವಯಂ ಸಂಘ ಸಂಸ್ಥೆಗಳ ಕುರಿತು ಮಾಹಿತಿ ಇದೆ. ಗ್ರಾಹಕರ ಸಂದರ್ಶನದ ಅವಧಿಯಲ್ಲಿ ಸಂಗ್ರಹಿಸಲಾದ ವಿಷಯ ಅನುಸಾರ ಸಂಘ ಸಂಸ್ಥೆಗಳೆಂದರೇನು? ಅವುಗಳ ಕಾರ್ಯವೇನು? ಕರ್ನಾಟಕದಲ್ಲಿ ಎಷ್ಟು? ಹಾಗೂ ಎಲ್ಲೆಲ್ಲಿ ಸಂಸ್ಥೆಗಳವೆ ಎನ್ನುವುದು ಗ್ರಾಹಕನಿಗೆ ಗೊತ್ತಿದೆ. ಚಿಕ್ಕೋಡಿ ಹೋಬಳಿಯಲ್ಲಿ ೨೧೦

ಗ್ರಾಹಕರಲ್ಲಿ ೭೧% ಗ್ರಾಹಕರಿಗೆ ಸಂಸ್ಥೆಗಳ ಬಗ್ಗೆ ಗೊತ್ತಿದೆ. ನಾಗರಮುನ್ನೊಳ್ಳಿಯ ಹೋಬಳಿಯಲ್ಲಿ ೬೬% ಗ್ರಾಹಕರಿಗೆ, ನಿಪ್ಪಾಣಿ ಹೋಬಳಿಯಲ್ಲಿ ೬೦% ಗ್ರಾಹಕರಿಗೆ, ಸದಲಗಾ ಹೋಬಳಿಯಲ್ಲಿ ೫೪% ಗ್ರಾಹಕರಿಗೆ ಸಂಸ್ಥೆಗಳ ಪರಿಚಯವಿದೆ. ಚಿಕ್ಕೋಡಿ ಹೋಬಳಿಯಲ್ಲಿ ೨೯%, ನಾಗರಮುನ್ನೋಳ್ಳಿಯಲ್ಲಿ ೩೪%, ನಿಪ್ಪಾಣಿ ಹೋಬಳಿಯಲ್ಲಿ ४೦% ಹಾಗೂ ಸದಲಗಾ ಹೋಬಳಿಯಲ್ಲಿ ४೬% ದಷ್ಟು ಸಾಮಾನ್ಯ ಗ್ರಾಹಕರಿಗೆ ಗ್ರಾಹಕ ಸಂಘ ಸಂಸ್ಥೆಗಳ ಕುರಿತು ತಿಳುವಳಿಕೆ ಇಲ್ಲ.

**ಕೋಷ್ಟಕ ೮.೧೭**

**ಸರ್ಕಾರದ ಕಾರ್ಯಕ್ರಮಗಳ ಬಗ್ಗೆ ಗ್ರಾಹಕರ ಅಭಿಪ್ರಾಯ**

| ಹೋಬಳಿಯ ವಿವರ | ಸರ್ಕಾರದ ಕಾರ್ಯಕ್ರಮದ ಕುರಿತು ಗ್ರಾಹಕರ ಅಭಿಪ್ರಾಯ | | | | | |
|---|---|---|---|---|---|---|
| | ಕಾರ್ಯ ನಿರ್ವಹಿಸುತ್ತಿವೆ | ಶೇಕಡಾ ವಾರು | ಕಾರ್ಯ ನಿರ್ವಹಿಸುತ್ತಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
| ಚಿಕ್ಕೋಡಿ | ೭೨ | ೩೪% | ೧೩೮ | ೬೬% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೩೭ | ೫೬% | ೨೮ | ४४% | ೬೫ | ೧೦೦% |
| ನಿಪ್ಪಾಣಿ | ೩೮ | ೬೩% | ೨೨ | ೩೭% | ೬೦ | ೧೦೦% |
| ಸದಲಗಾ | ೨೦ | ೩೧% | ४೫ | ೬೯% | ೬೫ | ೧೦೦% |
| ಒಟ್ಟು | ೧೬೭ | | ೨೩೩ | | ४೦೦ | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಚಿಕ್ಕೋಡಿ ಹೋಬಳಿಯಲ್ಲಿ ಸಂದರ್ಶಿಸಿದ ೨೧೦ ಸಾಮಾನ್ಯ ಗ್ರಾಹಕರಲ್ಲಿ ೩४% ಗ್ರಾಹಕರು ಸರ್ಕಾರವು ಗ್ರಾಹಕರ ರಕ್ಷಣೆ ಮಾಡುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತದೆ ಎಂದು ಅಭಿಪ್ರಾಯಪಟ್ಟರೆ, ೬೬% ಗ್ರಾಹಕರು ನಿರಾಶೆಯ ಉತ್ತರವನ್ನು ನೀಡಿದರು. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೫೬% ಗ್ರಾಹಕರ ಸರ್ಕಾರ ಕಾರ್ಯಕ್ರಮ ಗ್ರಾಮಗಳಲ್ಲಿ ಹಮ್ಮಿಕೊಳ್ಳುತ್ತಿದೆ. ಎಂದರೆ ४४% ಗ್ರಾಹಕರು ಸರ್ಕಾರದ ವಿರುದ್ಧ ಹೇಳಿಕೆ ಇತ್ತರು. ನಿಪ್ಪಾಣಿ ಹೋಬಳಿಯಲ್ಲಿ ೩೧% ಗ್ರಾಹಕರ ಸರ್ಕಾರದ ಮಾಡುವ ಗ್ರಾಹಕ ರಕ್ಷಣೆ ಕಾರ್ಯ ತೃಪ್ತಿ ತಂದರೇ ೩೭% ಅತೃಪ್ತಿ ವ್ಯಕ್ತಪಡಿಸಿದರು. ಸದಲಗಾ ಹೋಬಳಿಯ ೩೧% ಗ್ರಾಹಕ ಸರ್ಕಾರದ ಗ್ರಾಹಕ ರಕ್ಷಣೆ ಸಂತಸ ತಂದರೆ ೬೯% ರಷ್ಟು ಗ್ರಾಹಕರಿಗೆ ಇಷ್ಟವಾಗಲಿಲ್ಲ.

## ಕೋಷ್ಟಕ ೮.೧೮

### ನ್ಯಾಯ ಬೆಲೆ ಅಂಗಡಿಗಳಿಂದ ದೊರಕುವ ದವಸ ಧಾನ್ಯಗಳ ಕುರಿತು ಗ್ರಾಹಕರ ಅಭಿಪ್ರಾಯ

| ಹೋಬಳಿ ವಿವರ | ಪಡಿತರ ಸಿಗುತ್ತದೆ | ಶೇಕಡಾ ವಾರು | ಸಿಗುವುದಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
|---|---|---|---|---|---|---|
| ಚಿಕ್ಕೋಡಿ | ೭೨ | ೩೮% | ೧೩೮ | ೬೬% | ೨೧೦ | ೧೦೦% |
| ನಾಗರಮುನ್ನೋಳ್ಳಿ | ೧೧ | ೧೭% | ೫೪ | ೮೩% | ೬೫ | ೧೦೦% |
| ನಿಪ್ಪಾಣಿ | ೩೬ | ೬೦% | ೨೪ | ೪೦% | ೬೦ | ೧೦೦೫ |
| ಸದಲಗಾ | ೪೯ | ೭೫% | ೧೬ | ೨೫% | ೬೫ | ೧೦೦% |
| ಒಟ್ಟು | ೧೬೮ | | ೨೩೨ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ಕೋಷ್ಟಕ ನಂ ೮.೧೮ ದ ಅನುಸಾರ ಚಿಕ್ಕೋಡಿ ಹೋಬಳಿಯ ಸಂದರ್ಶನಕ್ಕೆ ಆಯ್ದುಕೊಂಡ ಗ್ರಾಹಕರಲ್ಲಿ ೩೮% ಗ್ರಾಹಕರು ನ್ಯಾಯ ಬೆಲೆ ಅಂಗಡಿಗಳಿಂದ ತಮಗೆ ಪಡಿತರ ಸಿಗುತ್ತದೆ ಎಂದು ಉತ್ತರಿಸಿದರೆ, ೬೬% ಗ್ರಾಹಕರು ಅತೃಪ್ತಿಯನ್ನು ವ್ಯಕ್ತಪಡಿಸಿದರು. ನಾಗರಮುನ್ನೋಳ್ಳಿ ವ್ಯಾಪ್ತಿಯ ಹಳ್ಳಿಯ ಜನರಲ್ಲಿ ನ್ಯಾಯ ಬೆಲೆ ಅಂಗಡಿಯ ಕುರಿತು ಬಹಳ ನಕಾರಾತ್ಮಕ ಭಾವನೆ ಇದ್ದು ೮೩% ರಷ್ಟು ಗ್ರಾಹಕರು ಈ ಅಂಗಡಿಗಳಿಂದ ದವಸೆ ಧಾನ್ಯ ಸಿಗುತ್ತಿಲ್ಲ ಎಂದಿದ್ದಾರೆ. ನಿಪ್ಪಾಣಿ ಹೋಬಳಿಯ ಸಾಮಾನ್ಯ ಗ್ರಾಹಕರಲ್ಲಿ ೬೦% ಗ್ರಾಹಕರು ಪಡಿತರ ದವಸ ಧಾನ್ಯಗಳು ದೊರಕುತ್ತವೆ. ಎಂದರೆ ೪೦% ಗ್ರಾಹಕರು ಸಿಗುತ್ತಿಲ್ಲ ಎಂದಿದ್ದಾರೆ. ಸದಲಗಾ ಹೋಬಳಿಯ ವ್ಯಾಪ್ತಿಯಲ್ಲಿರುವ ೭೫ % ದಷ್ಟು ಸಾಮಾನ್ಯ ಗ್ರಾಹಕರು ಪಡಿತರ ವ್ಯವಸ್ಥೆ ಚೆನ್ನಾಗಿದೆ ಎಂದರೆ ೨೫ ಸಾಮಾನ್ಯ ಗ್ರಾಹಕರು ದವಸ ಧಾನ್ಯಗಳು ಸಿಗುತ್ತಿಲ್ಲ ಎಂದಿದ್ದಾರೆ. ಸರಕಾರದ ವ್ಯವಸ್ಥೆ ಎಲ್ಲರಿಗೂ ಸರಿಯಾಗಿ ತಲುಪುತ್ತಿಲ್ಲ.

## ಕೋಷ್ಟಕ ೮.೧೯

### ನ್ಯಾಯಬೆಲೆ ಅಂಗಡಿಗಳ ವಸ್ತುಗಳ ಗುಣಮಟ್ಟದ ಕುರಿತು ಸಾಮಾನ್ಯ ಗ್ರಾಹಕನ ಅಭಿಪ್ರಾಯ

| ಹೋಬಳಿ ವಿವರ | ಗುಣಮಟ್ಟ ಚೆನ್ನಾಗಿದೆ | ಶೇಕಡಾ ವಾರು | ಗುಣಮಟ್ಟ ಚೆನ್ನಾಗಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
|---|---|---|---|---|---|---|
| ಚಿಕ್ಕೋಡಿ | ೫೩ | ೨೫% | ೧೫೭ | ೭೫% | ೨೧೦ | ೧೦೦% |
| ನಾಗರಮುನ್ನೋಳ್ಳಿ | ೪೪ | ೬೮% | ೨೧ | ೩೨% | ೬೫ | ೧೦೦% |
| ನಿಪ್ಪಾಣಿ | ೩೬ | ೬೦% | ೨೪ | ೪೦% | ೬೦ | ೧೦೦% |
| ಸದಲಗಾ | ೪೩ | ೬೬% | ೨೨ | ೩೪% | ೬೫ | ೧೦೦% |
| ಒಟ್ಟು | ೧೭೬ | | ೨೨೪ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ರಿಯಾಯತಿ ಅಂಗಡಿಗಳ ದವಸ ಧಾನ್ಯಗಳ ಗುಣಮಟ್ಟ ಬಗ್ಗೆ ಸಾಮಾನ್ಯ ಗ್ರಾಹಕನಿಗೆ ವಿಚಾರಿಸಿದಾಗ ಚಿಕ್ಕೋಡಿ ಹೋಬಳಿಯಲ್ಲಿ ೨೫% ಸಾಮಾನ್ಯ ಗ್ರಾಹಕರು ದವಸ ಧಾನ್ಯಗಳು ಗುಣಮಟ್ಟ ಚೆನ್ನಾಗಿದೆ ಎಂದರೆ, ೭೫% ಸಾಮಾನ್ಯ ಗ್ರಾಹಕರ ಅಭಿಪ್ರಾಯದಂತೆ ಚೆನ್ನಾಗಿಲ್ಲ ಎಂದಿದ್ದಾರೆ. ನಾಗರಮುನ್ನೊಳ್ಳಿ ಹೋಬಳಿಯ ಗ್ರಾಹಕರ ಅಭಿಪ್ರಾಯದಂತೆ ೬೮% ಗ್ರಾಹಕರು ಚೆನ್ನಾಗಿದೆ ಎಂದರೆ ೩೨% ಚೆನ್ನಾಗಿಲ್ಲ ಎಂದಿದ್ದಾರೆ. ನಿಪ್ಪಾಣಿ ಹೋಬಳಿಯ ಗ್ರಾಹಕರ ಪ್ರಕಾರ ೬೦% ಗ್ರಾಹಕರಿಗೆ ಪಡಿತರ ಗುಣಮಟ್ಟದ್ದು ಎನಿಸಿದರೆ ೪೦% ಗ್ರಾಹಕರಿಗೆ ಪಡಿತರ ಗುಣಮಟ್ಟದ ಕುರಿತು ಒಳ್ಳೆಯ ಅಭಿಪ್ರಾಯವಿಲ್ಲ. ಸದಲಗಾ ಹೋಬಳಿಯಲ್ಲಿ ೬೬% ಗ್ರಾಹಕರಿಗೆ ಪಡಿತರದ ಗುಣಮಟ್ಟ ಹಿಡಿಸಿದರೆ ೩೪% ಗ್ರಾಹಕರಿಗೆ ಸೇರಲಿಲ್ಲ. ನ್ಯಾಯ ಬೆಲೆ ಅಂಗಡಿಗಳ ಗುಣಮಟ್ಟದ ಕುರಿತು ವಿಚಾರಿಸಿದಾಗ ಗ್ರಾಹಕರು ಅಸಮಾಧಾನ ವ್ಯಕ್ತ ಪಡಿಸಿದರು.

**ಕೋಷ್ಟಕ ೮.೨೦**

**ಸಾಮಾನ್ಯ ಗ್ರಾಹಕರು ಹಾಗೂ ಗ್ರಾಹಕತ್ವದ ತಿಳುವಳಿಕೆ**

| ಹೋಬಳಿ ವಿವರ | ಗ್ರಾಹಕತ್ವ ತಿಳುವಳಿಕೆ ಹರವು | | | | | |
|---|---|---|---|---|---|---|
| | ಇದೆ | ಶೇಕಡಾವಾರು | ಇಲ್ಲ | ಶೇಕಡಾವಾರು | ಒಟ್ಟು | ಶೇಕಡಾವಾರು |
| ಚಿಕ್ಕೋಡಿ | ೮೨ | ೩೯% | ೧೨೮ | ೬೧% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೪೩ | ೬೬% | ೨೨ | ೩೪% | ೬೫ | ೧೦೦% |
| ನಿಪ್ಪಾಣಿ | ೫೦ | ೫೩% | ೧೦ | ೧೭% | ೬೦ | ೧೦೦% |
| ಸದಲಗಾ | ೪೯ | ೭೫% | ೧೬ | ೨೫% | ೬೫ | ೧೦೦% |
| **ಒಟ್ಟು** | **೨೨೪** | | **೧೭೬** | | **೪೦೦** | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಚಿಕ್ಕೋಡಿ ಹೋಬಳಿಯಲ್ಲಿ ಸಾಮಾನ್ಯ ಗ್ರಾಹಕರಲ್ಲಿ ೩೯% ರಷ್ಟು ಗ್ರಾಹಕರಿಗೆ ಗ್ರಾಹಕತ್ವದ ತಿಳುವಳಿಕೆ ಇದೆ ಹಾಗೆಯೇ ೬೧% ಗ್ರಾಹಕರಿಗೆ ಇದರ ಅರಿವು ಇಲ್ಲ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೬೬% ಗ್ರಾಹಕರು ಗ್ರಾಹಕತ್ವದ ಅರ್ಥ ತಿಳಿದುಕೊಂಡಿದ್ದಾರೆ. ೩೪ ಗ್ರಾಹಕರು ಇದರ ಬಗ್ಗೆ ತಿಳಿದುಕೊಳ್ಳಬೇಕಿದೆ. ನಿಪ್ಪಾಣಿ ಹೋಬಳಿಯ ೮೩% ಗ್ರಾಹಕರು ಗ್ರಾಹಕತ್ವದ ಕುರಿತು ತಿಳಿದಿಕೊಂಡಿದ್ದಾರೆ ೧೭% ಗ್ರಾಹಕರಿಗೆ ಗೊತ್ತಿಲ್ಲ. ಸದಲಗಾ ಹೋಬಳಿಯಲ್ಲಿ ೭೫% ಗ್ರಾಹಕರಿಗೆ ಅರಿವಿದ್ದರೆ ೨೫% ಗ್ರಾಹಕರಿಗೆ ಗ್ರಾಹಕತ್ವದ ಅರಿವಿಲ್ಲ.

ಕೋಷ್ಟಕ ೮.೨೧

ಗ್ರಾಹಕ ಜಾಗೃತಿ ಕುರಿತು ಸರ್ಕಾರದ ಕಾರ್ಯಕ್ರಮಗಳ ವಿವರ

| ಹೋಬಳಿ ವಿವರ | ಕಾರ್ಯಕ್ರಮಗಳ ವಿವರ | | | | | |
|---|---|---|---|---|---|---|
| | ಹಮ್ಮಿಕೊಂಡಿವೆ | ಶೇಕಡಾ ವಾರು | ಹಮ್ಮಿಕೊಂಡಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
| ಚಿಕ್ಕೋಡಿ | ೪೪ | ೨೧% | ೧೬೬ | ೭೯% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೨೬ | ೪೦% | ೩೯ | ೬೦% | ೬೫ | ೧೦೦% |
| ನಿಪ್ಪಾಣಿ | ೫೪ | ೯೦% | ೬ | ೧೦% | ೬೦ | ೧೦೦% |
| ಸದಲಗಾ | ೫೯ | ೯೧% | ೬ | ೯% | ೬೫ | ೧೦೦% |
| ಒಟ್ಟು | ೧೮೩ | | ೨೧೭ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ಗ್ರಾಹಕ ಜಾಗೃತಿ ಕುರಿತು ಸರಕಾರಗಳು ಹಮ್ಮಿಕೊಳ್ಳುವ ಕಾರ್ಯಕ್ರಮಗಳು ಕುರಿತು ಆಯ್ದ ಗ್ರಾಹಕರನ್ನು ವಿಚಾರಿಸಿದಾಗ, ಚಿಕ್ಕೋಡಿ ಹೋಬಳಿಯಲ್ಲಿ ೨೧% ಗ್ರಾಹಕರು ಸರ್ಕಾರ ಕಾರ್ಯಕ್ರಮ ಹಮ್ಮಿಕೊಳ್ಳುತ್ತವೆ, ಎಂದು ಉತ್ತರಿಸಿದರೆ ೭೯% ದಷ್ಟು ಗ್ರಾಹಕರು ಸರ್ಕಾರದ ನಿರ್ಲಕ್ಷದ ಕುರಿತು ಮಾಹಿತಿ ನೀಡಿದರು. ನಾಗರಮುನ್ನೊಳ್ಳಿ ಹೋಬಳಿಯ ಗ್ರಾಮಗಳ ೬೫ ಗ್ರಾಹಕರಲ್ಲಿ ೪೦% ಗ್ರಾಹಕರು ಸರ್ಕಾರಗಳು ಗ್ರಾಹಕ ಜಾಗೃತಿ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿವೆ ಎಂದು ಉತ್ತರಿಸಿದರೆ, ೬೦% ಗ್ರಾಹಕರು ಸರ್ಕಾರ ಗ್ರಾಹಕ ಜಾಗೃತ ಕಾರ್ಯಕ್ರಮ ಹಮ್ಮಿಕೊಳ್ಳುವುದಿಲ್ಲ ಎಂದರು. ನಿಪ್ಪಾಣಿ ಹೋಬಳಿಯಲ್ಲಿ ೯೦% ಹಮ್ಮಿಕೊಳ್ಳುತ್ತವೆ. ಎಂದು ಉತ್ತರ ಬಂದರೆ ೧೦% ಇಲ್ಲ ಎಂದು ಬಂದಿತು. ಸದಲಗಾ ಹೋಬಳಿಯಲ್ಲಿ ೯೧% ಗ್ರಾಹಕ ಜಾಗೃತಿಗಳನ್ನು ಸರ್ಕಾರ ಹಮ್ಮಿಕೊಳ್ಳುತ್ತವೆ, ಎಂದು ಸಾಮಾನ್ಯ ಗ್ರಾಹಕ ಉತ್ತರಿಸಿದರೆ, ೯% ಸರ್ಕಾರ ಹಮ್ಮಿಕೊಳ್ಳುವುದಿಲ್ಲ ಎಂದು ಬಂದಿತು. ಸರಕಾರ ಹಳ್ಳಿಗಳಲ್ಲಿ ಗ್ರಾಹಕರ ಕುರಿತು ಕಾರ್ಯಕ್ರಮ ಏರ್ಪಡಿಸುವುದಿಲ್ಲ.

ಕೋಷ್ಟಕ ೮.೨೨

ಸಾಮಾನ್ಯ ಗ್ರಾಹಕ ಮತ್ತು ಮಾಹಿತಿ ಹಕ್ಕು ಕಾಯ್ದೆ ಅರಿವು

| ಹೋಬಳಿ ವಿವರ | ಮಾಹಿತಿ ಹಕ್ಕು ಕಾಯ್ದೆಯ ಅರಿವು | | | | | |
|---|---|---|---|---|---|---|
| | ಗೊತ್ತಿದೆ | ಶೇಕಡಾವಾರು | ಗೊತ್ತಿಲ್ಲ | ಶೇಕಡಾವಾರು | ಒಟ್ಟು | ಶೇಕಡಾವಾರು |
| ಚಿಕ್ಕೋಡಿ | ೧೬೦ | ೭೬% | ೫೦ | ೨೪% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೨೨ | ೩೪% | ೪೩ | ೬೬% | ೬೫ | ೧೦೦% |
| ನಿಪ್ಪಾಣಿ | ೨೫ | ೪೨% | ೩೫ | ೫೮% | ೬೦ | ೧೦೦% |
| ಸದಲಗಾ | ೩೦ | ೪೬% | ೩೫ | ೫೪% | ೬೫ | ೧೦೦% |
| ಒಟ್ಟು | ೨೩೭ | | ೧೬೩ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ಸಂದರ್ಶನಕ್ಕಾಗಿ ಆಯ್ದುಕೊಂಡ ಸಾಮಾನ್ಯ ಗ್ರಾಹಕರಿಗೆ ಮಾಹಿತಿ ಹಕ್ಕು ಕಾಯ್ದೆ ೨೦೦೫ರ ಕುರಿತು ವಿಚಾರಿಸಿದಾಗ ಚಿಕ್ಕೋಡಿ ಹೋಬಳಿಯ ಸಾಮಾನ್ಯ ಗ್ರಾಹಕರಲ್ಲಿ ೭೬% ಗೊತ್ತಿರುವವರಾದರೆ ೨೪% ಗ್ರಾಹಕರಿಗೆ ಗೊತ್ತಿಲ್ಲ ಎಂದು ಉತ್ತರ ಬಂದಿತು. ನಾಗರಮುನ್ನೊಳ್ಳಿಯಲ್ಲಿ ೩೪% ಗ್ರಾಹಕರಿಂದ ಗೊತ್ತಿದೆ ಎಂಬ ಉತ್ತರ ಸಿಕ್ಕರೆ ೬೬% ಗ್ರಾಹಕರು ಅದರ ಕುರಿತು ಗೊತ್ತಿಲ್ಲ ಎಂಬ ಉತ್ತರ ನೀಡಿದರು. ನಿಪ್ಪಾಣಿ ಹೋಬಳಿಯಲ್ಲಿ ೪೨% ಗ್ರಾಹಕರಿಗೆ ಕಾಯಿದೆಯ ಅರಿವಿದ್ದರೆ ೫೮% ಗ್ರಾಹಕರಿಗೆ ಇದರ ಅರಿವಿಲ್ಲ. ಸದಲಗಾ ಹೋಬಳಿಯಲ್ಲಿ ೪೬% ಗ್ರಾಹಕರಿಗೆ ಕಾಯದೆ ಗೊತ್ತಿದೆ. ೫೪% ಗ್ರಾಹಕರಿಗೆ ಗೊತ್ತಿಲ್ಲ.

**ಕೋಷ್ಟಕ ೮.೨೩**

**ಸಾಮಾನ್ಯ ಗ್ರಾಹಕರು ಹಾಗೂ ಲೋಕ ಅದಾಲತ್ ಬಗ್ಗೆ ಅರಿವು**

| ಹೋಬಳಿ ವಿವರ | ಲೋಕ ಅದಾಲತ್ ಅರಿವು | | | | | |
|---|---|---|---|---|---|---|
| | ತಿಳುವಳಿಕೆ | ಶೇಕಡಾ ವಾರು | ತಿಳುವಳಿಕೆ ಇಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
| ಚಿಕ್ಕೋಡಿ | ೧೪೯ | ೭೧% | ೬೧ | ೨೯% | ೨೧೦ | ೧೦೦% |
| ನಾಗರಮುನ್ನೊಳ್ಳಿ | ೨೦ | ೩೧% | ೪೫ | ೬೯% | ೬೫ | ೧೦೦% |
| ನಿಪ್ಪಾಣಿ | ೪೧ | ೬೮% | ೧೯ | ೩೨% | ೬೦ | ೧೦೦% |
| ಸದಲಗಾ | ೩೦ | ೪೬% | ೩೫ | ೫೪% | ೬೫ | ೧೦೦% |
| **ಒಟ್ಟು** | **೨೪೦** | | **೧೬೦** | | **೪೦೦** | |

**ಮೂಲ : ಸಂದರ್ಶನದಿಂದ ಪಡೆದ ಮಾಹಿತಿ**

ಚಿಕ್ಕೋಡಿ ಹೋಬಳಿಯಲ್ಲಿ ಬರುವ ಗ್ರಾಮಗಳಲ್ಲಿ ೭೧% ಗ್ರಾಹಕರಿಗೆ ಲೋಕ ಅದಲಾತ್ ಕುರಿತು ಗೊತ್ತಿದ್ದರೆ ೨೯% ಗ್ರಾಹಕರಿಗೆ ಅದರ ಅರಿವಿಲ್ಲ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೩೧% ಗ್ರಾಹಕರಿಗೆ ಅದಲಾತ್ ಕುರಿತು ಗೊತ್ತಿದ್ದರೆ ೬೯% ಗೊತ್ತಿಲ್ಲ. ನಿಪ್ಪಾಣಿ ಹೋಬಳಿಯ ಸಂದರ್ಶನದಲ್ಲಿ ೬೮% ಗ್ರಾಹಕರಿಗೆ ಲೋಕ ಅದಾಲತ್ ಕುರಿತು ಮಾಹಿತಿ ಇದ್ದರೆ ೩೨% ಗ್ರಾಹಕರಿಗೆ ಇದು ಗೊತ್ತಿಲ್ಲ. ಸದಲಗಾ ಹೋಬಳಿಯಲ್ಲಿ ೪೬% ಗ್ರಾಹಕರಿಗೆ ಲೋಕ ಅದಾಲತ್ ಗೊತ್ತಿದ್ದರೆ ೫೪% ಗ್ರಾಹಕರಿಗೆ ಇದು ಗೊತ್ತಿಲ್ಲ.

### ಕೋಷ್ಟಕ ೮.೨೪

### ಗ್ರಾಹಕರು ಹಾಗೂ ಗ್ರಾಹಕ ಸ್ವಯಂ-ಸಂಸ್ಥೆಗಳ ಮಾಸಿಕಗಳ ಉಪಯೋಗ

| ಹೋಬಳಿ ವಿವರ | ಮಾಸಿಕಗಳ ಓದುವಿಕೆ | | | | | |
|---|---|---|---|---|---|---|
| | ಓದುತ್ತಾರೆ | ಶೇಕಡಾ ವಾರು | ಓದುವುದಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
| ಚಿಕ್ಕೋಡಿ | ೧೫೬ | ೭೪% | ೫೪ | ೨೬% | ೨೧೦ | ೧೦೦% |
| ನಾಗರಮುನ್ನೋಳ್ಳಿ | ೩೮ | ೫೮% | ೨೭ | ೪೨% | ೬೫ | ೧೦೦% |
| ನಿಪ್ಪಾಣಿ | ೪೬ | ೭೭% | ೧೪ | ೨೩% | ೬೦ | ೧೦೦% |
| ಸದಲಗಾ | ೨೩ | ೩೫% | ೪೨ | ೬೫% | ೬೫ | ೧೦೦% |
| ಒಟ್ಟು | ೨೬೩ | | ೧೩೭ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ಗ್ರಾಹಕ ಸ್ವಯಂ ಸಂಸ್ಥೆಗಳು ಪ್ರಕಟಿಸುವ ಪತ್ರಿಕೆಗಳನ್ನು ಓದುವ ಹವ್ಯಾಸದ ಕುರಿತು ಆಯ್ದುಕೊಂಡ ಸಾಮಾನ್ಯ ಗ್ರಾಹಕರಲ್ಲಿ ವಿಚಾರಿಸಿದಾಗ ಚಿಕ್ಕೋಡಿ ಹೋಬಳಿಯ ೨೧೦ ಗ್ರಾಹಕರಲ್ಲಿ ೭೪% ಓದುತ್ತೇವೆ ಎನ್ನುವ ಉತ್ತರ ಬಂದಿದೆ. ೨೬% ಓದುವುದಿಲ್ಲ ಎನ್ನುವ ಉತ್ತರ ಸಿಕ್ಕಿವೆ. ನಾಗರಮುನ್ನೋಳ್ಳಿ ಗ್ರಾಮದಲ್ಲಿ ೬೫ ಸಾಮಾನ್ಯ ಗ್ರಾಹಕರಲ್ಲಿ ೫೮% ಓದುತ್ತೇವೆಯೆಂದು ೪೨% ಓದುವುದಿಲ್ಲ ಎನ್ನುವ ಉತ್ತರ ಸಿಕ್ಕಿದೆ. ಸದಲಗಾ ಹೋಬಳಿಯಲ್ಲಿ ಗ್ರಾಮಗಳಲ್ಲಿಯ ಸಂದರ್ಶನಕ್ಕೆ ಆಯ್ದುಕೊಂಡ ೬೫ ಸಾಮಾನ್ಯ ಗ್ರಾಹಕರಲ್ಲಿ ೩೫% ಗ್ರಾಹಕರು ಸಂಘ ಸಂಸ್ಥೆಗಳು ಪ್ರಕಟಿಸುವ ಪತ್ರಿಕೆಗಳನ್ನು ಓದುತ್ತೇವೆ ಎಂದಿದ್ದಾರೆ. ಹಾಗೆಯೇ ೬೫% ಗ್ರಾಹಕರಿಗೆ ಪತ್ರಿಕೆಗಳನ್ನು ಓದುವ ಹವ್ಯಾಸವಿಲ್ಲ ಎಂದು ಗೊತ್ತಾಗಿದೆ.

### ಕೋಷ್ಟಕ ೮.೨೫

### ಸಾಮಾನ್ಯ ಗ್ರಾಹಕರು ಹಾಗೂ ದೂರದರ್ಶನದ ಗ್ರಾಹಕ ಕಾರ್ಯಕ್ರಮಗಳ ವೀಕ್ಷಣೆ

| ಹೋಬಳಿ ವಿವರ | ದೂರದರ್ಶನದ ವೀಕ್ಷಣೆ ವಿವರ | | | | | |
|---|---|---|---|---|---|---|
| | ವೀಕ್ಷಿಸುತ್ತಾರೆ | ಶೇಕಡಾ ವಾರು | ವೀಕ್ಷಿಸುವುದಿಲ್ಲ | ಶೇಕಡಾ ವಾರು | ಒಟ್ಟು | ಶೇಕಡಾ ವಾರು |
| ಚಿಕ್ಕೋಡಿ | ೧೬೯ | ೮೦% | ೪೧ | ೨೦% | ೨೧೦ | ೧೦೦% |
| ನಾಗರಮುನ್ನೋಳ್ಳಿ | ೫೭ | ೮೮% | ೮ | ೧೨% | ೬೫ | ೧೦೦% |
| ನಿಪ್ಪಾಣಿ | ೫೪ | ೯೦% | ೬ | ೧೦% | ೬೦ | ೧೦೦% |
| ಸದಲಗಾ | ೫೩ | ೮೨% | ೧೨ | ೧೮% | ೬೫ | ೧೦೦% |
| ಒಟ್ಟು | ೩೩೩ | | ೬೭ | | ೪೦೦ | |

ಮೂಲ : ಸಂದರ್ಶನದಿಂದ ಪಡೆದ ಮಾಹಿತಿ

ಚಿಕ್ಕೋಡಿ ಹೋಬಳಿಯ ಗ್ರಾಮಗಳ ೨೧೦ ಸಾಮಾನ್ಯ ಗ್ರಾಹಕರಲ್ಲಿ ೮೦% ಗ್ರಾಹಕರು ಗ್ರಾಹಕ ಕಾರ್ಯಕ್ರಮ ನೋಡುತ್ತಾರೆ ೨೦% ಗ್ರಾಹಕರು ನೋಡುವುದಿಲ್ಲ. ನಾಗರಮುನ್ನೊಳ್ಳಿ ಹೋಬಳಿಯಲ್ಲಿ ೮೮% ಗ್ರಾಹಕರು ದೂರದರ್ಶನ ವಿಕ್ಷಿಸಿದರೆ ೧೨% ನೋಡುವುದಿಲ್ಲ. ನಿಪ್ಪಾಣಿ ಹೋಬಳಿಯಲ್ಲಿ ೯೦% ಗ್ರಾಹಕರು ಟಿ.ವ್ಹಿ ಯಲ್ಲಿ ಗ್ರಾಹಕ ಕುರಿತು ಕಾರ್ಯಕ್ರಮ ವೀಕ್ಷಿಸಿದರೆ, ೧೦% ಗ್ರಾಹಕರು ನೋಡುವುದಿಲ್ಲ. ಸದಲಗಾ ಹೋಬಳಿಯಲ್ಲಿ ೮೨% ಗ್ರಾಹಕರು ನೋಡುತ್ತಾರೆ, ೧೮% ಗ್ರಾಹಕರು ನೋಡುವುದಿಲ್ಲ.

ಚಿಕ್ಕೋಡಿ ತಾಲೂಕಿನ ನಾಲ್ಕೂ ಹೋಬಳಿಗಳಲ್ಲಿರುವ ಹಳ್ಳಿಗಳಿಂದ ಯಾದ್ರಚ್ಛಿಕವಾಗಿ ನಾಲ್ಕೂನೂರು ಸಾಮಾನ್ಯ ಗ್ರಾಹಕರನ್ನು ಆಯ್ದುಕೊಂಡು ಸಂದರ್ಶಿಸಿ ಮಾಹಿತಿ ಸಂಗ್ರಹಿಸಿ ವಿಂಗಡಿಸಲಾಗಿದೆ. ಸಂದರ್ಶನಕ್ಕೆ ಚಿಕ್ಕೋಡಿ ಹೋಬಳಿಯ ಹೆಚ್ಚಿನ ಗ್ರಾಮಗಳನ್ನು ನಂತರ ನಾಗರಮುನೊಳಿ ಹೋಬಳಿ ಆಮೇಲೆ ನಿಪ್ಪಾಣಿ ಹೋಬಳಿ ಮೂರನೇ ಸ್ಥಾನದಲ್ಲಿ, ನಾಲ್ಕನೆಯ ಹಾಗೂ ಕೊನೆಯದಾಗಿ ಸದಲಗಾ ಹೋಬಳಿಯ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಆಯ್ಕೆ ಮಾಡಿದ ಗ್ರಾಹಕರಲ್ಲಿ ಪುರುಷರು, ೪ ಸ್ತ್ರೀಯರಿದ್ದು, ಎಲ್ಲರೂ ಪ್ರಬುದ್ಧರಿದ್ದು, ಅವರಿಂದ ಪಡೆದ ಮಾಹಿತಿ ಮಹತ್ವಪೂರ್ಣವಾಗಿದೆ. ಅಧ್ಯಯನದ ಉದ್ದೇಶ ಗ್ರಾಮದ ಗ್ರಾಹಕರಿಗೆ ಗ್ರಾಹಕವೇದಿಕೆಯ ಕುರಿತು ವಿಷಯ ತಲುಪಿಸುವುದು ಇದು ಇಲ್ಲಿ ಈಡೇರಿದೆ. ಆಯ್ದುಕೊಂಡ ಎಲ್ಲ ಗ್ರಾಹಕರು ಕಲಿತವರಾಗಿರುವುದರಿಂದ ಗ್ರಾಹಕ ಸಂರಕ್ಷಣೆಯ ಕುರಿತು ಅರಿತುಕೊಂಡು ಬೇರೆ ಗ್ರಾಮದ ಜನರಿಗೆ ಸಹಾಯ ಮಾಡುತ್ತಾರೆ. ಗ್ರಾಹಕರ ಆದಾಯವನ್ನು ವಿಶ್ಲೇಷಿಸಿದಾಗ ಅತ್ಯಂಥ ಕಡಿಮೆ ಆದಾಯದ ಜನರೆ ಈ ಗ್ರಾಹಕರಲ್ಲಿ ಇರುವದರಿಂದ, ಬಡ ಗ್ರಾಹಕರಿಗೆ ತಿಳುವಳಿಕೆ ನೀಡುವುದು ಇಡೇರಿದಂತಾಗಿದೆ. ಈ ಸಾಮಾನ್ಯ ಗ್ರಾಹಕರಲ್ಲಿ ಅರ್ಧದಷ್ಟು ಜನರು ವ್ಯಾಪಾರಿಗಳಲ್ಲಿ ನಂಬಿಕೆ ಇಟ್ಟವರಿದ್ದಾರೆ. ಹಲವಾರು ಗ್ರಾಹಕರಿಗೆ ಗ್ರಾಹಕ ಸಂರಕ್ಷಣಾ ಕಾಯದೆ ಹಾಗೂ ಗ್ರಾಹಕವೇದಿಕೆಯ ಕುರಿತು ತಿಳುವಳಿಕೆ ಇದೆ. ಅವರಿಗೆ ಗ್ರಾಹಕ ಸ್ವಯಂ ಸಂಸ್ಥೆಗಳ ಕುರಿತು ಅರಿವಿದೆ. ಸರ್ಕಾರಗಳು ಹಮ್ಮಿಕೊಳ್ಳುವ ಕಾರ್ಯಕ್ರಮಗಳ ಬಗ್ಗೆ ಅವರಿಗೆ ಅಸಮಾಧಾನವಿದೆ. ಈ ಗ್ರಾಮದ ಜನರಿಗೆ ರಿಯಾಯತಿ ಅಂಗಡಿಗಳ ಮೇಲೆ ವಿಶ್ವಾಸವಿದೆ. ಮಾಹಿತಿ ಹಕ್ಕು ಕಾಯದೆ ಕುರಿತು ಲೋಕ ಅದಾಲತ್ ಕುರಿತು ತಿಳುವಳಿಕೆ ಇದೆ. ಈ ಸಾಮಾನ್ಯ ಗ್ರಾಹಕರು ಗ್ರಾಹಕ ಜಾಗೃತಿಯ ನಿಯತಕಾಲಿಕೆಗಳನ್ನು ಓದುವುದಿಲ್ಲವಾದರೂ ದೂರದರ್ಶನಗಳಲ್ಲಿ ಬರುವ ಗ್ರಾಹಕ ಜಾಗೃತಿ ಕಾರ್ಯಕ್ರಮಗಳಿಂದ ಪ್ರೇರಿತರಾಗಿದ್ದಾರೆ ಅವರಲ್ಲಿ ಸಂಘಟನೆಯ ಅವಶ್ಯಕತೆ ಇದೆ.

೩೩೩೩

ಅಧ್ಯಾಯ–೯

# ಸಮಾರೋಪ

ವಿಶ್ವ ಗ್ರಾಹಕ ಆಂದೋಲನದ ಚರಿತ್ರೆಯಲ್ಲಿ ೧೯೬೨ ಒಂದು ಮಹತ್ವದ ವರ್ಷ. ಅಮೇರಿಕದ ಅಂದಿನ ಅಧ್ಯಕ್ಷ ಜಾನ್.ಎಫ್.ಕೆನಡಿಯವರು ಅಲ್ಲಿನ ನಾಗರಿಕರಿಗೆ ನಾಲ್ಕು ಹಕ್ಕುಗಳನ್ನು ನೀಡುವ ವಿಧೇಯಕವನ್ನು ಪ್ರಕಟಿಸಿದರು. ಪ್ರತಿಯೊಬ್ಬ ನಾಗರಿಕನಿಗೂ ಸುರಕ್ಷತೆ, ಮಾಹಿತಿ ನಿವೇದನೆ, ಪರಿಹಾರದ ಹಕ್ಕುಗಳು ಸಿಕ್ಕವು. ಅದಕ್ಕೆ ಮಾರ್ಚ ೧೫ರ ದಿನವನ್ನು ವಿಶ್ವಗ್ರಾಹಕರ ಹಕ್ಕುಗಳ ದಿನವೆಂದು ಆಚರಿಸಲಾಗುತ್ತಿದೆ. ಈ ಕಾಲದಲ್ಲಿ ಟಿ.ವಿ, ದಿನಪತ್ರಿಕೆ ಹಾಗೂ ಇತರ ಮಾಧ್ಯಮಗಳಲ್ಲಿ ಬರುವ ವಿವಿಧ ಬಗೆಯ ಜಾಹಿರಾತುಗಳನ್ನು ನೋಡಿ ಮರುಳಾಗುವವರೆ ಹೆಚ್ಚು. ದಿನ ನಿತ್ಯದ ವ್ಯವಹಾರಗಳನ್ನು ಚಾಕಚಕ್ಯತೆಯಿಂದ ನಿರ್ವಹಿಸುವ ಜಾಣ ಮಹಿಳೆಯರೆ ಹೆಚ್ಚಿನ ಸಂಖ್ಯೆಯಲ್ಲಿ ಜಾಹಿರಾತುಗಳಿಗೆ ಮರುಳಾಗಿ ಮಾರುಕಟ್ಟೆಯಲ್ಲಿ ಮೋಸ ಹೋಗುತ್ತಿದ್ದಾರೆ. ಇದಕ್ಕೆ ವಿದೇಶಿ ವಸ್ತುಗಳ ವ್ಯಾಮೋಹ ಆಸೆಬುರುಕತನ ಅಥವಾ ಹೆಚ್ಚು ಉಳಿಸುತ್ತವೆಂದು ಅತಿ ಬುದ್ಧಿವಂತಿಕೆ ಕಾರಣವಾಗಿರಬಹುದು., ಜಾಹಿರಾತುಗಳಿಗೆ ಮರುಳಾಗಿ ಹಣ ಕಳೆದುಕೊಂಡವರು, ಆರೋಗ್ಯ ಹಾಳು ಮಾಡಿಕೊಂಡವರು ನೂರಾರು ಜನ ಇದ್ದಾರೆ. ಇದಕ್ಕೆ ಕೊನೆ ಎಂಬುದೆ ಇಲ್ಲ. ಜನರಲ್ಲಿ ಕೊಳ್ಳುಬಾಕ ಸಂಸ್ಕೃತಿ ವಿಪರೀತ ಬೆಳೆಯುತ್ತಿದೆ. ಖರೀದಿಸಿಯೇ ತೀರಬೇಕು ಎಂಬ ಆಸೆ ಅತಿಯಾಗುತ್ತಿದೆ. ಇದೆ ಗ್ರಾಹಕರಿಗೆ ಶಾಪವಾಗಿದೆ. ಗ್ರಾಹಕರು ಶೋಷಣೆಗೆ ಒಳಗಾಗುತ್ತಿದ್ದಾರೆ. ವ್ಯಾಪಾರಸ್ತರು, ಗ್ರಾಹಕರನ್ನು ವಂಚಿಸುವ ನೂರಾರು ತಂತ್ರಗಳನ್ನು ಮಾಡುತ್ತಿದ್ದಾರೆ. ಕಡಿಮೆ ತೂಕ, ಅಳತೆ, ಕಲಬೆರಿಕೆ, ಖೊಟಾ ವಸ್ತುಗಳ ಮಾರಾಟ ನಿರಂತರವಾಗಿ ನಡೆದಿದೆ. ವ್ಯಾಪಾರಸ್ಥರು ನೂರಾರು ತಂತ್ರಗಳಿಂದ ಗ್ರಾಹಕರನ್ನು ಗೊಂದಲದಲ್ಲಿ ಸಿಲುಕಿಸಿ ವಸ್ತುಗಳ್ನು ಖರೀದಿಸುವಂತೆ ಮಾಡಲಾಗುತ್ತಿದೆ.

ಗ್ರಾಹಕರು, ವ್ಯಾಪಾರಸ್ಥರ ತಂತ್ರಗಳಿಗೆ ಮಣಿಯದೆ ಬುದ್ದಿವಂತ ಗ್ರಾಹಕರಾಗುವ ಕಲೆಯನ್ನು ಬೆಳೆಸಿಕೊಳ್ಳಬೇಕಾಗಿದೆ. ಏನೋ ಒಂದನ್ನು ಕೊಂಡರಾಯಿತು ಎನ್ನುವ ಸೋಮಾರಿತನ ಒಂದಾದರೆ, ಸಮಯದ ಅಭಾವದಿಂದ ದಿನನಿತ್ಯ ಮೋಸ ಹೋಗುವುದು ಸಾಮಾನ್ಯವಾಗಿದೆ. ಈಗ

ಮಾರುಕಟ್ಟೆಯಲ್ಲಿ ಹಲವಾರು ಬ್ರಾಂಡಗಳ ವಸ್ತುಗಳು ಬರುತ್ತಿವೆ. ಇವುಗಳಲ್ಲಿ ಉತ್ತಮವಾದುದನ್ನು ಸರಿಯಾದ ಬೆಲೆಗಳನ್ನು ಪರಾಮರ್ಶಿಸಿ ವ್ಯಾಪಾರ ಮಾಡದೆ ಮೋಸ ಹೋಗುತ್ತಿದ್ದಾರೆ. ಆದ್ದರಿಂದ ಗ್ರಾಹಕ ಜಾಗೃತನಾಗಿರಬೇಕು. ಕರ್ತವ್ಯಗಳನ್ನು ಹಕ್ಕುಗಳನ್ನು ಅರಿತಿರಬೇಕು. ಇದಕ್ಕಾಗಿ ಗ್ರಾಹಕರು–

೧. ಉತ್ತಮ ಗುಣಮಟ್ಟದ ವಸ್ತುಗಳನ್ನು ಆರಿಸಬೇಕು.

೨. ಕೊಳ್ಳುವ ವಸ್ತುವಿನ ಬಗ್ಗೆ ಸಂಪೂರ್ಣ ಮಾಹಿತಿ ಪಡೆಯಬೇಕು.

೩. ತಮಗೆ ಅಗತ್ಯವಿರುವ ವಸ್ತುಗಳನ್ನಷ್ಟೇ ಖರೀದಿಸಬೇಕು.

೪. ಖರೀದಿಸಿದ ವಸ್ತು ತಮ್ಮ ಹಾಗೂ ಪರಿಸರದ ಸುರಕ್ಷತೆಗೆ ಅನುಗುಣವಾಗಿದೆಯೋ ಇಲ್ಲವೋ ಎಂಬುದರ ಅರಿವಿರಬೇಕು.

ಇಷ್ಟೆಲ್ಲ ಬುದ್ಧಿವಂತಿಕೆಯಿಂದ ವ್ಯಾಪಾರ ಮಾಡಿಯೂ ಗ್ರಾಹಕ ಒಂದಲ್ಲ ಒಂದು ರೀತಿಯಲ್ಲಿ ಮೋಸ ಹೋಗುತ್ತಾನೆ. ಈ ಸಮಯದಲ್ಲಿ ಗ್ರಾಹಕ ಮೋಸ ಹೋದೆನಲ್ಲಾ ಎಂದು ಅಸಹಾಯಕನಾದಾಗ ಸರ್ಕಾರ ಆತನ ರಕ್ಷಣೆಗೆ ಬರುತ್ತದೆ.

೧. ಇಂತಹ ಗ್ರಾಹಕರನ್ನು ಲಕ್ಷದಲ್ಲಿಟ್ಟುಕೊಂಡು, ಗ್ರಾಹಕರನ್ನು ಸಂರಕ್ಷಿಸುವ ಸಲುವಾಗಿಯೇ, ಗ್ರಾಹಕರ ಸಂರಕ್ಷಣಾ ಕಾಯ್ದೆಯನ್ನು ೧೯೮೬ ರಲ್ಲಿ ಜಾರಿಗೆ ತಂದಿದೆ.

೨. ಗ್ರಾಹಕರ ದೂರುಗಳನ್ನು ಪರಿಹರಿಸಲು ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಗ್ರಾಹಕ ವೇದಿಕೆಗಳನ್ನು ಸರ್ಕಾರ ನಿರ್ಮಿಸಿದೆ.

ಆದರೆ ಗ್ರಾಹಕರು ಈ ಕಾಯ್ದೆ ಕಾನೂನುಗಳ ಪ್ರಯೋಜನವನ್ನು ಸಾಕಷ್ಟು ಪಡೆಯುತ್ತಿಲ್ಲ. ಇದಕ್ಕೆ ಕಾರಣಗಳು ಹಲವಾರು:–

ಗ್ರಾಹಕರಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವಿಲ್ಲ.

೧. ತಮ್ಮ ರಕ್ಷಣೆಗಾಗಿ ಜಾರಿಯಲ್ಲಿರುವ ಕಾಯ್ದೆ ಕಾನೂನುಗಳ ಪರಿಚಯವಿಲ್ಲ.

೨. ತಮ್ಮ ಸಮಸ್ಯೆಗಳನ್ನು ಯಾವ ರೀತಿ ಪರಿಹರಿಸಿಕೊಳ್ಳಬೇಕೆಂಬುದರ ಮಾಹಿತಿ ಇಲ್ಲ.

೩. ಸಮಯದ ಅಭಾವ, ಹತಾಶ ಮನೋಭಾವಗಳಿಂದ ಪರಿಹಾರಕ್ಕೆ ಇಚ್ಛಿಸುತ್ತಿಲ್ಲ.

ಬುದ್ಧಿವಂತಿಕೆಯನ್ನು ಉಪಯೋಗಿಸಿ ವ್ಯಾಪಾರ ಮಾಡುವ ಕಲೆಯನ್ನು ಅರಿತಿರಬೇಕು. ಗ್ರಾಹಕರು ಜಾಗೃತರಾಗಬೇಕು. ತಮ್ಮ ಹಕ್ಕು ಕರ್ತವ್ಯಗಳನ್ನು ಅರಿತು ವ್ಯವಹಾರ ಮಾಡಿದರೆ ಮಾರುಕಟ್ಟೆಯಲ್ಲಿ ಮೋಸ ಹೋಗುವುದನ್ನು ತಪ್ಪಿಸಬಹುದು.[೧]

ನಗರ ಪ್ರದೇಶಗಳಿಗೆ ಹೋಲಿಸಿದರೆ ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಹಕ ಜಾಗೃತಿ ತುಂಬ ಕಡಿಮೆ. ಅಂಕಿ ಅಂಶಗಳ ಪ್ರಕಾರ, ಗ್ರಾಹಕ ವೇದಿಕೆ ಪ್ರಾರಂಭವಾದಾಗಿನಿಂದ ಇದುವರೆಗೆ ಜಿಲ್ಲಾ ಗ್ರಾಹಕ ವೇದಿಕೆಗಳಲ್ಲಿ ದಾಖಲೆಯಾದ ಮೊಕದ್ದಮೆಗಳು ಸರಿಸುಮಾರು ೬೦ ಸಾವಿರ. ಇದರಲ್ಲಿ

ಬೆಂಗಳೂರು ನಗರ ಗ್ರಾಹಕ ವೇದಿಕೆ ಹಾಗೂ ನಗರದಲ್ಲಿರುವ ನಾಲ್ಕು ಹೆಚ್ಚುವರಿ ವೇದಿಕೆಗಳಲ್ಲಿ ನೋಂದಣಿಯಾದ ವ್ಯಾಜ್ಯಗಳೇ ಮೂವತ್ತು ಸಾವಿರಕ್ಕೂ ಹೆಚ್ಚು.

ಗ್ರಾಹಕರಿಗೆ ಅತಿ ಕಡಿಮೆ ವೆಚ್ಚದಲ್ಲಿ, ಸರಳವಾಗಿ ಶೀಘ್ರವಾಗಿ ನ್ಯಾಯ ಒದಗಿಸಲು ಕೇಂದ್ರ ಸರ್ಕಾರ ರೂಪಿಸಿರುವ ನ್ಯಾಯಾಲಯಗಳೇ ಈ ವೇದಿಕೆಗಳು. ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಈ ವೇದಿಕೆಗಳಿವೆ. ಇದಕ್ಕೆ ಕಟ್ಟಬೇಕಾದ ಶುಲ್ಕ ಕೇವಲ ಹೆಸರಿಗೆ ಮಾತ್ರ. ಬಡತನ ರೇಖೆಗಿಂತ ಕೆಳಗಿರುವವರು ಒಂದು ಲಕ್ಷ ರೂ.ವರೆಗೆ ಪರಿಹಾರಕ್ಕಾಗಿ ಅರ್ಜಿ ಸಲ್ಲಿಸಿದರೆ ಅದಕ್ಕೆ ಶುಲ್ಕವನ್ನೇ ಕಟ್ಟಬೇಕಿಲ್ಲ. ಬಡತನ ರೇಖೆಗಿಂತಲೂ ಮೇಲಿರುವವರು ಅಥವಾ ಅಂತ್ಯೋದಯ, ಅನ್ನ ಯೋಜನೆ ಕಾರ್ಡು ಹೊಂದಿರುವವರು ಒಂದು ಲಕ್ಷ ರೂ ವರೆಗೆ ಪರಿಹಾರಕ್ಕೆ ರೂ ೧೦೦.೦೦ ೫ ಲಕ್ಷ ಪರಿಹಾರಕ್ಕೆ ರೂ ೨೦೦.೦೦, ಹತ್ತು ಲಕ್ಷ ಪರಿಹಾರಕ್ಕೆ ರೂ ೪೦೦.೦೦ ಹಾಗೂ ೨೦ ಲಕ್ಷ ಪರಿಹಾರಕ್ಕೆ ೨೦೦೦.೦೦ ರೂ ಮಾತ್ರ ಕೋರ್ಟ್ ಶುಲ್ಕ ನೀಡಬೇಕಾಗುತ್ತದೆ.

ಗ್ರಾಹಕ ವೇದಿಕೆಯಿಂದ ಆಗುವ ದೊಡ್ಡ ಲಾಭ ಎಂದರೆ ಸಾಮಾನ್ಯವಾಗಿ ಮೂರು ತಿಂಗಳ ಒಳಗೆ ಪ್ರಕರಣ ಇತ್ಯರ್ಥ ಮಾಡಲಾಗುತ್ತದೆ. ವೈದ್ಯಕೀಯ ಮತ್ತಿತರ ವಿಶೇಷ ಕಾರಣಗಳಿದ್ದರೆ ಆರು ತಿಂಗಳವರೆಗೆ ಸಮಯ ತೆಗೆದುಕೊಳ್ಳುತ್ತಾರೆ. ರಾಜ್ಯದಲ್ಲಿರುವ ೩೧ ಜಿಲ್ಲಾ ಗ್ರಾಹಕರ ವೇದಿಕೆಗಳು ಪ್ರಾರಂಭವಾದಾಗಿನಿಂದ ದಾಖಲಾದ ವ್ಯಾಜ್ಯಗಳಲ್ಲಿ ೨೩ ವೇದಿಕೆಗಳಲ್ಲಿ ಎರಡು ವರ್ಷಕ್ಕೂ ಹೆಚ್ಚು ಸಮಯದಿಂದ ಬಾಕಿ ಉಳಿದಿರುವ ಒಂದು ಪ್ರಕರಣವೂ ಇಲ್ಲ. ಉಳಿದ ೮ ವೇದಿಕೆಗಳಲ್ಲಿ ಹಳೆಯ ವ್ಯಾಜ್ಯಗಳು ಕೇವಲ ೯೬.

ಇಷ್ಟೆಲ್ಲ ಸೌಲಭ್ಯಗಳಿದ್ದರೂ ತಮಗಾಗಿರುವ ಅನ್ಯಾಯಕ್ಕೆ ಗ್ರಾಹಕ ವೇದಿಕೆ ಮೊರೆ ಹೋಗಬೇಕೆನ್ನುವ ಬಗ್ಗೆ ಜನರಲ್ಲಿ ಸಾಕಷ್ಟು ಅರಿವಿಲ್ಲ. ಕೊಳ್ಳುವುದು ಅವರಿಗೆ ಗೊತ್ತು ಆದರೆ ಹಕ್ಕಿನ ಬಗ್ಗೆ ಗೊತ್ತಿಲ್ಲ. ಅದರಲ್ಲೂ ಗ್ರಾಮೀಣ ಜನರಲ್ಲಂತೂ ತುಂಬಾ ಕಡಿಮೆ. ಅರಿವು ಮೂಡಿಸಲು ಇತ್ತೀಚಿಗೆ ಕೇಂದ್ರ ಸರ್ಕಾರದ ಸೂಚನೆಯಂತೆ ರಾಜ್ಯ ಹಾಗೂ ಜಿಲ್ಲಾ ಮಟ್ಟಗಳಲ್ಲಿ ಸಮಿತಿಗಳನ್ನು ಆರಂಭಿಸಿದ್ದಾರೆ. ರಾಜ್ಯಮಟ್ಟದ ಸಮೀತಿಗೆ ಆಹಾರ ಮತ್ತು ನಾಗರಿಕ ಪೂರೈಕೆ ಸಚಿವರು ಮುಖ್ಯಸ್ಥರು ಜಿಲ್ಲಾ ಮಟ್ಟದ ಸಮೀತಿಗೆ ಜಿಲ್ಲಾಧಿಕಾರಿ ಮುಖ್ಯಸ್ಥರು, ಸಾರ್ವಜನಿಕ ಸಮಾರಂಭಗಳ ಮೂಲಕ ಜನರಿಗೆ ಹಕ್ಕಿನ ಬಗ್ಗೆ ತಿಳಿಸಿಕೊಡುವುದು, ಸಮಿತಿಗಳ ಜವಾಬ್ದಾರಿ ಗ್ರಾಮೀಣ ಜನರೂ ಕುಕ್ಕರ್, ಸ್ಟೋ, ಟೂತಪೆಸ್ಟ, ಸ್ಕೂಲಡ್ರೆಸ್, ಔಷಧಗಳು, ಕ್ರಿಮೀನಾಶಕ, ಬೀಜ, ಗೊಬ್ಬರಗಳನ್ನು ಖರೀದಿ ಮಾಡುತ್ತಾರೆ. ಅನೇಕ ಬಾರಿ ಮೋಸ ಹೋಗಿರುವುದು ಆದರೂ ಗ್ರಾಹಕ ವೇದಿಕೆಗಳಿಗೆ ಹೋಗಬೇಕು ಎನ್ನುವುದು ಅವರಿಗೆ ತಿಳಿದಿಲ್ಲ. ಈ ಬಗ್ಗೆ ಹೆಚ್ಚಿನ ಜಾಗೃತಿ ಮಾಡಬೇಕಿದೆ.

ದೇಶದಲ್ಲಿರುವ ಬಡತನ, ಅನಕ್ಷರತೆ, ನಿರುದ್ಯೋಗ, ಕಳಪೆ ಮಟ್ಟದ ಸಾಹಿತ್ಯ ಮೊದಲಾದ ಕಾರಣಗಳಿಂದಾಗಿ ಗ್ರಾಹಕ ಹಿತರಕ್ಷಣೆಯಲ್ಲಿ ಕಾನೂನುಗಳು ಮತ್ತು ಹೋರಾಟಗಳಿಂದ ನಿರೀಕ್ಷಿತ

ಫಲವನ್ನು ಸಾಧಿಸಲಿಕ್ಕೆ ಆಗಿಲ್ಲ. ಅದಕ್ಕಾಗಿ ಗ್ರಾಹಕರ ಹಿತರಕ್ಷಣೆಗೆ ಸಂಬಂಧಿಸಿದ ಕಾಯ್ದೆ ಕಾನೂನುಗಳು ಮತ್ತು ಸಾಹಿತ್ಯದೊಂದಿಗೆ ಪ್ರಚಾರ ಮಾಡುವುದರೊಂದಿಗೆ ಜಾಗೃತಿ ಮತ್ತು ಪ್ರಜ್ಞೆ ಮೂಡಿಸುವುದು ಇಂದಿನ ಅಗತ್ಯವಾಗಿದೆ. ದೇಶದಲ್ಲಿ ಸುಶಿಕ್ಷಿತ–ಅಶಿಕ್ಷಿತ ಗ್ರಾಹಕರ ಸಂಖ್ಯೆ ಅಪಾರವಾಗಿದೆ. ಅವರಿಗೆಲ್ಲ ಗ್ರಾಹಕರ ಹಕ್ಕುಗಳ ಬಗ್ಗೆ ತಿಳುವಳಿಕೆ ನೀಡಬೇಕಾಗಿದೆ.[೨]

ಕಾನೂನಿನಲ್ಲಿ ಗ್ರಾಹಕರನ್ನು ರಕ್ಷಿಸುವ ವಿಧಾನ ತುಂಬಾ ಕಡಿಮೆ. ನಮ್ಮ ಜೀವನದ ಸಾಮಾನ್ಯವಾದ ನಡತೆಗಳು ಕೂಡ "ಗ್ರಾಹಕ ನೀನು ಎಚ್ಚರದಿಂದ ಇರು" ಎನ್ನುವುದನ್ನು ನಾವು ನೋಡುತ್ತೇವೆ. ಈ ಒಂದು ಅನುಸಂಧಾನ, ಗ್ರಾಹಕನ ವ್ಯವಹಾರ ಮಿತವಾಗಿದ್ದಾಗ ಮಾರಾಟಗಾರನ ವ್ಯವಹಾರ ನಿಯಮಬದ್ಧವಾಗಿದ್ದಾಗ ಹಾಗೂ ಹಳ್ಳಿಯ ಮಾರುಕಟ್ಟೆಗೆ ಸೀಮಿತವಾಗಿದ್ದಾಗ ಉತ್ತಮವಾಗಿತ್ತು. ಅವರಿಬ್ಬರ ವ್ಯಾಜ್ಯಗಳು ತುಂಬ ಮಿತವಾಗಿದ್ದಾಗ, ನ್ಯಾಯಾಲಯಗಳಲ್ಲಿ ಪರಿಹರಿಸಲು ಯೋಗ್ಯವಾಗಿರಲಿಲ್ಲ.[೩]

ಈಗ ಗ್ರಾಹಕರ ಜಗತ್ತೆ ಬೇರೆ. ವ್ಯಾಪಾರ ಹಾಗೂ ವಾಣಿಜ್ಯದ ಚಟುವಟಿಕೆಗಳಲ್ಲಿ ತುಂಬಾ ಬದಲಾವಣೆಯನ್ನು ಕಾಣುತ್ತಿದ್ದೇವೆ. ಇದರಿಂದ ಗ್ರಾಹಕ ಮೋಸಹೋಗುವ ಒಂದು ನಿಟ್ಟಿನಲ್ಲಿ ತೊಂದರೆ ಅನುಭವಿಸುತ್ತಿದ್ದಾನೆ. ಮಾರಾಟಗಾರನ ಕಪಿಮುಷ್ಠಿಯಲ್ಲಿ ಆತ ಸಿಲುಕಿ ಸರಿಯಾದ ಮಾಹಿತಿ ಕೊರತೆ, ಸತತವಾಗಿ ಏರುತ್ತಿರುವ ಬೆಲೆಗಳು, ಮೋಸಮಾಡಿ ಲಾಭಗಳಿಸುವ ವಿಧಾನಗಳು ಹೀಗೆ ಹತ್ತು ಹಲವಾರು ಸಮಸ್ಯೆಗಳನ್ನು ಆತ ಎದುರಿಸುತ್ತಿದ್ದಾನೆ.

ಇವತ್ತಿನ ದಿನಗಳಲ್ಲಿ ಗ್ರಾಹಕರನ್ನು ಸಂರಕ್ಷಿಸುವ, ಮನಸ್ಸಿರದೆ ಹಾಗೂ ಮುಗ್ದವಾಗಿ ಹತ್ತು ಹಲವು ವಿಧಾನಗಳಾದ ಸಾರ್ವಜನಿಕ ಮಾಧ್ಯಮ, ನಿಯತಕಾಲಿಕೆಗಳು, ಪತ್ರಿಕೆಗಳು ಹಾಗೂ ದೂರದರ್ಶನ ಮಾಧ್ಯಮಗಳಿಂದ ಮೋಸ ಹೋಗುವುದನ್ನು ತಪ್ಪಿಸುವ ಕೆಲಸ ಆಗಬೇಕಾಗಿದೆ. ಅದಲ್ಲದೆ ಹಲವಾರು ಸಲ ವೈಮನಸ್ಸುಗಳನ್ನು ಪರಿಹರಿಸುವಲ್ಲಿ ತಗಲುವ ಶ್ರಮ ಮತ್ತು ವೆಚ್ಚ ಹೆಚ್ಚಾಗಿ ಗ್ರಾಹಕನಿಗೆ ಸಿಗಬೇಕಾದ ನ್ಯಾಯ ಸರಿಯಾಗಿ ಸಿಗದೆ ಆತ ನಿರಾಶನಾಗುತ್ತಿದ್ದಾನೆ.

ಆರೋಗ್ಯಕರ ಆರ್ಥಿಕ ವ್ಯವಸ್ಥೆಗೆ ಗ್ರಾಹಕರ ಹಿತರಕ್ಷಣೆ ಅತ್ಯವಶ್ಯವಾದುದು. ಇದು ಗ್ರಾಹಕನಿಗೆ ಶಕ್ತಿಯನ್ನು ಒದಗಿಸಿ ಗ್ರಾಹಕ ಹಾಗೂ ವ್ಯಾಪಾರಿಯ ನಡುವೆ ಸಮತೋಲನವನ್ನು ಕಾಯ್ದುಕೊಳ್ಳಲು ಸಹಾಯಕವಾಗುತ್ತದೆ. ಗ್ರಾಹಕನಿಗೆ, ಆರೋಗ್ಯಕ್ಕೆ ಹಾನಿ ಉಂಟುಮಾಡುವ ಅಹಿತಕರವಾದ ವ್ಯಾಪಾರ ಆಚರಣೆಗಳ ಎಲ್ಲ ತೆರನಾದ ಕಲುಸಿತ ವಾತಾವರಣಗಳ ಹಾಗೂ ಅಹಿತಕರವಾದ ವ್ಯಾಪಾರಿ ಚಟುವಟಿಕೆಗಳ ವಿರುದ್ಧ ಹಿತರಕ್ಷಣೆ ಬೇಕಾಗಿದೆ.

೬.೧ ಫಲಿತಗಳು:

ಸಮಾರೋಪ ಅಧ್ಯಾಯವು ಸಂಶೋಧನೆಯ ಪ್ರಮುಖ ಫಲಿತಗಳನ್ನು ಒಳಗೊಂಡಿದೆ. ಆ ಫಲಿತಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧. ಮೂರನೇ ಅಧ್ಯಾಯದಲ್ಲಿ ಗ್ರಾಹಕ ಪದದ ಅರ್ಥವನ್ನು ವಿಶ್ಲೇಷಿಸಲಾಗಿದೆ. ಈ ಪದದ ವ್ಯಾಖ್ಯೆಗೆ ಸಂಬಂಧಿಸಿದ ಗುಣಲಕ್ಷಣಗಳನ್ನು ಹೊಂದಿದ ಗ್ರಾಹಕ ಮಾತ್ರ ಗ್ರಾಹಕ ವೇದಿಕೆಯ ವ್ಯಾಪ್ತಿಯಲ್ಲಿ ಬರುತ್ತಾನೆ. ಗ್ರಾಹಕ ವೇದಿಕೆಯ ಸೌಲಭ್ಯ ಪಡೆಯಲು, ಗ್ರಾಹಕನು ಖರೀದಿಯ ವಸ್ತುವಿಗೆ ಅಥವಾ ಸೇವೆಗೆ ಬೆಲೆಯನ್ನು ಕೊಡಬೇಕು. ಗ್ರಾಹಕ ಎನಿಸಿಕೊಳ್ಳಲು ಕೇವಲ ಬೆಲೆ ಮಾತ್ರ ಮಾನದಂಡವಾಗಬಾರದು. ನೈಸರ್ಗಿಕವಾಗಿ ದೊರೆಯುವ ವಸ್ತುಗಳಿಗೆ, ಸೇವೆಗೆ ನಾವು ಯಾವುದೇ ಬೆಲೆಯನ್ನು ಕೊಡುವುದಿಲ್ಲ. ಆದರೇ ಪ್ರತಿ ನಾಗರಿಕನಿಗೆ ನೈಸರ್ಗಿಕವಾಗಿ ದೊರೆಯುವ ಸಂಪನ್ಮೂಲಗಳ ಮೇಲೆ ಹಕ್ಕಿರುತ್ತವೆಂಬುದು ಸ್ಪಷ್ಟ.

೨. ಸಾಮಾನ್ಯವಾಗಿ ಗ್ರಾಹಕತ್ವದ ಅರ್ಥವನ್ನು ಗ್ರಾಹಕ ಸಂರಕ್ಷಣೆ ಮತ್ತು ಅತಿರೇಕದ ವಾಸ್ತವವಾದ ಎಂದು ವಿಶ್ಲೇಷಿಸಿದೆ. ಗ್ರಾಹಕತ್ವ ಎಂದರೆ ಗ್ರಾಹಕನಿಗೆ ತನ್ನ ಹಕ್ಕು ಮತ್ತು ಕರ್ತವ್ಯಗಳ ಅರಿವು ಇದ್ದು ಅನ್ಯಾಯಗಳ ವಿರುದ್ಧ ಕಾರ್ಯೋನ್ಮುಖನಾಗುವುದು. ಗ್ರಾಹಕತ್ವದ ಅರ್ಥವು ಬದಲಾದ ಸಮಾಜದ ಜೊತೆ ಬದಲಾಗುತ್ತ ಹೋಗುತ್ತದೆ. ಇದು ಎಲ್ಲ ಕಾಲಕ್ಕೆ ಒಂದೇ ಅರ್ಥವನ್ನು ನೀಡುವುದಿಲ್ಲ. ಜಾಗತೀಕರಣದ ದಾರಿಯಲ್ಲಿರುವ ವಿಶ್ವ ಕೂಡ ಅದಕ್ಕೆ ಹೊಂದುವಂತಹ ಗ್ರಾಹಕತ್ವದ ಅರ್ಥವನ್ನು ಪರಿಗಣಿಸಬೇಕಾಗಿದೆ. ಬೇರೆ ದೇಶಗಳಿಗೆ ಅನ್ವಯಿಸುವ ಗ್ರಾಹಕತ್ವವನ್ನು ಈಗ ಭಾರತ ಒಪ್ಪಿಕೊಳ್ಳಬೇಕಾಗಿದೆ. ಈಗಿನ ಗ್ರಾಹಕತ್ವ ಬಳಕೆಗಿಂತ ಹೆಚ್ಚಾಗಿ ಕಾಪಾಡುವಿಕೆಗೆ ಸಂಬಂಧಿಸಿದ್ದಾಗಿದೆ. ಮಾರುಕಟ್ಟೆ ಈಗ ಗ್ರಾಹಕನಿಗೆ ಸಂಬಂಧಿಸಿರದೆ ಜನತೆಗೆ ಅನ್ವಯಿಸಿರುವುದರಿಂದ ಗ್ರಾಹಕ ಚಳುವಳಿ ಜನಸಾಮಾನ್ಯರಿಗೆ ಅನ್ವಯ ಆಗತೊಡಗಿದ್ದು ಅದರ ವೈಶಾಲ್ಯತೆ ವಿಸ್ತಾರಗೊಳ್ಳುವದನ್ನು ಕಂಡುಕೊಳ್ಳಲಾಯಿತು. ಹಿಂದಿನ ಗ್ರಾಹಕತ್ವದ ಅರ್ಥದ ಬದಲಾಗಿ ನಾವೆಲ್ಲ ಹೊಸ ಗ್ರಾಹಕತ್ವದ ಅರ್ಥವನ್ನು ಒಪ್ಪಿಕೊಳ್ಳಬೇಕಾಗಿದೆ.

೩. ಅಧ್ಯಾಯ ಮೂರರಲ್ಲಿ ವಿವರಿಸಲಾದ ಗ್ರಾಹಕ ಸಂರಕ್ಷಣೆಗೆ ಸಂಬಂಧಿಸಿದ ಹಲವು ಶಾಸನಗಳು, ಗ್ರಾಹಕನ ಹಕ್ಕುಗಳಿಗೆ ರಕ್ಷಣೆ ಒದಗಿಸಲು ವಿಫಲವಾಗಿವೆ. ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆಯಾಗಿ, ಎಲ್ಲ ದೇಶಗಳ ವ್ಯಾಪಾರಿ ಮಾರುಕಟ್ಟೆಗಳು ಮುಕ್ತವಾದಾಗ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಸ್ಥಾಪನೆಯಾಗತೊಡಗಿವೆ. ಅವುಗಳ ದುರಾಡಳಿತದಲ್ಲಿ ಗ್ರಾಹಕ ನಲುಗುತ್ತಿದ್ದಾನೆ. ಮಾರುಕಟ್ಟೆಯ ಮೇಲೆ ಪ್ರಭಾವಿ ನಿರ್ಬಂಧಗಳನ್ನು ಹಾಕಲಾರದೆ ಗ್ರಾಹಕನ ಕಲ್ಯಾಣ ಅಸಾಧ್ಯ. ನಮ್ಮ ದೇಶದಲ್ಲಿ ಗ್ರಾಹಕ ಸಂರಕ್ಷಣೆಯು ಎರಡು

ದೃಷ್ಟಿಕೋನಗಳನ್ನು ಒಳಗೊಂಡಿದೆ. ಒಂದು ಬದಿಯಲ್ಲಿ ಸಮಾಜದ ಒಂದು ವರ್ಗದ ಜನರಿಗೆ ಜೀವನದ ಅವಶ್ಯಕತೆ ಒದಗಿಸುವುದು ಒಂದಾದರೆ, ಇನ್ನೊಂದು ವರ್ಗದ ಜನರ ಮಾರುಕಟ್ಟೆಯ ಹಕ್ಕುಗಳನ್ನು ರಕ್ಷಿಸುವುದೆ, ಮತ್ತೊಂದಾಗಿದೆ. ಇವೆರಡರ ತಿಳುವಳಿಕೆ ನಮ್ಮ ಗ್ರಾಮೀಣ ಜನತೆಗೆ ಇಲ್ಲದಿರುವುದು ವಿಪರ್ಯಾಸದ ಸಂಗತಿಯನ್ನು ಕಂಡುಕೊಳ್ಳಲಾಯಿತು.

೪. ಗ್ರಾಹಕ ಸಂರಕ್ಷಣಾ ಕಾಯ್ದೆಯು, ಯಾವುದೇ ವ್ಯಕ್ತಿಯು ವಸ್ತು ಅಥವಾ ಸೇವೆಯನ್ನು ಬೆಲೆತೆತ್ತು ಪಡೆದಾಗ ಮಾತ್ರ ಅನ್ವಯಿಸುತ್ತದೆ. ಅಂದರೆ ಸಾಮಾನ್ಯ ಜನರು ಬೆಲೆ ಕೊಡದೆ ಉಪಯೋಗಿಸಿದ ವಸ್ತು ಅಥವಾ ಸೇವೆ ಈ ಕಾಯ್ದೆ ವ್ಯಾಪ್ತಿಗೆ ಒಳಪಡುವುದಿಲ್ಲಾ. ಆದರೆ ಈ ಕಾಯ್ದೆಯ ಉದ್ದೇಶಗಳಾದ ಸರಳವಾಗಿ ಕಡಿಮೆ ಖರ್ಚಿನಲ್ಲಿ ಮತ್ತು ಅಸಂಪ್ರದಾಯಿಕ ರೀತಿಯಲ್ಲಿ ನ್ಯಾಯ ಒದಗಿಸುವಲ್ಲಿ ಯಶಸ್ಸು ಕಾಣದಿರುವುದು ಕಂಡು ಬರುತ್ತದೆ.

೫. ಅತಿ ಸಣ್ಣ ಪ್ರಮಾಣದ ಪರಿಹಾರ ಕೋರಿ ಅರ್ಜಿ ಸಲ್ಲಿಸವರಿಗೆ ಶುಲ್ಕ ವಿಧಿಸಿದರೆ ಗ್ರಾಹಕರಲ್ಲಿ ಉತ್ಸಾಹ, ಗ್ರಾಹಕ ಅಂದೋಲನ ಕುಂಟಿತವಾಗಬಹುದು. ಆದ್ದರಿಂದ ಶುಲ್ಕ ವಿನಾಯತಿ ನೀಡುವಂತೆ ಅನೇಕ ಸಂಘ ಸಂಸ್ಥೆಗಳು ದೂರು ಸಲ್ಲಿಸಿದಾಗ ಕೇಂದ್ರ ಸರ್ಕಾರ ೧೧.೨.೨೦೦೫ ರಂದು ಮತ್ತೊಂದು ತಿದ್ದುಪಡಿತಂದು ಶುಲ್ಕವನ್ನು ಜಾರಿಗೆ ತರಲು ರಾಜ್ಯ ಪತ್ರದಲ್ಲಿ ಘೋಷಣೆ ಮಾಡಿತು.

೬. ಶುಲ್ಕಿನ ಕುರಿತು ಕರ್ನಾಟಕ ರಾಜ್ಯ ಸರ್ಕಾರ ಕೆಲವು ನಿಬಂಧನೆಗಳನ್ನು ಜಾರಿಗೆಗೊಳಿಸದರಿವುದರಿಂದ ಇದನ್ನರಿತ ರಾಜ್ಯ ಆಯೋಗ ಗ್ರಾಹಕರಿಂದ ಶುಲ್ಕ ಪಡೆಯುವುದುನ್ನು ತಾತ್ಕಾಲಿವಾಗಿ ತಡೆಹಿಡಿದಿದೆ.

೭. ದೇಶದ ಎಲ್ಲಾ ರಾಜ್ಯ ಆಯೋಗಗಳು ಹಾಗು ಜಿಲ್ಲಾವೇದಿಕೆಗಳು ಅನುಪಾತಕ್ಕೆ (೧:೭) (ಬಿ) ಕರ್ನಾಟಕದ ರಾಜ್ಯ ಆಯೋಗ ಹಾಗು ಜಿಲ್ಲಾವೇದಿಕೆಗಳ ಅನುಪಾತವನ್ನು (೧:೩೧) ಹೋಲಿಸಿದಾಗ: "ಕರ್ನಾಟಕದ ರಾಜ್ಯ ಆಯೋಗದ ಕೆಳಗೆ ಹೆಚ್ಚಿನ ಜಿಲ್ಲಾ" ವೇದಿಕೆಗಳು ಕಾರ್ಯನಿರ್ವಹಿಸುತ್ತ ಗ್ರಾಹಕರಿಗೆ ಸಾಧ್ಯವಾದ ನ್ಯಾಯವನ್ನು ಒದಗಿಸಿ ಕೊಡಲು ಕಾರ್ಯತತ್ಪರವಾಗಿವೆ ಎಂದು ಕಂಡುಕೊಳ್ಳಲಾಗಿದೆ.

೮. ೩೧ ಗ್ರಾಹಕರ ವೇದಿಕೆಗಳ ತೀರ್ಪುಗೊಂಡ ವ್ಯಾಜಗಳ ಶೇಕಡಾ ೯೫. ಬೆಳಗಾವಿ ಜಿಲ್ಲಾವೇದಿಕೆಯ ತೀರ್ಪುಗೊಂಡ ವ್ಯಾಜ್ಯಗಳ ೯೭%. ಬೆಳಗಾವಿ ಗ್ರಾಹಕ ವೇದಿಕೆಯ ತೀರ್ಪುಗೊಂಡ ವ್ಯಾಜ್ಯಗಳ ಶೇಕಡಾವಾರಕ್ಕೂ ಹಾಗೂ ಕರ್ನಾಟಕ ರಾಜ್ಯದ ಎಲ್ಲ ೩೧ ಗ್ರಾಹಕವೇದಿಕೆಗಳಲ್ಲಿ ಇತ್ಯರ್ಥಗೊಂಡ ವ್ಯಾಜ್ಯಗಳ ಶೇಕಡಾವಾರಕ್ಕೂ ತುಲನೆ ಮಾಡಿದರೆ,

ಬೆಳಗಾವಿ ಗ್ರಾಹಕ ವೇದಿಕೆ ತುಲನಾತ್ಮಕವಾಗಿ ವ್ಯಾಜ್ಯಗಳನ್ನು ಪರಿಹರಿಸುವಲ್ಲಿ ಮುಂದಿದೆ. [ಕೋಷ್ಟಕ ೪.೧]

೯. ೧೯೮೯ ರಿಂದ ೨೦೦೯ ರ ವರೆಗಿನ ದಾಖಲಾಗಿ ಪರಿಹಾರ ಸಿಕ್ಕ ವ್ಯಾಜ್ಯಗಳಲ್ಲಿ ೬೪.೫% ಗ್ರಾಹಕರ ಪರವಾಗಿ ಬೆಳಗಾವಿ ಜಿಲ್ಲಾವೇದಿಕೆ ತೀರ್ಪು ನೀಡಿದೆ. ಮತ್ತು ೩೫.೫% ಗ್ರಾಹಕರ ವಿರುದ್ಧವಾಗಿ ತೀರ್ಪು ಕೊಟ್ಟಿದೆ. ಇದರಿಂದ ಬೆಳಗಾವಿ ಜಿಲ್ಲಾ ವೇದಿಕೆಯು ಗ್ರಾಹಕರ ಅಳಲನ್ನು ಕುಲಂಕಷವಾಗಿ ಪರಿಸೀಲಿಸಿ ವ್ಯಾಜ್ಯಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿದೆ ಎಂದು ತಿಳಿಯುತ್ತದೆ. [ಕೋಷ್ಟಕ ೪.೨]

೧೦. ೨೦೦೯ ರ ವರೆಗೆ ಪರಿಹಾರ ಪಡೆದ ವ್ಯಾಜ್ಯಗಳಲ್ಲಿ ಕೇವಲ ೧೭೧ ವ್ಯಾಜ್ಯಗಳು (೨.೮೮%) ತಾಂತ್ರಿಕ ವ್ಯಾಜ್ಯಗಳ ಅಡಿಯಲ್ಲಿ ಪರಿಹಾರ ಕಂಡುಕೊಂಡಿವೆ. ಬೆಳಗಾವಿ ಗ್ರಾಹಕ ವೇದಿಕೆಯು ವ್ಯಾಜ್ಯಗಳನ್ನು ಕುಲಂಕಷವಾಗಿ ಪರಿಶೀಲಿಸಿ ವಸ್ತುಗಳನ್ನು ಅವಶ್ಯವಿದ್ದರೆ ಮಾತ್ರ ಪ್ರಯೋಗ ಶಾಲೆಗೆ ಕಳುಹಿಸುವ ಏರ್ಪಾಡನ್ನು ಮಾಡುತ್ತದೆ. ಪ್ರತಿಶತ ೯೭% ವ್ಯಾಜ್ಯಗಳನ್ನು ಪರಿಹಾರ ಕೋರುವ ಅಥವಾ ಎದುರು ಪಕ್ಷಕ್ಕಾಗಲಿ ನಿರೀಕ್ಷಿಸಲು ಹಚ್ಚದೆ ವ್ಯಾಜ್ಯವನ್ನು ಪರಿಹರಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಿದೆ [ಕೋಷ್ಟಕ ೪.೩]

೧೧. ೧೯೮೯ ರಿಂದ ೨೦೦೯ ರವರೆಗೆ ಇಪ್ಪತ್ತು ವರ್ಷದಲ್ಲಿ ಜಿಲ್ಲಾವೇದಿಕೆ ದಾಖಲು ಮಾಡಿಕೊಂಡು ಪರಿಹಾರ ನೀಡಿದ ವ್ಯಾಜ್ಯಗಳಲ್ಲಿ ೪೪% ರಷ್ಟು ೯೦ ದಿನಗಳೊಳಗೆ ವ್ಯಾಜ್ಯಗಳನ್ನು ಪರಿಹರಿಸಿವೆ. ಹಾಗೆಯೇ ೧೫೦ ದಿನಗಳೊಳಗಾಗಿ ೧೬% ವ್ಯಾಜ್ಯಗಳಿಗೆ ಪರಿಹಾರ ದೊರೆತಿದೆ. ೧೫೦ ದಿನಗಳಿಗಿಂತ ಹೆಚ್ಚಿನ ಅವಧಿಯನ್ನು ತೆಗೆದುಕೊಂಡು ೪೦% ರಷ್ಟು ವ್ಯಾಜ್ಯಗಳು ಪರಿಹಾರ ಕಂಡುಕೊಂಡಿವೆ. [ಕೋಷ್ಟಕ ೪.೪]

೧೨. ಹಲವು ಕಾರಣಗಳಿಂದ ಬೆಳಗಾವಿ ಜಿಲ್ಲಾವೇದಿಕೆಯಲ್ಲಿ ಇತ್ಯರ್ಥವಾಗದೆ ಉಳಿದ ವ್ಯಾಜ್ಯಗಳನ್ನು ತ್ವರಿತ ಗತಿಯಲ್ಲಿ ಇತ್ಯರ್ಥಗೊಳಿಸಲು ಕೈಕೊಂಡ ಕಾರ್ಯದಿಂದ ೬೪% ರಷ್ಟು ವ್ಯಾಜ್ಯಗಳನ್ನು ೯೦ ದಿನಗಳೊಳಗೆ ಇತ್ಯರ್ಥಗೊಳಿಸಲಾಗಿದೆ. ೧೫% ರಷ್ಟು ವ್ಯಾಜ್ಯಗಳನ್ನು ೯೦ ದಿನಗಳಿಂದ ಆರುತಿಂಗಳಲ್ಲಿ ಪರಿಹಾರ ನೀಡಿದೆ. ೨೧% ರಷ್ಟು ವ್ಯಾಜ್ಯಗಳನ್ನು ಆರು ತಿಂಗಳಿನಿಂದ ಒಂದು ವರ್ಷದಲ್ಲಿ ಪರಿಹರಿಸಲಾಗಿದೆ. ಬೆಳಗಾವಿ ಜಿಲ್ಲಾ ವೇದಿಕೆಯು ತನ್ನ ಕಾರ್ಯ ವಿಧಾನದಲ್ಲಿ ತನ್ನ ವ್ಯಾಪ್ತಿಗೆ ಹೊಂದುವಂತೆ ವ್ಯಾಜ್ಯಗಳನ್ನು ಪರಿಹರಿಸುತ್ತಿದೆ. ಇಲ್ಲಿಯವರೆಗೆ ಒಂದೇ ಒಂದು ವ್ಯಾಜ್ಯ ಕಾರಣಾಂತರಗಳಿಂದ ಎರಡು ವರ್ಷದವರೆಗೆ ಇತ್ಯರ್ಥವಾಗದೆ ಉಳಿದ ನಂತರ ಪರಿಹಾರ ಕಂಡುಕೊಂಡಿದೆ. ಆದ್ದರಿಂದ ಬೆಳಗಾವಿ ಜಿಲ್ಲಾ ವೇದಿಕೆಯು ತನ್ನ ಕಾರ್ಯ ವಿಧಾನದಲ್ಲಿ ತನ್ನ ವ್ಯಾಪ್ತಿಗೆ ಹೊಂದುವಂತೆ ವ್ಯಾಜ್ಯಗಳನ್ನು ಪರಿಹರಿಸುತ್ತಾ ಗ್ರಾಹಕ ಸ್ನೇಹಿಯಾಗಿ ಹೊರಹೊಮ್ಮಿದೆ ಎಂಬ ಅಂಶ ತಿಳಿದುಬರುತ್ತದೆ [ಕೋಷ್ಟಕ ೪.೫]

೧೩. ಬೆಳಗಾವಿ ಜಿಲ್ಲಾವೇದಿಕೆಯಲ್ಲಿ ದಾಖಲಾದ ವ್ಯಾಜ್ಯಗಳನ್ನು ಜಿಲ್ಲಾವೇದಿಕೆ ಸ್ಥಾಪಿತವಾದ ವರ್ಷವನ್ನು (೧೯೮೯) ಹೊರತುಪಡಿಸಿ ಉಳಿದೆಲ್ಲ ವರ್ಷಗಳ ಅವಧಿಯಲ್ಲಿಯ ದಾಖಲಾತಿಯಲ್ಲಿ ಹೆಚ್ಚಿನ ಏರಿಕೆ ಇದೆ.

೧. ೧೯೮೯ ರಿಂದ ೧೯೯೪ ರ ವರೆಗೆ ೧೪೬೫ ವ್ಯಾಜ್ಯಗಳು ದಾಖಲಾಗಿ ೧೨.೨೯% ಇದೆ.

೨. ೧೯೯೫ ರಿಂದ ೧೯೯೯ ರ ವರೆಗೆ ೧೩೬೮ ವ್ಯಾಜ್ಯಗಳು ದಾಖಲಾಗಿವೆ ೨೧.೪%

೩. ೨೦೦೦ ರಿಂದ ೨೦೦೪ ರ ವರೆಗೆ ೧೪೮೮೪ ವ್ಯಾಜ್ಯಗಳು ದಾಖಲಾಗಿವೆ ೨೩.೨೪%.

೪. ೪. ೨೦೦೫ ರಿಂದ ೨೦೦೯ ರ ವರೆಗೆ ೨೦೬೪ ವ್ಯಾಜ್ಯಗಳು ದಾಖಲಾಗಿವೆ ೩೨.೩೪% [ಕೋಷ್ಟಕ ೪.೬]

೧೪ ಬೆಳಗಾವಿ ಜಿಲ್ಲಾ ವೇದಿಕೆಯ ಒಟ್ಟು ೨೦ ವರ್ಷಗಳ ವ್ಯಾಜ್ಯ ದಾಖಲಾತಿ, ಇತ್ಯರ್ಥಗೊಂಡ ಮತ್ತ ಇತ್ಯರ್ಥಗೊಳ್ಳದ ಅಂಕಿ ಅಂಶಗಳಿಂದ ಕಂಡುಕೊಂಡ ಅಂಶವೇನೆಂದರೆ, ಮೊದಲಿನ ೧೮ ವರ್ಷಗಳಲ್ಲಿ ಇತ್ಯರ್ಥಗೊಳ್ಳದ ಯಾವುದೇ ವ್ಯಾಜ್ಯಗಳು ಇರಲಾರದ್ದು ಕಾರ್ಯಕ್ಷಮತೆಗೆ ಹಿಡಿದ ಕನ್ನಡಿ. ಇನ್ನುಳಿದ ಎರಡು ವರ್ಷಗಳಲ್ಲಿಯೂ ಸಹ ೨೦೦೮ ನ್ನು ಹೊರತುಪಡಿಸಿ ಇತ್ಯರ್ಥಗೊಳ್ಳದ ವ್ಯಾಜ್ಯಗಳು ಅತೀ ಕನಿಷ್ಠ (೨%) ಸಂಖ್ಯೆಯಲ್ಲಿವೆ [ಕೋಷ್ಟಕ ೪.೭]

೧೫. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರಲ್ಲಿ ಜಾರಿಗೆ ಬಂದಿತು. ನಂತರ ಎರಡು ಸಲ ಅದರ ತಿದ್ದುಪಡಿ ಮಾಡಲಾಯಿತು. ೧೯೯೩ ರಲ್ಲಿ ಮತ್ತು ೨೦೦೨ ರ ತಿದ್ದುಪಡಿ ಕಾಯ್ದೆ ಜಾರಿಗೆ ಬಂದಿದ್ದು ೧೫.೦೩.೨೦೦೩ ರಲ್ಲಿ ತಿದ್ದುಪಡಿ ಕಾನೂನಿನ ಪ್ರಕಾರ ವ್ಯಾಜ್ಯ ದಾಖಲಾದ ೨೧ ದಿನಗಳೊಳಗೆ ಗ್ರಾಹಕ ವೇದಿಕೆ ಇತ್ಯರ್ಥಗೊಳಿಸಬೇಕು. ವಿರುದ್ಧ ಪಕ್ಷದವರಿಗೆ ೨೧ ದಿನಗಳೊಳಗೆ ವೇದಿಕೆಗೆ ತಮ್ಮ ಹೇಳಿಕೆಯನ್ನು ಪ್ರಸ್ತುತಪಡಿಸಲು, ವ್ಯಾಜ್ಯದ ಒಂದು ಪ್ರತಿಯನ್ನು ವೇದಿಕೆ ಕಳುಹಿಸಬೇಕು. ಕೋಷ್ಟಕ ೪.೮ರಲ್ಲಿ ಬೆಳಗಾವಿ ಗ್ರಾಹಕ ವೇದಿಕೆಯ ಮಾಹಿತಿ ನೀಡಲಾಗಿದೆ. ೨೦೦೨ ರ ತಿದ್ದುಪಡಿ ಕಾನೂನಿನ ಪ್ರಕಾರ ಬೆಳಗಾವಿ ಗ್ರಾಹಕ ವೇದಿಕೆ ದಾಖಲು ಮಾಡಿಕೊಂಡ (೧೫.೩.೨೦೦೩ ರಿಂದ ೩೧.೧೨.೨೦೦೯ ರ ವರೆಗೆ) ವ್ಯಾಜ್ಯಗಳು ೧೯೧೫ ಅವುಗಳಲ್ಲಿ ೨೧ ದಿನಗಳಲ್ಲಿ ಇತ್ಯರ್ಥ ಮಾಡಿದ ವ್ಯಾಜ್ಯಗಳು ೪೦೭ [ಕೋಷ್ಟಕ ೪.೮]

೧೬. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ಕಾನೂನಿನ ಪರಿಚ್ಛೇದ ೨೫ ರ ಅನುಸಾರ ಬೆಳಗಾವಿ ಗ್ರಾಹಕ ವೇದಿಕೆ, ತನ್ನ ವಿಶೇಶ ಹಕ್ಕನ್ನು ಚಲಾಯಿಸಿ ಮಧ್ಯಂತರ ಆದೇಶವನ್ನು ಕೊಟ್ಟಿದೆ. ವ್ಯಾಜ್ಯದಲ್ಲಿರುವ ಪರಿಹಾರಕ್ಕಾಗಿ ಗ್ರಾಹಕ ವೇದಿಕೆ, ಎದುರು ಪಕ್ಷದವರ ಆಸ್ತಿಯನ್ನು ಮುಟ್ಟುಗೋಲು ಹಾಕುತ್ತದೆ. ಈ ವಿಶೇಷ ಹಕ್ಕನ್ನು "ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ರ ತಿದ್ದುಪಡಿ ಕಾಯ್ದೆ ೧೯೯೩ ಹಾಗು ೨೦೦೨ ರಿಂದ ಜಾರಿ ಬಂದಿದೆ ಪರಿಚ್ಛೇದ ೨೫ರ

ಅನುಸಾರವಾಗಿ ಗ್ರಾಹಕ ವೇದಿಕೆ ಪ್ರಾರಂಭವಾದ ವರ್ಷದಿಂದ ३೧.೧೨.೨೦೦೯ ರ ವರೆಗೆ ೭೭ ವ್ಯಾಜ್ಯಗಳಿಗೆ  ಅರ್ಜಿ ಜಾರಿಮಾಡಿದೆ. ಅವುಗಳಲ್ಲಿ ೭३ ವ್ಯಾಜ್ಯಗಳು ಇತ್ಯರ್ಥಗೊಂಡು ಪರಿಹಾರವಾಗಿ ಉಳಿದ ವ್ಯಾಜ್ಯಗಳು ಕೇವಲ ೪. ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯ ಪರಿಹರಿಸುವ ನಿಟ್ಟಿನಲ್ಲಿ ಈ ವಿಷೇಶವಾದ ಕಲಂನ್ನು ಉಪಯೋಗ ಮಾಡುತ್ತಿದೆ. ಇದರಿಂದ ವ್ಯಾಜ್ಯಗಳು ಸರಿಯಾಗಿ ಇತ್ಯರ್ಥಗೊಳ್ಳುತ್ತಿವೆ. [ಕೋಷ್ಟಕ ೪.೯]

೧೭. ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲಂ ೨೭ ರ ಅನುಸಾರ ಎದುರು ಪಕ್ಷದವರು ಗ್ರಾಹಕ ವೇದಿಕೆ ಕೊಟ್ಟ ಆದೇಶನ್ನು ಮನ್ನಿಸದೆ ನಿರ್ಲಿಕ್ಷಿಸಿದರೆ, ಗ್ರಾಹಕ ವೇದಿಕೆ ಮೂರು ವರ್ಷ ಜೈಲು ಶಿಕ್ಷೆ ಅಥವಾ ರೂ ೧೦,೦೦೦ ದಂಡ ಅಥವಾ ಎರಡನ್ನು ವಿಧಿಸಬಹುದು. ಬೆಳಗಾವಿ ಗ್ರಾಹಕ ವೇದಿಕೆಯು ಇಂಥಹ ವ್ಯಾಜ್ಯಗಳನ್ನು ಕೈಗೆತ್ತಿಕೊಳ್ಳುತ್ತದೆ. ಗ್ರಾಹಕ ವೇದಿಕೆ ಸ್ಥಾಪಿತವಾದ ವರ್ಷ ೨೦೦३ ರಿಂದ ३೧.೧೨.೨೦೦೮ ರ ವರೆಗೆ ೧೧೯೬ ಅರ್ಜಿ ಜಾರಿ ಮಾಡಿದೆ ಅವುಗಳಲ್ಲಿ ೧೦೦೦ ಅರ್ಜಿಗಳು ಇತ್ಯರ್ಥಗೊಂಡು, ಇತ್ಯರ್ಥವಾಗದೆ ಇರುವ ಅರ್ಜಿಗಳು ಕೇವಲ ೧೯೬. ಮೇಲಿನ ಮಾಹಿತಿಯಿಂದ ತಿಳಿಯುವುದು ಏನೆಂದರೆ ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಲಂ ೨೭ನ್ನು ಉಪಯೋಗಿಸಿಕೊಂಡು ದಂಡ ವ್ಯವಹರಣಾ ಕಾಯ್ದೆಯನ್ನು ಅನುಸರಿಸುತ್ತಿರುವುದು ಸ್ಪಷ್ಟವಾಗುತ್ತದೆ.[ಕೋಷ್ಠಕ ೪.೧೦]

೧೮. ಬೆಳಗಾವಿ ಗ್ರಾಹಕ ವೇದಿಕೆ ಜಾರಿ ಮಾಡಿದ ಅರ್ಜಿಗಳನ್ನು ಜಿಲ್ಲಾಧಿಕಾರಿ ಇತ್ಯರ್ಥ ಮಾಡಿದ ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ ಕಲಂ ೨೫ ರ ಅಡಿಯಲ್ಲಿ ಬರುವ ವ್ಯಾಜ್ಯಗಳ ವಿವರ ಇದೆ. ಬೆಳಗಾವಿ ಗ್ರಾಹಕ ವೇದಿಕೆ ಬೆಳಗಾವಿ ಜಿಲ್ಲಾಧಿಕಾರಿ ಕೊಟ್ಟು ಕಳಹಿಸಿದ ಕಲಂ ೨೫ ಅಡಿಯಲ್ಲಿ ಬರುವ ವ್ಯಾಜ್ಯಗಳ ಪ್ರಮಾಣ ಪತ್ರಗಳು ೧೫.३.೧೯೯३ ರಿಂದ ३೧.೧೨.೨೦೦೯ ರವರಗೆ ೫३. ಅವುಗಳಲ್ಲಿ ಜಿಲ್ಲಾಧಿಕಾರಿ ತಮ್ಮ ಒಪ್ಪಿಗೆ ಸೂಚಿಸಿ ಇತ್ಯರ್ಥಗೊಳಿಸಿದ ಉಳಿದ ಅರ್ಜಿಗಳು ३೧ ಹಾಗೂ ಇತ್ಯರ್ಥವಾಗದೇ ಉಳಿದ ಪ್ರಮಾಣಪತ್ರಗಳು ೨೧. ಹಾಗೂ ವಜಾ ಮಾಡಲ್ಪಟ್ಟ ಅರ್ಜಿ ೧. ಇದರಿಂದ ತಿಳಿದುಬರುವುದೇನೆಂದರೆ, ೫೮.೪೯% ರಷ್ಟು ಅರ್ಜಿಗಳು ಇತ್ಯರ್ಥಗೊಂಡಿವೆ. ಹೀಗಾಗಿ ಬೆಳಗಾವಿ ಗ್ರಾಹಕ ವೇದಿಕೆ ಈ ಒಂದು ನಿಟ್ಟಿನಲ್ಲಿ ಯಶಸ್ವಿಯನ್ನು ಕಂಡುಕೊಂಡಿದೆ. [ಕೋಷ್ಠಕ ೪.೧೧]

೧೯. ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಕಲಂ ೨೫ ರ ಅಡಿಯಲ್ಲಿ ಕೇವಲ ೧೧ ವ್ಯಾಜ್ಯಗಳು ಇತ್ಯರ್ಥವಾಗಬೇಕಿದೆ. ಆದರೆ ಕಲಂ ೨೭ ರ ಅಡಿಯಲ್ಲಿ ೧೮೯ ವ್ಯಾಜ್ಯಗಳು ಇತ್ಯರ್ಥವಾಗಬೇಕಿವೆ. ಬೆಳಗಾವಿ ಗ್ರಾಹಕ ವೇದಿಕೆ ಆದೇಶ ಪಾಲಿಸದ ಪಕ್ಷಕ್ಕೆ ದಂಡವಿಧಿಸಿ

ದಂಡ ವ್ಯವಹರಣಾ ಕಾಯ್ದೆಯನ್ನು ಉಪಯೋಗಿಸುವಲ್ಲಿ ಮೀನಮೇಷ ಮಾಡುತ್ತಿವೆ. ಗ್ರಾಹಕ ವೇದಿಕೆ ಪರಿಹಾರ ಒದಗಿಸುವ ನೀತಿಯನ್ನು ಅನುಸರಿಸುತ್ತಿದೆ. [ಕೋಷ್ಟಕ ೪.೧೨]

೨೦. ೩೧.೧೨.೨೦೦೯ ರವರಗೆ ಅರ್ಜಿ ಜಾರಿ ಮಾಡಿ ಪ್ರಮಾಣ ಪತ್ರ ನೀಡಿದೆ. (ಕಲಂ ೨೫ ಹಾಗೂ ಕಲಂ ೨೭ ರ ಗ್ರಾಹಕ ಸಂರಕ್ಷಣೆ ಅನುಸಾರ) ಒಟ್ಟು ಇತ್ಯರ್ಥವಾಗದ ವ್ಯಾಜ್ಯಗಳು ೨೦೦ ಆಗಿವೆ. ೯೦ ದಿನದವರೆಗೆ ಇತ್ಯರ್ಥವಾಗದ ವ್ಯಾಜ್ಯಗಳು ೭೩% ೯೦ ದಿನದಿಂದ ೧೮೦ ದಿನ ಇತ್ಯರ್ಥವಾಗದ ವ್ಯಾಜ್ಯಗಳು ೨೦% ಆರು ತಿಂಗಳಿಂದ ೧ ವರ್ಷದವರೆಗೆ ೪% ಹಾಗೂ ೧ ವರ್ಷದಿಂದ ೨ ವರ್ಷದವರೆಗೆ ೩%. ಬೆಳಗಾವಿ ಗ್ರಾಹಕ ವೇದಿಕೆ ವ್ಯಾಜ್ಯಗಳಿಗೆ ಪರಿಹಾರ ಕೊಡಲು ತುಂಬಾ ಶ್ರಮಿಸುತ್ತಿದೆ ಎನ್ನುವುದು ಸ್ಪಷ್ಟವಾಗುತ್ತದೆ [ಕೋಷ್ಟಕ ೪.೧೩]

೨೧. ವರ್ಷವಾರು ವ್ಯಾಜ್ಯಗಳ ಇತ್ಯರ್ಥಗಳನ್ನು ವಿಶ್ಲೇಷಿಸಿದಾಗ, ೧೯೮೯ ರಿಂದ ೨೦೦೫ ರ ವರೆಗೆ ಇತ್ಯರ್ಥಗೊಳ್ಳದ ಯಾವುದೇ ವ್ಯಾಜ್ಯಗಳು ಇರಲಾರದ್ದು ಕಂಡು ಬರುತ್ತದೆ. ನಂತರದ ಅವಧಿಯಲ್ಲಿ ಅಲ್ಪ ಪ್ರಮಾಣದಲ್ಲಿ ಏರಿಕೆಯಾಗುತ್ತ, ೨೦೦೯ ರಲ್ಲಿ ಅತಿ ಹೆಚ್ಚಿನ (ಶೇ ೮೧) ಮಟ್ಟ ತಲುಪಿದ್ದು ಕಂಡುಬರುತ್ತದೆ. [ಕೋಷ್ಟಕ ೪.೧೪]

೨೨. ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಬ್ಯಾಂಕಿನ ದಾಖಲಾದ ವ್ಯಾಜ್ಯಗಳು ೧೯೮೯ ರಿಂದ ೨೦೦೯ ರವರಗೆ ೪೩೫ ಅವುಗಳಲ್ಲಿ ಇತ್ಯರ್ಥಗೊಂಡ ವ್ಯಾಜ್ಯಗಳು ೪೧೩, ೯೫% ರಷ್ಟು ಪುರೋಭಿವೃದ್ಧಿಯಾಗಿ ಗ್ರಾಹಕ ವೇದಿಕೆ ಇಲ್ಲಿಯವರೆಗೆ ಕಾರ್ಯವನ್ನು ತೃಪ್ತಿಯಾಗಿ ಮಾಡಿದೆ. ಗ್ರಾಹಕ ವೇದಿಕೆಯು ೧೯೮೯ ರಿಂದ ೨೦೦೯ ವರೆಗೆ ರೇಲ್ವೆ ಇಲಾಖೆಯ ವ್ಯಾಜ್ಯಗಳನ್ನು ೯೬% ರಷ್ಟು ಇತ್ಯರ್ಥಗೊಳಿಸುವಲ್ಲಿ ಯಶಸ್ವಿಯಾಗಿದೆ. ಏರಲಾಯನ್ಸ ಕಂಪನಿಯ ದಾಖಲಾದ ಎಲ್ಲ ೯ ವ್ಯಾಜ್ಯಗಳನ್ನು ವೇದಿಕೆ ಇತ್ಯರ್ಥಗೊಳಿಸಿದೆ. ವಿಮಾ ಕಂಪನಿಯ ದಾಖಲಾದ ಎಲ್ಲ ೯ ವ್ಯಾಜ್ಯಗಳನ್ನು ವೇದಿಕೆ ಇತ್ಯರ್ಥಗೊಳಿಸಿದೆ. ವಿಮಾ ಕಂಪನಿಯ ಬೃಹತ ವ್ಯಾಜ್ಯ ದಾಖಲಾತಿ ಸಂಖ್ಯೆಯಾದ ೮೪೯ ರಲ್ಲಿ ೭೭೩ ವ್ಯಾಜ್ಯಗಳನ್ನು ೧೯೮೯ ರಿಂದ ೨೦೦೮ ರವರೆಗೆ ಇತ್ಯರ್ಥಗೊಳಿಸುವಲ್ಲಿ ವೇದಿಕೆ ಸಫಲವಾಗಿದೆ. ೧೯೮೯ರಿಂದ ೨೦೦೯ರವರೆಗೆ ದೂರಸಂಪರ್ಕ ಇಲಾಖೆ ಯ ೨೨೮ ವ್ಯಾಜ್ಯಗಳನ್ನು ನೂರಕ್ಕೆ ನೂರರಷ್ಟು ಪರಿಹರಿಸುವಲ್ಲಿ ಯಶಸ್ವಿಯಾಗಿದೆ. ಈ ಅವಧಿಯಲ್ಲಿಯೇ ದಾಖಲಾದ ಪೋಸ್ಟಲ್ ಡಿಪಾರ್ಟಮೆಂಟಿನ ೭೪ ವ್ಯಾಜ್ಯಗಳಲ್ಲಿ ೭೦ ವ್ಯಾಜ್ಯಗಳು ಇತ್ಯರ್ಥವಾಗಿ ಸುಮಾರು ೯೫% ದಷ್ಟು ಕಾರ್ಯಫಲಿಸಿದೆ. ೧೯೮೯ ರಿಂದ ೨೦೦೯ ರವರೆಗೆ ವಿದ್ಯುತ್ತಶಕ್ತಿ ನಿಗಮದ ೨೬೬ ದಾಖಲಾದ ವ್ಯಾಜ್ಯಗಳಲ್ಲಿ ಎಲ್ಲ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ ಬೆಳಗಾವಿ ಗ್ರಾಹಕವೇದಿಕೆ ತನ್ನ ಕಾರ್ಯದಲ್ಲಿ ಅದ್ಭುತ ಯಶ ಸಾಧಿಸಿದೆ.

ವೈದ್ಯಕೀಯ ನಿರ್ಲಕ್ಷ ಆಧಾರಿತ ಗ್ರೌಂಡಿನ ಅಡಿಯಲ್ಲಿ ದಾಖಲಾದ ೧೧೯ ವ್ಯಾಜ್ಯಗಳಲ್ಲಿ ೧೧೦ ವ್ಯಾಜ್ಯಗಳು ಇತ್ಯರ್ಥವಾಗಿ ಕೇವಲ ೯ ವ್ಯಾಜ್ಯಗಳು ಇತ್ಯರ್ಥವಾಗದೇ ಸುಮಾರು ೯೨% ರಷ್ಟು ಕಾರ್ಯದಲ್ಲಿ ಸಫಲವಾಗಿದೆ. ೧೯೮೯ ರಿಂದ ೨೦೦೯ ರ ಅವಧಿಯಲ್ಲಿ ಬೆಳಗಾವಿ ಗ್ರಾಹಕ ವೇದಿಕೆ ೪೨೫ ವ್ಯಾಜ್ಯಗಳನ್ನು ಕೌಟುಂಬಿಕ ದೋಷಪೂರಿತ ವಸ್ತುಗಳ ಅಡಿಯಲ್ಲಿ ದಾಖಲು ಮಾಡಿಕೊಂಡಿವೆ. ಕೇವಲ ೧೯ ವ್ಯಾಜ್ಯಗಳು ಇತ್ಯರ್ಥವಾಗದೆ ಉಳಿದಿವೆ. ಉಳಿದ ೪೦೬ ವ್ಯಾಜ್ಯಗಳನ್ನು ಪರಿಹರಿಸಲಾಗಿದೆ. ಶೈಕ್ಷಣಿಕ ವ್ಯಾಜ್ಯಗಳನ್ನು ಬೆಳಗಾವಿ ಗ್ರಾಹಕ ವೇದಿಕೆ ದಾಖಲು ಮಾಡಿಕೊಂಡಿದೆ. ೫೭ ವ್ಯಾಜ್ಯಗಳಲ್ಲಿ ಇತ್ಯರ್ಥಗೊಂಡು ೧೦೦% ಕಾರ್ಯದಲ್ಲಿ ಯಶಸ್ವಿಯಾಗಿದೆ. ರಸ್ತೆ ಸಾರಿಗೆ ಸಂಸ್ಥೆಯ ದಾಖಲಾದ ಒಟ್ಟು ವ್ಯಾಜ್ಯಗಳಲ್ಲಿ ೧೩೮ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿ ಕೇವಲ ೫ ವ್ಯಾಜ್ಯಗಳು ಇತ್ಯರ್ಥವಾಗದೆ ಉಳಿದಿವೆ. ಮೇಲಿನ ವಿಭಾಗಗಳಲ್ಲಿ ಬರದೆ ಉಳಿದ ಇತರೆ ವ್ಯಾಜ್ಯಗಳ ದಾಖಲಾಗಿವೆ. ಅದರಲ್ಲಿ ೩೪೯೬ ವ್ಯಾಜ್ಯಗಳು ಪರಿಹಾರ ಕಂಡುಕೊಂಡಿವೆ. ಅಂದರೆ ೯೭% ದಷ್ಟು ವ್ಯಾಜ್ಯಗಳನ್ನು ಇತ್ಯರ್ಥಮಾಡುವ ದೆಸೆಯಲ್ಲಿ ಕಾರ್ಯ ತತ್ಪರವಾಗಿ ೧೯೮೯ ರಿಂದ ೨೦೦೯ ರವರೆಗೆ ಗ್ರಾಹಕ ವೇದಿಕೆ ಎಲ್ಲ ತರಹದ ವ್ಯಾಜ್ಯಗಳನ್ನು ಪರಿಹರಿಸಿ ಗ್ರಾಹಕರಿಗೆ ನ್ಯಾಯ ಒದಗಿಸುವಲ್ಲಿ ಶ್ರಮಿಸಿದೆ [ಕೋಷ್ಟಕ ೪.೧೫]

೨೩. ಗೃಹ ಮತ್ತು ನಿವೇಶನಗಳಿಗೆ ಸಂಬಂಧಿಸಿದಂತೆ ಸರಕಾರೇತರ (ಖಾಸಗಿ) ಕ್ಷೇತ್ರದಲ್ಲಿಯ ವ್ಯಾಜ್ಯಗಳ ದಾಖಲಾತಿ ಪ್ರಮಾಣ ಸರಕಾರಿ ವಲಯಕ್ಕಿಂತಲೂ ಅಧಿಕವಾಗಿರುತ್ತದೆ. ಆದರೆ ಸರಕಾರಿ ವಲಯದ ವ್ಯಾಜ್ಯಗಳಲ್ಲಿ ಇತ್ಯರ್ಥಗೊಳ್ಳದಿರುವ ವ್ಯಾಜ್ಯಗಳ ಪ್ರಮಾಣ ಹೆಚ್ಚಾಗಿರುವುದು (ಶೇ. ೨೮) ವಿಪರ್ಯಾಸದ ವಿಷಯವಾಗಿದೆ. [ಕೋಷ್ಟಕ ೪.೧೬]

೨೪. ಬೆಳಗಾವಿ ಗ್ರಾಹಕ ವೇದಿಕೆ ೧೯೮೯ ರಿಂದ ೨೦೦೯ ರ ವರೆಗೆ ಹಿರಿಯ ನಾಗರಿಕರ ೧೭೨ ವ್ಯಾಜ್ಯಗಳನ್ನು ಹಾಗೂ ೧೧೧ ವ್ಯಾಜ್ಯಗಳನ್ನು ವಿಧವೆಯರಿಂದ ದಾಖಲು ಮಾಡಿಕೊಂಡು ಒಟ್ಟು ೨೮೩ ವ್ಯಾಜ್ಯಗಳಲ್ಲಿ ೨೪೧ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿವೆ. ೨೪೧ ವ್ಯಾಜ್ಯಗಳನ್ನು ಪರಿಹರಿಸಿ ಹಿರಿಯ ನಾಗರಿಕರ ಹಾಗೂ ವಿಧವೆಯರ ವ್ಯಾಜ್ಯಗಳನ್ನು ಇತ್ಯರ್ಥಗೊಳಿಸಿದೆ. ಇತ್ಯರ್ಥವಾಗದ ೪೨ ವ್ಯಾಜ್ಯಗಳಲ್ಲಿ ಕೇವಲ ಆರು ವ್ಯಾಜ್ಯಗಳು ೬ ತಿಂಗಳಿನಿಂದ ಪರಿಹಾರದ ನಿರೀಕ್ಷೆಯಲ್ಲಿದ್ದರೆ, ಉಳಿದ ೩೬ ವ್ಯಾಜ್ಯಗಳು ೬ ತಿಂಗಳಿಗಿಂತ ಕಡುಮೆ ಅವಧಿಯಲ್ಲಿ ದಾಖಲಾದವುಗಳು. ಗ್ರಾಹಕ ವೇದಿಕೆ ಸಮಾಜದ ಸಂಕಷ್ಟದಲ್ಲಿರುವ ಜನರ ಕುರಿತು ಕಳಕಳಿ ಹೊಂದಿದೆ ಎನ್ನುವುದು ಗೊತ್ತಾಗುತ್ತದೆ [ಕೋಷ್ಟಕ ೪.೧೭]

೨೫. ಗ್ರಾಹಕ ಶಾಸನಗಳಲ್ಲಿ ಹೊಂದಾಣಿಕೆ ಇರದೆ ಗ್ರಾಹಕನಿಗೆ ದೊರಕಬೇಕಾದ ನ್ಯಾಯ ದೊರಕುತ್ತಿಲ್ಲ ಎಂಬುದನ್ನು ಕಂಡುಕೊಳ್ಳಬಹುದು. ಉತ್ತಮ ಶಾಸನಗಳಿದ್ದರೂ, ಅವುಗಳ ಪರಿಣಾಮಕಾರಿ ಆಚರಣೆಗೆ ತರಲಾರದ್ದು ಗ್ರಾಹಕನಿಗೆ ನಿರಾಶೆಯಾಗುತ್ತಿರುವುದು ಕಂಡುಬಂದಿದೆ. ಶಾಸನಗಳು ಗ್ರಾಹಕರನ್ನು ಕಾಪಾಡುವಲ್ಲಿ ವಿಫಲವಾಗುತ್ತಿವೆ. ಗ್ರಾಹಕ ಶಾಸನಗಳು ಗ್ರಾಹಕರ ಅಳಲಿಗೆ ಉತ್ತರವಾಗುತ್ತಿಲ್ಲ. ಕಾನೂನು ಪಾಲಿಸುವವರು ಬಲಿಪಶುವಾಗುತ್ತಿರುವುದು ಭಾಸವಾಗುತ್ತದೆ. ಆದರೆ ಶಾಸನಗಳನ್ನು ನಿರ್ಲಕ್ಷಿಸುವವರನ್ನು ಅದು ಏನೂ ಮಾಡದು. ಅಪ್ರಮಾಣಿಕ ಜನರನ್ನು ಬಿಟ್ಟುಬಿಡುವುದರಿಂದ ಶಾಸನಗಳು ಗ್ರಾಹಕರ ಸಂರಕ್ಷಣೆಯಲ್ಲಿ ಸೋಲನ್ನು ಅನುಭವಿಸುತ್ತಿವೆ. [೫.೧]

೨೬. ಗ್ರಾಹಕ ಮಾರ್ಗದರ್ಶಿ ಕೇಂದ್ರವನ್ನು ಕೇಂದ್ರದಲ್ಲಿ, ರಾಜ್ಯದಲ್ಲಿ ಹಾಗೂ ಜಿಲ್ಲೆಗಳಲ್ಲಿ ತೆರೆಯಲಾಗಿದೆಯಾದರೂ, ಅವುಗಳ ಇರುವ ಮಾಹಿತಿಯಾಗಲಿ, ಅವು ಮಾಡುವ ಕೆಲಸಗಳಾಗಲಿ ಸಾಮಾನ್ಯ ಗ್ರಾಹಕರಿಗೆ ಗೊತ್ತಿರುವುದು ಬಹಳ ವಿರಳ. ಆಹಾರ, ನಾಗರಿಕ ಸರಬರಾಜು ಇಲಾಖೆಗೆ ಗ್ರಾಹಕರ ವ್ಯವಹಾರಗಳನ್ನು ಹೊಂದಿಸಿದುದರಿಂದ, ಆ ಇಲಾಖೆಯಲ್ಲಿ ನಿರ್ಲಕ್ಷಿಸುವ ಸಂಭವವೇ ಹೆಚ್ಚು. ಗ್ರಾಹಕ ಮಾರ್ಗದರ್ಶಿ ಕೇಂದ್ರಗಳು ಹಮ್ಮಿಕೊಳ್ಳುವ ಕಾರ್ಯಗಳು ಕೇವಲ ಕಾಗದಗಳಲ್ಲಿ ಉಳಿಯುವ ಸಾಧ್ಯತೆಯೇ ಹೆಚ್ಚು. ಬಹುತೇಕ ಸಚಿವರಿಗೂ ಮತ್ತು ಅಧಿಕಾರಿಗಳಿಗೂ ಸಾರ್ವಜನಿಕ ಆಹಾರ ವಿತರಣೆಯಲ್ಲಿ ಮಾತ್ರ ಹೆಚ್ಚಿನ ಆಸಕ್ತಿ ಇರುವುದು ಕಂಡು ಬರುತ್ತದೆ. [೫.೨]

೨೭. ರಾಜ್ಯದಲ್ಲಿ ಗ್ರಾಹಕರ ಕಲ್ಯಾಣ ನಿಧಿ ಸಮೀತಿ ರಚನೆಯಾಗಿದ್ದು, ಅದರ ನಿರ್ಧಾರಗಳ ಪ್ರಕಾರ ಗ್ರಾಹಕರ ಚಟುವಟಿಕೆಗಳಿಗೆ ಅನುದಾನ ಬಿಡುಗಡೆ ಮಾಡುತ್ತಿರುವುದು ಕಂಡು ಬಂದಿದೆ (೫.೩)

೨೮. ರಾಷ್ಟ್ರದ ಒಟ್ಟಾರೆ ಗ್ರಾಹಕರ ರಕ್ಷಣೆಗಾಗಿ ಕೇಂದ್ರಿಯ ಗ್ರಾಹಕ ರಕ್ಷಣಾ ಪರಿಷತ ಕಾರ್ಯಗೈಯುತ್ತಿರುವುದು ಕಂಡು ಬಂದಂತಹ ಇನ್ನೊಂದು ಅಂಶವಾಗಿದೆ (೫.೪)

೨೯. ಕೇಂದ್ರದ ಗ್ರಾಹಕ ರಕ್ಷಣಾ ಕಾಯ್ದೆ ೧೯೮೬ ರ ಪ್ರಕಾರ ರಾಜ್ಯದಲ್ಲಿ ಆಹಾರ ಹಾಗೂ ನಾಗರಿಕ ಸರಬರಾಜು ಇಲಾಖೆಯಲ್ಲಿ ಗ್ರಾಹಕ ರಕ್ಷಣಾ ಪರಿಷತ್ತು ೧೯೮೭ ರಲ್ಲಿ ಸ್ಥಾಪನೆಗೊಂಡಿತ್ತು, ಆದರೆ ಸರಕಾರದ ಅನುದಾನದ ಕೊರತೆ ಮತ್ತು ಇಲಾಖೆಯ ದಿವ್ಯ ನಿರ್ಲಕ್ಷ್ಯದಿಂದ ಅದರ ಕಾರ್ಯ ನಿಧಾನಗೊಳ್ಳುತ್ತ ೨೦೦೮ ರಲ್ಲಿ ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿತು. ಜಿಲ್ಲಾ ಮಟ್ಟದ ಗ್ರಾಹಕ ರಕ್ಷಣಾ ಪರಿಷತ್ತು ಅಸ್ತಿತ್ವದಲ್ಲಿ ಇಲ್ಲ. ನಮ್ಮ ರಾಜ್ಯದಲ್ಲಿ ೩೧ ಜಿಲ್ಲೆಗಳಿವೆ, ಇವುಗಳಲ್ಲಿ ನಾಲ್ಕು ಜಿಲ್ಲೆಗಳಲ್ಲಿ ಮಾತ್ರ ಗ್ರಾಹಕ ಮಾಹಿತಿ

ಕೇಂದ್ರಗಳಿವೆ. ಇವುಗಳಿಗೂ ಸಹ ಸರಕಾರ ಅನುದಾನ ಬಿಡುಗಡೆ ಮಾಡದೇ ಅವುಗಳನ್ನು ಮುಚ್ಚುವ ಹಂತಕ್ಕೆ ತಂದು ನಿಲ್ಲಿಸಿದೆ. ಇನ್ನೊಂದು ಅಂಶವೆಂದರೆ ಕೆಲವು ರಾಜ್ಯಗಳಲ್ಲಿ ಗ್ರಾಹಕ ಸಹಾಯ ದೂರವಾಣಿಯನ್ನು ಪ್ರಾರಂಭಿಸಿದ್ದು ಕಂಡು ಬರುತ್ತದೆ. ಆದರೆ ಇಂತಹ ಯಾವುದೇ ವ್ಯವಸ್ಥೆ ನಮ್ಮ ರಾಜ್ಯದಲ್ಲಿ ಕಂಡು ಬರುವುದಿಲ್ಲ.

೩೦. ರಾಜ್ಯದಲ್ಲಿನ ವಿದ್ಯಾರ್ಥಿ ಸಮೂಹಕ್ಕೆ ಮತ್ತು ಶಿಕ್ಷಕರಲ್ಲಿ ಗ್ರಾಹಕರಿಗೆ ಸಂಬಂಧಿಸಿದ ವಿಷಯಗಳ ಅರಿವು ಮತ್ತು ಜಾಗೃತಿ ಮೂಡಿಸಲು ಪ್ರೌಢ ಶಿಕ್ಷಣ ಹಂತದಲ್ಲಿ ಒಟ್ಟು ೧೧೫೦ ಶಾಲಾ ಗ್ರಾಹಕ ಕ್ಲಬಗಳನ್ನು ಪ್ರಾರಂಭಿಸಿದ್ದು ಕಂಡು ಬರುತ್ತದೆ. (೫.೭)

೩೧. ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಪ್ರಮುಖವಾಗಿ ಮುಂದೆ ಬಂದು ಹಮ್ಮಿಕೊಳ್ಳುವ ಗ್ರಾಹಕ ಅದಾಲತ ಕುರಿತು ಸಾಮಾನ್ಯ ಗ್ರಾಹಕರಿಗೆ ಗೊತ್ತಿಲ್ಲ. ತಮ್ಮದೆ ಕೆಲಸ ಕಾರ್ಯಗಳ ಒತ್ತಡದಲ್ಲಿರುವ ಇಲಾಖೆಯು ಜಿಲ್ಲಾ ಮಟ್ಟದಲ್ಲಾಗಲಿ, ತಾಲೂಕು ಮಟ್ಟದಲ್ಲಾಗಲಿ, ಹೋಬಳಿ ಮಟ್ಟದಲ್ಲಾಗಲಿ, ಗ್ರಾಮಮಟ್ಟದಲ್ಲಾಗಲಿ ಗ್ರಾಹಕ ಅದಾಲತಗಳನ್ನು ಹಮ್ಮಿಕೊಳ್ಳುತ್ತಿಲ್ಲ. ಸಾಮಾನ್ಯ ಗ್ರಾಹಕರಿಗೆ ಗ್ರಾಹಕ ಅದಾಲತನಿಂದ ಸಿಗುವ ತ್ವರಿತಗತಿಯ ಪರಿಹಾರ ಕರ್ನಾಟಕ ರಾಜ್ಯದಲ್ಲಿ ದೊರಕುತ್ತಿಲ್ಲವೆಂಬುದು ಸಂಶೋಧಕರು ಕಂಡುಕೊಂಡಿದ್ದಾರೆ (೫.೮)

೩೨. ಗ್ರಾಮೀಣ ಪ್ರದೇಶಗಳ ಪಡಿತರ ವಿತರಣಾ ವ್ಯವಸ್ಥೆಯ ಪ್ರಯೋಜನೆಗಳನ್ನು ಸಾರ್ವಜನಿಕರಿಗೆ ತಿಳಿಸಿ ನ್ಯಾಯ ದೊರಕಿಸಿಕೊಡಲು ಆಹಾರ ಖಾತರಿ ಸಮೀತಿ ಹಾಗೂ ಉಪ ಸಮಿತಿಯನ್ನು ರಚಿಸಲಾಗುತ್ತದೆ ಹೀಗಿದ್ದರೂ ಸಹ ಪಡಿತರ ವಿತರಣ ವ್ಯವಸ್ಥೆಯ ಮೇಲ್ವಿಚಾರಕರು ಗ್ರಾಮ ಪಂಚಾಯತಿಯ ಸದಸ್ಯರದ್ದೇ ಆಗಿದೆ. ಆದರೆ ಈ ಮೂರು ವ್ಯವಸ್ಥೆಗಳು ಆಚರಣೆಯಲ್ಲಿ ಒಂದಾಗಿ ಭ್ರಷ್ಟಾಚಾರದಿಂದ ಗ್ರಾಹಕರನ್ನು ವಂಚಿಸುವ ಕಾರ್ಯದಲ್ಲಿ ತೊಡಗಿರುವುದು ಕಂಡು ಬರುತ್ತದೆ. (೫.೯)

೩೩. ಕರ್ನಾಟಕದಲ್ಲಿ ಪ್ರತಿಯೊಂದು ನ್ಯಾಯಬೆಲೆ ಅಂಗಡಿಗೆ ಜಾಗೃತಿ ಸಮೀತಿ ರಚಿಸಲಾಗಿದ್ದರೂ ೫೦೬೬ ಸಮೀತಿಗಳು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸದೆ ಇರುವುದರಿಂದ ಗ್ರಾಮ ಪಂಚಾಯತಗಳಿಗೆ ಇವುಗಳ ಮೇಲ್ವಿಚಾರಣೆಯ ಹೆಚ್ಚಿನ ಕಾರ್ಯಭಾರ ಬಿದ್ದು, ವ್ಯವಸ್ಥೆ ಹದಗೆಡುವ ಪರಿಸ್ಥಿತಿ ಬಂದಿದೆ, ಹಾಗೆಯೇ ಆಹಾರ ಭದ್ರತಾ ಸಮಿತಿಗಳು ಸರಿಯಾಗಿ ಸಭೆ ನಡೆಸದೆ, ಗ್ರಾಮ ಪಂಚಾಯತಿಯ ಜವಾಬ್ದಾರಿ ಹೆಚ್ಚಾಗಿದೆ.

೩೪. ಐದನೆಯ ಅಧ್ಯಾಯದ ೫.೧೧ ರಲ್ಲಿ ಸರ್ಕಾರಿ ಇಲಾಖೆಗಳ ಕಾರ್ಯ ವಿಶ್ಲೇಷಣೆಯನ್ನು ಮಾಡಲಾಗಿದೆ.

ಅ) ಕಾನೂನು ಮಾಪನ ಶಾಸ್ತ್ರ ಇಲಾಖೆಯ ಕಾರ್ಯವನ್ನು ವಿಶ್ಲೇಷಣೆ ಮಾಡಿದಾಗ, ಈ ಇಲಾಖೆ ಗ್ರಾಹಕರ ಕರ್ತವ್ಯಗಳನ್ನು ಬಿಡುಗಡೆ ಮಾಡಿದೆ. ಉದಾ: ಗ್ರಾಹಕ ಮುದ್ರೆಹಾಕಿದ ತೂಕ ಮತ್ತು ಅಳತೆಗಳನ್ನು ಖಚಿತಪಡಿಸಿಕೊಳ್ಳಬೇಕು. ತಕ್ಕಡಿಯ ಸಮತೋಲನ, ಮೆಟ್ರಿಕ ಪದ್ಧತಿಯ ಉಪಯೋಗ ಮುಂತಾದವುಗಳು, ಇವೆಲ್ಲ ಸಾಮಾನ್ಯ ಗ್ರಾಹಕನಿಗೆ ಗೊತ್ತಿರುವುದು ಅಸಾಧ್ಯ. ಇಲಾಖೆಗೆ ಸಂಬಂಧಿಸಿದ ದೂರುಗಳನ್ನು ಇಲಾಖೆಯ ಕಛೇರಿಯಲ್ಲಿ ಕೊಡಬೇಕೆಂಬುದರ ಅರಿವು ಗ್ರಾಹಕರಿಗೆ ಗೊತ್ತಿಲ್ಲದಿರುವುದು ಕಂಡು ಬಂದಿದೆ.

ಆ) ಕರ್ನಾಟಕದ ಜನರಲ್ಲಿ ಜಾಗೃತಿಯಿಲ್ಲದ ಕಾರಣ, ನಗರ, ಮಹಾನಗರ ಪಾಲಿಕೆ ಅಧಿಕಾರಿಗಳು ಲಂಗುಲಗಾಮಿಲ್ಲದೆ ಸ್ವೇಚ್ಛಾ ಪ್ರವೃತ್ತಿ ಮೇಲುಗೈ ಸಾಧಿಸಿದೆ. ತೆರಿಗೆದಾರರು ಚುನಾಯಿಸಿ ಕಳುಹಿಸಿರುವ ಪ್ರತಿನಿಧಿಗಳು ಬೇಜವಾಬ್ದಾರಿಯಿಂದ ವರ್ತಿಸುತ್ತಾರೆಂದು ಗಮನಕ್ಕೆ ಬಂದಿರುತ್ತದೆ.

ಇ) ಭಾರತೀಯ ದೂರವಾಣಿ ನಿಗಮದ ಉದ್ದೇಶಗಳು ತನ್ನ ಸಿಬ್ಬಂದಿ ವರ್ಗದ ಅರಿವಿಗೆ ಇರದಾರದೊಂದು ಸಮಸ್ಯೆಯಾಗಿ ಅದರ ಉದ್ದೇಶಗಳು ಈಡೇರುವಲ್ಲಿ ನಿಗಮ ಎಡವಿದೆ. ನಿಗಮವು ಹಾಕಿದ ನಿಬಂಧನೆಗಳು ಗ್ರಾಹಕರಿಗೆ ತಲುಪುವುದು ಅಸಾಧ್ಯ. ಹೀಗಾಗಿ ಗ್ರಾಹಕರ ದೂರುಗಳಿಗೆ ಸ್ಪಂದಿಸಿ ಗ್ರಾಹಕರನ್ನು ತೃಪ್ತಿ ಪಡಿಸುವಲ್ಲಿ ಸೋತಿದೆ.

ಈ) ಸಾರಿಗೆ ಇಲಾಖೆಯು ಮುಕ್ತರೂಪದ ಆಡಳಿತವನ್ನು ರೂಪಿಸಿಕೊಂಡು ಸಾರ್ವಜನಿಕವಾಗಿ ವಾಹನ ಬಳಕೆದಾರರಿಗೆ ಉತ್ತಮಸೇವೆ ಸಲ್ಲಿಸುತ್ತಿದೆ. ಸಾರಿಗೆ ಅದಾಲತ್ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯುತ್ತಿದ್ದು, ಇದಕ್ಕೆ ಸಾರ್ವಜನಿಕರಿಂದ ಉತ್ತಮ ಪ್ರತಿಕ್ರಿಯೆ ಕಂಡು ಬರುತ್ತಿದೆ. ಸಾರಿಗೆ ಇಲಾಖೆ, ಪೋಲಿಸ್ ಇಲಾಖೆ ಮತ್ತು ಆರೋಗ್ಯ ಇಲಾಖೆಗಳ ಸಹಯೋಗದೊಂದಿಗೆ ಕಾರ್ಯಾಚರಣೆ ಮಾಡಲು ಪಡೆಗಳನ್ನು ರಚಿಸಲಾಗಿದೆ.

ಉ) ವಿದ್ಯಾ ಇಲಾಖೆಯೂ ಕೂಡ ಗ್ರಾಹಕ ಸಂರಕ್ಷಣಾ ವ್ಯಾಪ್ತಿಯಲ್ಲಿ ಬರತೊಡಗಿದೆ. ಆದರೆ ವಿದ್ಯಾಸಂಸ್ಥೆಗಳ, ಎಲ್ಲ ಸೇವೆಗಳು ಈ ಕಾಯದೆ ವ್ಯಾಪ್ತಿಯಲ್ಲಿ ಬರುವುದಿಲ್ಲ. ಯಾವ ಸೇವೆಗಳನ್ನು ಕಾಯದೆಯ ಅನುಸಾರ ಅಳೆಯಲು ಸಾಧ್ಯವೊ ಅವುಗಳಿಗೆ ಗ್ರಾಹಕ ವೇದಿಕೆ ಪರಿಹಾರದ ವ್ಯವಸ್ಥೆ ಮಾಡುತ್ತದೆ. ಫೀ ಕೊಡದ ಸೇವೆಗಳ ನ್ಯೂನ್ಯತೆಗೆ ಕಾಯದೆಯಲ್ಲಿ

ಸ್ಥಾನವಿಲ್ಲ. ಶಿಕ್ಷಣಕ್ಕೆ ಸಂಬಂಧಿಸಿದ ದೂರುಗಳಿಗೆ ಬೇರೆ ಬೇರೆ ಗ್ರಾಹಕ ವೇದಿಕೆಗಳು ಬೇರೆ ಬೇರೆಯಾಗಿ ನಿರ್ಣಯ ಕೊಟ್ಟಿವೆ. ವಿದ್ಯಾಸಂಸ್ಥೆಗಳ ವ್ಯಾಜ್ಯಗಳನ್ನು ನಿರ್ಣಯಿಸುವಾಗ ಗ್ರಾಹಕ ವೇದಿಕೆಗಳು ಅಸ್ಪಷ್ಟತೆಯನ್ನು ಅಳವಡಿಸಿ ಗೊಂದಲ ಮೂಡಿಸಿವೆ.

ಊ) ಪರಿಸರ ಸಂರಕ್ಷಣೆಗೆ ಒಬ್ಬ ಜವಾಬ್ದಾರಿಯುತ ಗ್ರಾಹಕರಾಗಿ ನಾವು ನಮ್ಮ ಕರ್ತವ್ಯ ಪಾಲಿಸಬೇಕು. ಇದಕ್ಕೆ ತಪ್ಪಿದಾಗ ಗ್ರಾಹಕ ಕಾಯದೆ ಅಡಿಯಲ್ಲಿ ಗ್ರಾಹಕ ವೇದಿಕೆಯ ವಿಚಾರಣೆಗೆ ಗುರಿಯಾಗಬೇಕಾಗುತ್ತದೆ.

೩೫. ಕರ್ನಾಟಕ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ೧೩೫ ಗ್ರಾಹಕ ಸ್ವಯಂ ಸಂಸ್ಥೆಗಳಿಂದ ಕ್ರೋಢೀಕರಿಸಿದ ಮಾಹಿತಿಯನ್ನು ವಿಶ್ಲೇಷಿಸಿದಾಗ ಕೆಲವೊಂದು ಗಮನಾರ್ಹ ಸಂಗತಿಗಳು ಕಂಡು ಬಂದಿರುತ್ತವೆ. ಒಟ್ಟು ಜಿಲ್ಲೆಗಳಲ್ಲಿ ಕೇವಲ ೬ ಜಿಲ್ಲೆಗಳು ಶೇ ೫೦ ರಷ್ಟು ಗ್ರಾಹಕ ಸ್ವಯಂ ಸಂಸ್ಥೆಗಳನ್ನು ಹೊಂದಿವೆ. ಅದರಲ್ಲಿ ಪ್ರತಿ ಸಂಸ್ಥೆಗೆ ಕನಿಷ್ಟ ಸರಾಸರಿ ಜನಸಂಖ್ಯೆಯನ್ನು (೮೪೬೧೫) ಹೊಂದಿದ ಚಿಕ್ಕಬಳ್ಳಾಪೂರ ಜಿಲ್ಲೆ ಪ್ರಥಮ ಸ್ಥಾನದಲ್ಲಿದೆ. ಆದರೆ ಅಧ್ಯಯನಕ್ಕೊಳಪಡಿಸಿದ ಬೆಳಗಾವಿ ಜಿಲ್ಲೆಯು ಜನಸಂಖ್ಯೆಯಲ್ಲಿ ಎರಡನೆಯ ದೊಡ್ಡ ಜಿಲ್ಲೆಯಾದರೂ ಕೇವಲ ಒಂದೇ ಸ್ವಯಂ ಸಂಸ್ಥೆಯನ್ನು ಹೊಂದಿದ್ದು ಕಂಡು ಬರುತ್ತದೆ. ಈಲ್ಲೆಯ ನಾಗರಿಕರಿಗೆ ಗ್ರಾಹಕ ಸ್ವಯಂ ಸಂಸ್ಥೆಗಳಿಂದ ಆಗುವ ಪ್ರಯೋಜನಗಳ ಬಗ್ಗೆ ಆಸಕ್ತಿ ಇಲ್ಲದಿರುವುದು ಕಂಡು ಬರುತ್ತದೆ. (ಕೋಷ್ಠಕ ೬.೧)

೩೬. ಒಟ್ಟು ೧೩೫ ಸಂಸ್ಥೆಗಳಲ್ಲಿ ಕೇವಲ ೭೨ ಸಂಸ್ಥೆಗಳು ಪ್ರಶ್ನಾವಳಿಯನ್ನು ಭರ್ತಿ ಮಾಡಿ ಸಕಾರಾತ್ಮಕವಾಗಿ ಸ್ಪಂದಿಸಿವೆ. ಉಳಿದ ಸಂಸ್ಥೆಗಳು ಯಾವುದೇ ಪ್ರತಿಕ್ರಿಯೆಯನ್ನು ನೀಡದಿರುವುದು ಸಂಶೋಧನೆಗೆ ಪ್ರೇರಣೆಯ ಕೊರತೆ ಕಾಣುತ್ತದೆ. (ಕೋಷ್ಠಕ ೬.೨)

೩೭. ರಾಜ್ಯದಲ್ಲಿ ಶೇ ೭೫ರಷ್ಟು ಗ್ರಾಹಕ ಸಂಘ ಸಂಸ್ಥೆಗಳು ಹತ್ತು ವರ್ಷಕ್ಕೂ ಮೇಲ್ಪಟ್ಟು ಗ್ರಾಹಕರ ಸಹಾಯಕ್ಕೆ ನಿಂತಿವೆ. (ಕೋಷ್ಠಕ ೬.೩) ಎಲ್ಲ ಸಂಸ್ಥೆಗಳು ಸೊಸೈಟಿ ಕಾಯದೆಯ ಅಡಿಯಲ್ಲಿ ನೋಂದಣಿಯಾಗಿ ಕಾಯದೆಯ ನಿರ್ಬಂಧನೆಗಳನ್ನು ಅನುಸರಿಸುತ್ತ ಶಿಸ್ತಿನಿಂದ ಕಾರ್ಯ ಮಾಡುತ್ತಿರುವುದು ಕಂಡು ಬರುತ್ತವೆ. (ಕೋಷ್ಠಕ ೬.೪)

೩೮. ಶೇ ೬೩ರಷ್ಟು ಗ್ರಾಹಕ ಸ್ವಯಂ ಸಂಸ್ಥೆಗಳು, ಎರಡು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯಿರುವ ಪ್ರದೇಶಗಳಲ್ಲಿ ಕಾರ್ಯಗೈಯಿತ್ತಿರುವುದು ಕಂಡು ಬರುತ್ತದೆ (ಕೋ.೬.೫). ಶೇ ೯೧ ರಷ್ಟು ಸಂಸ್ಥೆಗಳಲ್ಲಿ ಕನಿಷ್ಟ ೫ ರಿಂದ ಗರಿಷ್ಟ ೨೦ ರ ವರೆಗೆ ಸಿಬ್ಬಂದಿ ಕಾರ್ಯ ನಿರ್ವಹಿಸುತ್ತಿರುವುದು ತಿಳಿದು ಬಂದಿದೆ. (ಕೋಷ್ಠಕ ೬.೬)

೩೯. ಎಲ್ಲ ಗ್ರಾಹಕ ಸಂಸ್ಥೆಗಳು ಗ್ರಾಹಕರಿಗೆ ನ್ಯಾಯ ಒದಗಿಸಲು ಸಹಾಯ ಮಾಡುತ್ತಿವೆ. ಈ ಸಂಸ್ಥೆಗಳು ಸಾಮಾನ್ಯ ವ್ಯಾಜ್ಯಗಳು ಏಕವ್ಯಕ್ತಿ ವ್ಯಾಜ್ಯಗಳು ಹಾಗೂ ಎರಡು ತರಹದ ವ್ಯಾಜ್ಯಗಳನ್ನು ಗ್ರಾಹಕ ವೇದಿಕೆಗೆ ತೆಗೆದುಕೊಂಡು ಹೋಗಿ ಗ್ರಾಹಕರಿಗೆ ಸಹಾಯ ಮಾಡುತ್ತಿವೆ.(ಕೋಷ್ಟಕ ೬.೭). ಶೇ ೫೮ ರಷ್ಟು ಗ್ರಾಹಕ ಸಂಸ್ಥೆಗಳು ೧೫೦ ಕ್ಕಿಂತ ಅಧಿಕ ಸಂಖ್ಯೆಯ ಸದಸ್ಯರನ್ನು ಹೊಂದಿರುತ್ತವೆ. (ಕೋಷ್ಟಕ ೬.೮) ಸಂಸ್ಥೆಗಳ ಸದಸ್ಯರ ಶಿಕ್ಷಣದ ವಿವರವನ್ನು ಪರಿಶೀಲಿಸಿದಾಗ ಸದಸ್ಯರಲ್ಲಿ ಎಸ್.ಎಸ್.ಎಲ್.ಸಿ ಕ್ಕಿಂತ ಕಡಿಮೆ ಎಸ್.ಎಸ್.ಎಲ್.ಸಿ. ಆದವರು ಪದವಿಧರರು, ಸ್ನಾತಕೋತ್ತರ ಪದವಿ ಹೊಂದಿದವರು ಇದ್ದಾರೆ. ಇದರಿಂದ ಸಂಸ್ಥೆಯ ಯಾವುದೇ ಕೆಲಸವನ್ನು ಮಾಡುವ ವಿಶ್ವಾಸ ಬರುತ್ತದೆ. ಸಂಸ್ಥೆಗಳಲ್ಲಿ ವಿವಿಧ ವೃತ್ತಿಯ ಜನರು ಸದಸ್ಯರಾಗಿದ್ದಾರೆ. (ಕೋಷ್ಟಕ ೬.೯) ಸದಸ್ಯರಲ್ಲಿ ಗೃಹಿಣಿಯರು ಹಾಗೂ ವಿದ್ಯಾರ್ಥಿಗಳು ಇದ್ದಾರೆ.(ಕೋಷ್ಟಕ–೬.೧೦)

೪೦. ಅಧ್ಯಯನಕ್ಕೆ ಸ್ಪಂದಿಸಿದ ೭೨ ಗ್ರಾಹಕ ಸ್ವಯಂ ಸಂಸ್ಥೆಗಳ ಮುಂಗಡ ಪತ್ರದ ವಿವರ ನೋಡಿದಾಗ, ೨೦೦೫ ರಲ್ಲಿ ೫೩ ಸಂಸ್ಥೆಗಳು, ೨೦೦೬ ರಲ್ಲಿ ೪೯ ಸಂಸ್ಥೆಗಳು, ೨೦೦೮ ರಲ್ಲಿ ೫೫ ಸಂಸ್ಥೆಗಳು ಹಾಗೂ ೨೦೦೯ ರಲ್ಲಿ ೫೭ ಸಂಸ್ಥೆಗಳು ಅಂದಾಜು ಪತ್ರಿಕೆಯನ್ನು ತಯಾರಿಸಿವೆ. ಉಳಿದ ಸಂಸ್ಥೆಗಳು ಪತ್ರಿಕೆಯನ್ನು ತಯಾರಿಸುವುದೆಡೆಗೆ ಒಲವು ತೋರಿಸಿಲ್ಲ. ಸಂಸ್ಥೆಗಳು ರಾಜ್ಯಮಟ್ಟದ ಚಳುವಳಿಯಲ್ಲಿ ಹಾಗೂ ರಾಷ್ಟ್ರಮಟ್ಟದ ಚಳುವಳಿಯಲ್ಲಿ ಭಾಗವಹಿಸುತ್ತವೆ. ಸಂಸ್ಥೆಗಳಿಗೆ ಯಾವುದೇ ಆರ್ಥಿಕ ಸೌಲಭ್ಯ ದೊರೆಯದಿದ್ದರೂ ಬಾಡಿಗೆ ಕಟ್ಟಡದಲ್ಲಿ, ಸದಸ್ಯರ ಮನೆಗಳಲ್ಲಿ ಅಥವಾ ಸಂಸ್ಥೆಯ ಸ್ವಂತ ಕಟ್ಟಡದಲ್ಲಿ ಅಥವಾ ಸದಸ್ಯರ ಮನೆಗಳಲ್ಲಿ ಅಥವಾ ಸಂಸ್ಥೆಯ ಕಛೇರಿಯ ಕೆಲಸವನ್ನು ನಡೆಸಿಕೊಂಡು ಹೋಗುತ್ತಿವೆ. ಆರ್ಥಿಕವಾಗಿ ತೊಂದರೆ ಅನುಭವಿಸುತ್ತಿದ್ದರೂ ಕಛೇರಿ ಕೆಲಸವನ್ನು ಮಾಡಲು ಸಂಸ್ಥೆಗಳು ನೌಕರರನ್ನು ನೇಮಿಸಿ ಸಂಬಳ ಕೊಡುತ್ತಿವೆ. ಈ ನೌಕರರಲ್ಲಿ ಸ್ವಲ್ಪ ಸಂಖ್ಯೆಯಲ್ಲಿ ಪೂರ್ಣಾವಧಿಯ ಪ್ರಮಾಣದ ನೌಕರರಾದರೆ, ಹೆಚ್ಚಿನ ಸಂಖ್ಯೆಯ ನೌಕರರು ಅರೆಕಾಲಿಕ ನೌಕರರಾಗಿದ್ದಾರೆ. (ಕೋಷ್ಟಕ ೬.೧೧ ರಿಂದ ೬.೧೫)

೪೧. ಗ್ರಾಹಕ ಸಂಘ ಸಂಸ್ಥೆಗಳ ಸಮಸ್ಯೆಗಳನ್ನು ಅರಿತುಕೊಳ್ಳಲು ಕೇಳಿದ ಪ್ರಶ್ನೆಗೆ ಈ ಸಂಸ್ಥೆಗಳು ಎಲ್ಲ ತರಹದ ತೊಂದರೆ ಅನುಭವಿಸುತ್ತಿರುವುದು ಕಂಡು ಬಂದಿತು. ಹಣಕಾಸಿನ ತೊಂದರೆಯ ಜೊತೆಗೆ, ಸರಕಾರದ ನಿರ್ಲಕ್ಷದ ಕುರಿತು ಮಾಹಿತಿ ನೀಡಿದ್ದಾರೆ. ಕೆಲವು ಸಂಸ್ಥೆಗಳಿಗೆ ಸದಸ್ಯರ ಕೊರತೆ ಇದೆ. ಇನ್ನೂ ಕೆಲವು ಸಂಸ್ಥೆಗಳಿಗೆ ಸಾರ್ವಜನಿಕರ ಬೆಂಬಲ ಇಲ್ಲ. ಸಾರ್ವಜನಿಕ ಪ್ರತಿನಿಧಿಗಳ ಬೆಂಬಲದ ಕೊರತೆ ಕೂಡ ಇದೆ. ಹಲವು ಸಂಸ್ಥೆಗಳು, ಗ್ರಾಹಕರು ಸರಿಯಾಗಿ ಸ್ಪಂದಿಸುವುದಿಲ್ಲ ಎನ್ನುವ ನೋವನ್ನು ತೋಡಿಕೊಂಡಿದ್ದಾರೆ. (ಕೋಷ್ಟಕ ೬.೧೬)

೪೨. ಅಧ್ಯಯನಕ್ಕೆ ಸ್ಪಂದಿಸಿದ ಸಂಸ್ಥೆಗಳಲ್ಲಿ ಗ್ರಾಹಕ ಜಿಲ್ಲಾ ವೇದಿಕೆ (ಶೇ.೯೬) ರಾಜ್ಯ ಆಯೋಗ(ಶೇ.೬೧) ಹಾಗೂ ರಾಷ್ಟ್ರೀಯ ಆಯೋಗ (ಶೇ.೨೮) ಮೂರು ನ್ಯಾಯಾಲಯಗಳ ಜೊತೆ ಸ್ಪಂದಿಸಿ ಕೆಲಸ ಮಾಡುತ್ತಿವೆ. ಆದರೆ ರಾಷ್ಟ್ರ ಆಯೋಗದ ಜೊತೆ ಕೆಲಸ ಮಾಡುವ ಸಂಸ್ಥೆಗಳು ಕೆಲವೇ ಕೆಲವು. (ಕೋಷ್ಟಕ ೬.೧೭)

೪೩. ಈ ಗ್ರಾಹಕ ಸಂಸ್ಥೆಗಳು ಸ್ಥಾಪನೆಯಾದಾಗಿನಿಂದ ೩೧.೦೨.೨೦೦೯ ರ ವರೆಗೆ ಜಿಲ್ಲಾ ವೇದಿಕೆಗೆ ಹೆಚ್ಚಿನ ಗ್ರಾಹಕ ವ್ಯಾಜ್ಯಗಳನ್ನು (ಸರಾಸರಿ ೩೮ ವ್ಯಾಜ್ಯಗಳು) ದಾಖಲು ಮಾಡಲು ಗ್ರಾಹಕರಿಗೆ ಸಹಾಯ ಮಾಡಿವೆ. ರಾಜ್ಯ ಆಯೋಗಕ್ಕೂ ಕೂಡ ಸರಾಸರಿ ೪ ವ್ಯಾಜ್ಯಗಳಂತೆ ದಾಖಲು ಮಾಡಲು ಸಹಾಯ ಮಾಡಿವೆ. ಆದರೆ ಸರಾಸರಿ ಒಂದು ವ್ಯಾಜ್ಯವನ್ನು ರಾಷ್ಟ್ರೀಯ ಆಯೋಗಕ್ಕೆ ತೆಗೆದುಕೊಂಡು ಹೋಗಿದ್ದು ಕಂಡುಬರುವುದಿಲ್ಲ. (ಕೋಷ್ಟಕ ೬.೧೮)

೪೪. ಗ್ರಾಹಕ ವೇದಿಕೆಯ ಕಾರ್ಯ ವೈಖರಿ ಕುರಿತು ಸಂಸ್ಥೆಗಳ ಅಭಿಪ್ರಾಯ ಕೇಳಿದ ಪ್ರಶ್ನೆಗೆ, ೬೯ ಸಂಸ್ಥೆಗಳು ಉತ್ತರಿಸಿವೆ. ಅದರಲ್ಲಿ ೫೬ ಸಂಸ್ಥೆಗಳು ತೃಪ್ತಿಯನ್ನು ವ್ಯಕ್ತಪಡಿಸಿವೆ. ಕೇವಲ ನಾಲ್ಕು ಸಂಸ್ಥೆಗಳು ಉತ್ತಮವೆಂದು ಹೇಳಿವೆ. ೯ ಸಂಸ್ಥೆಗಳು (೯) ಅತೃಪ್ತಿಕರವೆಂದು ಅಭಿಪ್ರಾಯ ವ್ಯಕ್ತಪಡಿಸಿವೆ. (ಕೋಷ್ಟಕ ೬.೧೯)

೪೫. ಗ್ರಾಹಕ ಸ್ವಯಂ ಸಂಸ್ಥೆಗಳಲ್ಲಿ ಪ್ರಕಟಣೆ ಕುರಿತು ಕೇಳಿದ ಪ್ರಶ್ನೆಗೆ ೭೧ ಸಂಸ್ಥೆಗಳು ಉತ್ತರಿಸಿವೆ. ಇವುಗಳಲ್ಲಿ ಶೇ ೮೩ ರಷ್ಟು ಸಂಸ್ಥೆಗಳು ಯಾವುದೇ ಪ್ರಕಟಣೆ ಮಾಡದಿರುವುದು ಖೇದಕರ. (ಕೋಷ್ಟಕ ೬.೨೦)

೪೬. ಗ್ರಾಹಕ ಸ್ವಯಂ ಸಂಸ್ಥೆಗಳಿಗೆ ಗ್ರಾಹಕರ ಅಭಿಪ್ರಾಯದ ಬಗ್ಗೆ ಕೇಳಿದಾಗ, ಸಹಜವಾಗಿ ಅವುಗಳ ಉತ್ತರ, ತೃಪ್ತಿಕರ ಹಾಗೂ ಉತ್ತಮವೆಂದಿರುತ್ತದೆ. ಆದರೆ ಕೆಲವು ಸಂಸ್ಥೆಗಳು ಅತೃಪ್ತಿಕರವೆಂದು ಉತ್ತರಿಸಿ ಪ್ರಾಮಾಣಿಕತೆ ಮೆರೆದಿವೆ. ಗ್ರಾಹಕ ಸಂಸ್ಥೆಗಳು ಬೇರೆ ಗ್ರಾಹಕರ ಸಂಸ್ಥೆಗಳ ಜೊತೆ ಸಂಬಂಧ ಇಟ್ಟುಕೊಂಡು ಅವುಗಳ ಸಹಾಯ ತೆಗೆದುಕೊಂಡು ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಿವೆ. ಹಾಗೆಯೇ ಈ ಸಂಸ್ಥೆಗಳು ರೋಟರಿ ಕ್ಲಬ್, ಲಾಯನ್ಸ ಕ್ಲಬ್ ಹಾಗೂ ಮಹಿಳಾ ಮಂಡಳ ಮುಂತಾದ ಸರಕಾರೇತರ ಸಂಸ್ಥೆಗಳ ಜೊತೆ ಗ್ರಾಹಕರಿಗೆ ಅನ್ವಯಿಸುವ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿವೆ. ಈ ಗ್ರಾಹಕ ಸ್ವಯಂ ಸಂಸ್ಥೆಗಳು ಚಟುವಟಿಕೆಯಿಂದ ಕೂಡಿದ್ದು ಪ್ರತಿವರ್ಷ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. (ಕೋಷ್ಟಕ ೬.೨೧ ರಿಂದ ೬.೨೪)

೪೭. ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ವ್ಯಾಜ್ಯ ದಾಖಲಿಸಿದ, ಬೆಳಗಾವಿ ಜಿಲ್ಲೆಯಲ್ಲಿರುವ ಗ್ರಾಹಕರಿಂದ ಮಾಹಿತಿ ಸಂಗ್ರಹಿಸಿ ೭ ನೇ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ವ್ಯಾಜ್ಯ ದಾಖಲಿಸಿದ ಗ್ರಾಹಕರಲ್ಲಿ ೬೮% ಪುರುಷರು ಹಾಗೂ ೩೨% ಸ್ತ್ರೀಯರಿದ್ದಾರೆ. ಆದ್ದರಿಂದ ಗ್ರಾಹಕ ವೇದಿಕೆಯ ಮೇಲೆ ಸ್ತ್ರೀಯರು ವಿಶ್ವಾಸ ಪಟ್ಟಿದ್ದಾರೆ. ಗ್ರಾಹಕರ ವಯಸ್ಸನ್ನು ಪರಿಶೀಲಿಸಿದಾಗ, ಪ್ರಬುದ್ಧ ಜನರೇ ಗ್ರಾಹಕ ವೇದಿಕೆಯಲ್ಲಿ ವ್ಯಾಜ್ಯವನ್ನು ದಾಖಲಿಸಿದ್ದಾರೆ. ಅವರಿಂದ ಬರುವ ಪಕ್ವ ಅನುಭವಗಳು ಅಧ್ಯಯನಕ್ಕೆ ಸಹಾಯಕವಾಗಿದೆ. ಈ ಗ್ರಾಹಕರಲ್ಲಿ ೩೨ ಜನರು ಗೃಹಿಣಿಯರಿದ್ದಾರೆ. ಉಳಿದವರು ಎಲ್ಲ ತರಹದ ಜನರಿದ್ದಾರೆ. ಅಧ್ಯಯನಕ್ಕೆ ಆಯ್ದುಕೊಂಡ ಎಲ್ಲ ಗ್ರಾಹಕರು ಅಕ್ಷರಸ್ಥರೆ ಎಸ್.ಎಸ್.ಎಲ್.ಸಿ.ಯಿಂದ ಸ್ನಾತಕೋತ್ತರ ಪದವಿಧರರು ವೈದ್ಯರು, ವಕೀಲರೂ ಇದ್ದಾರೆ. ಮೊಕದ್ದಮೆ ದಾಖಲಿಸಿದ ಗ್ರಾಹಕರೆಲ್ಲ ಉತ್ತಮವಾದ ಆದಾಯವಿರುವ ಕುಟುಂಬದಿಂದ ಬಂದವರಿದ್ದಾರೆ. ಅವರಿಗೆ ಗ್ರಾಹಕ ವೇದಿಕೆ ಕೊಡಿಸುವ ಪರಿಹಾರಕ್ಕಿಂತ ಅನ್ಯಾಯದ ವಿರುದ್ದ ಹೋರಾಡುವುದಾಗಿದೆ. ಹೆಚ್ಚಿನ ಗ್ರಾಹಕರು ನಾಲ್ಕಕ್ಕಿಂತ ಹೆಚ್ಚಿನ ಹಾಗೂ ೧೨ ಕ್ಕಿಂತ ಕಡಿಮೆ ಕುಟುಂಬದ ಸದಸ್ಯರನ್ನು ಹೊಂದಿದ ಕುಟುಂಬದಿಂದ ಬಂದವರಿದ್ದಾರೆ. (ಕೋಷ್ಟಕ ೭.೨ ರಿಂದ ೭.೭ ರ ವರೆಗೆ)

೪೮. ಆಯ್ದುಕೊಂಡ ಮೊಕದ್ದಮೆ ದಾಖಲಿಸಿದ ಗ್ರಾಹಕರಲ್ಲಿ ಶೇ. ೯೫ ರಷ್ಟು ಏಕವ್ಯಕ್ತಿ ಪರ ವ್ಯಾಜ್ಯದ ಲಕ್ಷಣ ಹೊಂದಿದವರಿದ್ದಾರೆ. ಸಾಮಾನ್ಯ ವ್ಯಾಜ್ಯದ ಲಕ್ಷಣ ಹೊಂದಿದವರಲ್ಲಿ ಕೇವಲ ಶೇ ೫ ರಷ್ಟು ಗ್ರಾಹಕರಿದ್ದಾರೆ. (ಕೋಷ್ಠಕ ೭.೮)

೪೯. ಖೇದದ ಸಂಗತಿ ಎಂದರೇ ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಈ ಐದು ವರ್ಷಗಳಲ್ಲಿ ದಾಖಲಾದ ವ್ಯಾಜ್ಯಗಳಲ್ಲಿ ಶೇ.೭೯ ರಷ್ಟು ವ್ಯಾಜ್ಯಗಳು ಖಾಸಗಿ ಹಣಕಾಸು ಸಂಸ್ಥೆಗಳ ವಿರುದ್ದ, ಠೇವಣಿ ಹಣ ವಾಪಸಾತಿಗೆ ಸಂಬಂಧಿಸಿದ್ದಾಗಿವೆ. ಆದ್ದರಿಂದ ಗ್ರಾಹಕ ವೇದಿಕೆಯ ಇತರ ಉದ್ದೇಶಗಳ ಬಗ್ಗೆ ಗ್ರಾಹಕರಲ್ಲಿ ಜಾಗೃತಿ ಆಗಬೇಕಾಗಿದೆ. (ಕೋಷ್ಠಕ ೭.೧೦)

೫೦. ಆಯ್ದುಕೊಂಡ ಗ್ರಾಹಕರ ವ್ಯಾಜ್ಯಗಳು ೮ ವಿವಿಧ ಇಲಾಖೆಗಳ ಪ್ರತಿವಾದಿಗಳಿಗೆ ಅಂದರೆ ವಿಮಾ, ಟೆಲಿಕಾಂ, ಅಂಚೆ, ವಿದ್ಯುತ್ಕ್, ಮೆಡಿಕಲ್, ರಸ್ತೆ ಸಾರಿಗೆ, ವಿದ್ಯಾ ಸಂಸ್ಥೆ ಮತ್ತು ಇತರರಿಗೆ ಸಂಬಂಧಿಸಿದ್ದಾಗಿವೆ. (ಕೋಷ್ಠಕ ೭.೧೧)

೫೧. ಮೊಕದ್ದಮೆ ದಾಖಲಿಸಿದ ಒಟ್ಟು ಗ್ರಾಹಕರಲ್ಲಿ ಶೇ ೮೭ ರಷ್ಟು ಗ್ರಾಹಕರು ವಕೀಲರ ಸಹಾಯದಿಂದಲೇ ಮೊಕದ್ದಮೆ ಹೂಡಿದ್ದು ಕಂಡು ಬರುತ್ತದೆ. ಕೇವಲ ಶೇ ೧೩ ರಷ್ಟು ಗ್ರಾಹಕರು ಸ್ವತಃ ತಾವೇ ವ್ಯಾಜ್ಯಗಳನ್ನು ಗ್ರಾಹಕ ವೇದಿಕೆಯಲ್ಲಿ ದಾಖಲಿಸುವ ಧೈರ್ಯ ಮಾಡಿದ್ದಾರೆ (ಕೋಷ್ಠಕ ೭.೧೨)

೫೨. ಗ್ರಾಹಕ ಸಂರಕ್ಷಣಾ ಕಾನೂನಿನ ಕಲಂ ೨೬ ಅನ್ವಯ ಗ್ರಾಹಕ ವೇದಿಕೆಗೆ ವ್ಯಾಜ್ಯದ ಅರ್ಜಿಯನ್ನು ದಾಖಲಿಸಲು ಕನಿಷ್ಠ ಶುಲ್ಕವನ್ನು ಗ್ರಾಹಕರು ಕೊಡಬೇಕಾಗುತ್ತದೆ. ಬೆಳಗಾವಿ

ಗ್ರಾಹಕ ವೇದಿಕೆಯಲ್ಲಿ ಗ್ರಾಹಕ ವೇದಿಕೆಯ ಶುಲ್ಕದ ಜೊತೆಗೆ ಇತರ ಖರ್ಚಿಗೂ ಕೂಡ ಗ್ರಾಹಕರು ಹಣ ಕೊಟ್ಟಿದ್ದಾರೆ. ಈ ಕುರಿತು ಗ್ರಾಹಕರನ್ನು ವಿಚಾರಿಸಿದಾಗ, ಶುಲ್ಕವಲ್ಲದೇ ಗ್ರಾಹಕರ ಪರವಾಗಿ ವಾದಿಸಿದ ವಕೀಲರ ಫೀ ಸಹಿತ ಗ್ರಾಹಕರು ಕೊಟ್ಟಿದ್ದು ತಿಳಿದು ಬಂದಿದೆ. (ಕೋಷ್ಠಕ ೭.೧೩)

೫೩. ಮೊಕದ್ದಮೆ ದಾಖಲು ಮಾಡಿದ ಗ್ರಾಹಕರನ್ನು ಗ್ರಾಹಕ ವೇದಿಕೆಯ ಕುರಿತು ವಿಚಾರಿಸಿದಾಗ ೭೯ ಗ್ರಾಹಕರು ವೇದಿಕೆಯ ಕಾರ್ಯ ತೃಪ್ತಿ ತಂದಿದೆಯೆಂದು ಅಭಿಪ್ರಾಯ ನೀಡಿದ್ದಾರೆ. ಇನ್ನುಳಿದ ೩೧ ಗ್ರಾಹಕರು ಅತೃಪ್ತಿ ಹೊಂದಿದಕ್ಕೆ ಕಾರಣಗಳನ್ನು ಕಲೆ ಹಾಕುವುದು ಅವಶ್ಯಕತೆ ಇದೆ. (ಕೋಷ್ಠಕ ೭.೧೪)

೫೪. ಬೆಳಗಾವಿ ಗ್ರಾಹಕ ವೇದಿಕೆಯಲ್ಲಿ ಶೇ. ೯೧ ರಷ್ಟು ಗ್ರಾಹಕರ ಪರವಾಗಿ ವ್ಯಾಜ್ಯಗಳು ಇತ್ಯರ್ಥಗೊಂಡಿದ್ದರೆ, ಕೇವಲ ಶೇ.೯ರಷ್ಟು ಗ್ರಾಹಕರು ಸೋಲು ಅನುಭವಿಸಿದ್ದು ಕಂಡು ಬರುತ್ತದೆ. ಶೇ ೮೦ ರಷ್ಟು ವ್ಯಾಜ್ಯಗಳನ್ನು ಮೂರು ತಿಂಗಳೊಳಗೆ ಇತ್ಯರ್ಥಗೊಳಿಸಲಾಗಿದೆ. ಇತ್ಯರ್ಥಗೊಂಡ ವ್ಯಾಜ್ಯಗಳ ತೀರ್ಪು ಶೇ.೯೧ ಗ್ರಾಹಕರಲ್ಲಿ ತೃಪ್ತಿ ತಂದಿದೆ.(ಕೋಷ್ಠಕ ೭.೧೫ ರಿಂದ ೭.೧೭)

೫೫. ಇನ್ನುಳಿದ ಸಂಗ್ರಹಿತ ಮಾಹಿತಿಯಿಂದ ಕಂಡು ಬರುವುದೇನೆಂದರೆ, ಬೆಳಗಾವಿ ಗ್ರಾಹಕ ವೇದಿಕೆ ಗ್ರಾಹಕರ ಪರವಾಗಿದ್ದು ತೀವ್ರಗತಿಯಲ್ಲಿ ನ್ಯಾಯ ಒದಗಿಸುವಲ್ಲಿ ಸಫಲವಾಗಿದೆ. ಹಾಗೆಯೇ ಎಲ್ಲ ಗ್ರಾಹಕರು ಗ್ರಾಹಕ ವೇದಿಕೆ ಬೇಕು, ಅದು ಇನ್ನಷ್ಟು ಅಭಿವೃದ್ಧಿ ಹೊಂದಬೇಕು ಎನ್ನುವ ಅಭಿಪ್ರಾಯ ಹೊಂದಿದ್ದಾರೆ. ಸರಕಾರ ಹಮ್ಮಿಕೊಳ್ಳುವ ಗ್ರಾಹಕ ಸಂರಕ್ಷಣೆ ಕಾರ್ಯಕ್ರಮಗಳ ಕುರಿತು ಗ್ರಾಹಕರಿಗೆ ಅಸಮಾಧಾನ ಇದೆ. ಆದರೇ ಬೆಳಗಾವಿ ಜಿಲ್ಲೆಯಲ್ಲಿ ಆಯ್ದುಕೊಂಡ ಗ್ರಾಹಕರು ಗ್ರಾಹಕ ಸ್ವಯಂ ಸಂಘಗಳ ಸದಸ್ಯರಾಗಿಲ್ಲ ಅಲ್ಲದೆ ಗ್ರಾಹಕರಿಗೆ ಗ್ರಾಹಕ ಪತ್ರಿಕೆಗಳನ್ನು ಓದುವ ಹವ್ಯಾಸವಿಲ್ಲ. (ಕೋಷ್ಠಕ ೭.೧೮ ರಿಂದ ೭.೨೧)

೫೬. ಅಧ್ಯಯನದ ೮ನೇ ಅಧ್ಯಾಯವು ಚಿಕ್ಕೋಡಿ ತಾಲೂಕಿನ ೪ ಹೋಬಳಿಗಳಲ್ಲಿರುವ ಹಳ್ಳಿಗಳಿಂದ ನಾಲ್ಕನೂರು ಸಾಮಾನ್ಯ ಗ್ರಾಹಕರನ್ನು ಆಯ್ದುಕೊಂಡು ಸಂದರ್ಶನ ಮಾಡಿ ಮಾಹಿತಿ ಸಂಗ್ರಹಿಸಿ ವಿಂಗಡಿಸಲಾದ ವಿವರ ಒಳಗೊಂಡಿದೆ. ಆಯ್ಕೆ ಮಾಡಿಕೊಂಡ ಗ್ರಾಹಕರಲ್ಲಿ ರೈತರು ೫೪% ಇದ್ದಾರೆ. ಗ್ರಹಿಣಿಯರು ೯% ಇದ್ದಾರೆ. ಉಳಿದ ಗ್ರಾಹಕರು ವ್ಯಾಪಾರಿಗಳು, ನೌಕರಿ ಮಾಡುವವರ ಹಾಗೂ ಇನ್ನಿತರ ವೃತ್ತಿಯಲ್ಲಿ ಇದ್ದಾರೆ. ಗ್ರಾಹಕರ ಕುಟುಂಬದ ಆದಾಯವನ್ನು ವಿಂಗಡಿಸಿದಾಗ ೫೭% ದಷ್ಟು ಗ್ರಾಹಕರ ಆದಾಯ ಅತ್ಯಂತ ಕಡಿಮೆ ಇದೆ. ೧೬% ದಷ್ಟು ಗ್ರಾಹಕರು ಅತ್ಯಂತ ಹೆಚ್ಚಿನ ಆದಾಯವಿರುವ ಕುಟುಂಬದಿಂದ ಬಂದಿದ್ದಾರೆ. ಕಡಿಮೆ ಆದಾಯ

